# ಸಮಗ್ರ ಸಾಹಿತ್ಯ

## ಸಂಪುಟ - ೭

## (ರೂಪಕ ಮತ್ತು ನಾಟಕಗಳು)

**ಗೌರೀಶ ಕಾಯ್ಕಿಣಿ**




೧೯೯೮

"SAMAGRA SAHITYA" by Gourish Kaikini, Gokarn. Edited by Vishnu Naik Ankola and Published by Shri Raghavendra Prakashana Ambarakodla, Ankola-581314 (Karnataka). First Impression: March, 1998, Copies: 1000 Pages : 390 +4, Price: 150-00

ಬೆಲೆ : ೧೫೦ ರೂಪಾಯಿಗಳು.



ಸಂಪಾದಕ : ವಿಷ್ಣು ನಾಯ್ಕ



ಛಾಯಾಮುದ್ರಣ (ಡಿ.ಟಿ.ಪಿ.) : ಟೈಪ್‌ಶಾಪ್, ಮಿಶನ್ ರೋಡ, ಬೆಂಗಳೂರು - ೨೭.

ಮುದ್ರಣ : ಬೃಂದಾವನ ಪ್ರಿಂಟರ್ಸ್ ಎಂಡ್ ಪಬ್ಲಿಷರ್ಸ್ ಪ್ರೈ.ಲಿ., ಲಾಲಬಾಗ ಫೋರ್ಟ ರೋಡ್, ಬೆಂಗಳೂರು - ೪

# ಮೊದಲ ಮಾತು

ನಮ್ಮ ನಡುವಿನ ಹಿರಿಯ ವಿಚಾರವಾದಿ ಸಾಹಿತ್ಯವಿದ್ವಾಂಸರಲ್ಲಿ ಒಬ್ಬರಾದ ಗೌರೀಶ ಕಾಯ್ಕಿಣಿಯವರ 'ಸಮಗ್ರ ಸಾಹಿತ್ಯ'ದ ಏಳನೆಯ ಸಂಪುಟವನ್ನು ಸಹೃದಯ ಓದುಗರ ಕೈಗೆ ಒಪ್ಪಿಸುತ್ತಿದ್ದೇವೆ. ಹರಿದು ಹಂಚಿಹೋಗಿರುವ ಗೌರೀಶರ ಸಾಹಿತ್ಯವನ್ನು ಹತ್ತು ಸಂಪುಟಗಳಲ್ಲಿ ಪ್ರಕಟಿಸಬೇಕೆಂಬ ಸಂಕಲ್ಪದೊಂದಿಗೆ ೧೯೯೨ರಲ್ಲಿ ಕಾರ್ಯಾರಂಭ ಮಾಡಿದೆವು. ಐದು ವರ್ಷದೊಳಗೆ ಈ ಯೋಜನೆ ಮುಗಿಯಬೇಕೆಂಬುದು ನಮ್ಮ ಸಂಕಲ್ಪವಾಗಿತ್ತು. ಆದರೆ ಐದು ವರ್ಷಗಳಲ್ಲಿ ಏಳು ಸಂಪುಟಗಳನ್ನು ಮಾತ್ರ ಹೊರತರಲು ಸಾಧ್ಯವಾಗಿದೆ. ಹಿಂದಿನ ಸಂಪುಟಗಳಿಗೆ ನಾವು ತೊಡಗಿಸಿದ ಹಣವು ನಿರೀಕ್ಷಿಸಿದ ಅವಧಿಯೊಳಗಾಗಿ ಮರಳಿ ಬರದೇ ಇದ್ದುದೇ ಈ ವಿಳಂಬಕ್ಕೆ ಕಾರಣವಾಗಿದೆ.

ಈ ಸಂಪುಟದ ಕುರಿತು ಮಾತನಾಡುವ ಮೊದಲು ಹಿಂದಿನ ಆರು ಸಂಪುಟಗಳ ಸಂಕ್ಷಿಪ್ತ ಪರಿಚಯ ಮಾಡಿಕೊಡುವುದು ಉಚಿತವೆಂದು ಭಾವಿಸಿದ್ದೇನೆ.

ಸಂಪುಟ ೧ರಲ್ಲಿ ಡಾ. ಕಾಯ್ಕಿಣಿಯವರು ಬರೆದ 'ವಿಚಾರವಾದ' 'ವಿಚಾರವಾದ·ಮತ್ತು ನಿರಾಶಾವಾದ', 'ವಿಚಾರವಾದ-ಉತ್ತರಾರ್ಧ', 'ಮಾರ್ಕ್ಸವಾದ', 'ನವ ಮಾನವತಾವಾದ' ಹಾಗೂ 'ನಾಸ್ತಿಕನು ಮತ್ತು ದೇವರು' ಕೃತಿಗಳು ಸೇರಿಕೊಂಡಿವೆ.

೨ನೆಯ ಸಂಪುಟವೂ ವಿಚಾರ ಸಾಹಿತ್ಯಕ್ಕೇ ಮೀಸಲಾಗಿದೆ. ಅದರಲ್ಲಿ 'ಗಂಡು-ಹೆಣ್ಣು', 'ಪ್ರೀತಿ', 'ಜೀವನ ವಿಜ್ಞಾನ' (ಬಾಳಿನ ಗುಟ್ಟು), 'ಮನೋವಿಜ್ಞಾನದ ರೂಪರೇಷೆಗಳು' ಹಾಗೂ 'ಗ್ರೀಕ್ ದಾರ್ಶನಿಕರು' ಕೃತಿಗಳು ಸೇರ್ಪಡೆಯಾಗಿವೆ.

೩ನೇ ಸಂಪುಟವು ಪಶ್ಚಿಮ ಜಗತ್ತಿನ ಅಸಾಧಾರಣ ಪ್ರತಿಭೆಗಳ ಬದುಕು ಮತ್ತು ಸಾಧನೆಗಳನ್ನು ಪರಿಚಯಿಸುತ್ತದೆ. ತತ್ವಜ್ಞಾನಿಗಳಾದ ಸೊಕ್ರೆಟಿಸ್, ಅರಿಸ್ಟೊಟಲ್ ಮತ್ತು ನಿಕೊಲೊ ಮ್ಯಾಕಿಯಾವೆಲ್ಲಿ; ಕಲಾಕೋವಿದರಾದ ಡೆಮೊಸ್ಥೆನೀಜ, ಲಿಯೋನಾರ್ಡೋ ಡಾವಿನ್ಸಿ ಹಾಗೂ ಮೈಕೆಲ್; ಗಾನ ಪ್ರತಿಭೆಗಳಾದ ಲುಡ್ವಿ ಗವ್ಹಾನ್ ಬಿದೊವಿನ್, ವೋಲ್‌ಗ್ಯಾಂಗ್, ಅಮೇಡಿಯನ್, ಮೊಝಾರ್ಟ ಹಾಗೂ ವಿಲ್‌ಹೆಲ್ಮರಿಚರ್ಡವಾಗ್ನರ್; ಕ್ರಾಂತಿಪುರುಷರಾದ ರೂಸ್ಸೋ, ವ್ಹಾಲ್ಟಾಯರ್ ಮತ್ತು ಚಾರ್ಲಸ್ ಡಾರ್ವಿನ್; ಸಾಹಿತ್ಯ ಪ್ರಪಂಚದ ಮಿನುಗುತಾರೆಗಳಾದ ಡಾ. ಜಾನ್ಸನ್, ಷೆಲ್ಲಿ, ಬಾಯರನ್, ಕೀಟ್ಸ್, ಎಝ್ರಾಪೌಂಡ್, ಯೇಟ್ಸ್, ಟಿ.ಎಸ್. ಇಲಿಯಟ್ ಹಾಗೂ ಒಡೆನ್; ಮಹಾನ್ ವಿಜ್ಞಾನಿಗಳಾದ ಸರ್ ಐಸಾಕ್ ನ್ಯೂಟನ್, ಲೂಯಿಪಾಶ್ಚರ, ಥೊಮಸ್ ಎಡಿಸನ್; ಮಹಾನ್ ಸಾಹಸಿಗಳಾದ ಕ್ಯಾಪ್ಟನ್ ಕುಕ್, ಕ್ಯಾಪ್ಟನ್ ಸ್ಕಾಟ್ ಹಾಗೂ ಅವ್ಹಿಂಗಸ್ಟನ್; ಅಂತೆಯೇ, ರಾಜಕೀಯ ಧ್ರುವತಾರೆಗಳಾದ ಅಬ್ರಾಹಾಮ್ ಲಿಂಕನ್, ಗ್ಯಾರಿಬಾಲ್ಡಿ ಮತ್ತು ಬಿಸ್ಮಾರ್ಕರ ಸಾಧನೆಯ ಮನೋಜ್ಞ ಚಿತ್ರಗಳು ಈ ಮೂರನೆಯ ಸಂಪುಟದಲ್ಲಿವೆ.

೪ನೆಯ ಸಂಪುಟವು ಆಧುನಿಕ ಕನ್ನಡದ ಕೆಲವು ಕವಿಪುಂಗವರು ಬರೆದ ಕೃತಿಗಳ ಸಮೀಕ್ಷಾಪ್ರಬಂಧಗಳಿಂದ ಕೂಡಿದ್ದಾಗಿದೆ. ವರಕವಿ ಬೇಂದ್ರೆ, ದಿನಕರ ದೇಸಾಯಿ, ವಿ.ಜಿ. ಭಟ್ಟ, ಚೆನ್ನವೀರ ಕಣವಿ ಹಾಗೂ ಗಂಗಾಧರ ಚಿತ್ತಾಲರು ಇಲ್ಲಿ ಅಧ್ಯಯನಕ್ಕೆ ಸಿಗುತ್ತಾರೆ.

೫ನೆಯ ಸಂಪುಟದಲ್ಲಿ ಮೂರು ಮುಖ್ಯ ಅಧ್ಯಾಯಗಳನ್ನು ಮಾಡಲಾಗಿದೆ. 'ಕಾವ್ಯವೆಂದರೇನು?' ಎಂಬ ಪ್ರಶ್ನೆಯೊಂದಿಗೆ ಪ್ರಾರಂಭವಾಗುವ ಮೊದಲನೆಯ ಅಧ್ಯಾಯವು, 'ಹೊಸ ಕಾವ್ಯದ ಹಾದಿ'ಯ ಕುರಿತು ಮಾತನಾಡುತ್ತ, 'ರಸನಿಷ್ಪತ್ತಿ'ಯ ಬಗೆಗೆ ಚರ್ಚಿಸಿ, ವಿಮರ್ಶೆಯ ಕುರಿತೇ ವಿಮರ್ಶಿಸುತ್ತ 'ಅನುಭವ ಮತ್ತು ಅಭಿವ್ಯಕ್ತಿ', 'ಪರಕೀಯ ಪ್ರಜ್ಞೆ', 'ಅಥೆಂಟಿಕ್ ಮತ್ತು ಜೆನ್ವಿನ್' ಬಗೆಗೆಲ್ಲ ಚರ್ಚಿಸುತ್ತ ಬೆಳೆದು, 'ಸಾಹಿತ್ಯದಲ್ಲಿ ಶೂದ್ರ ಬ್ರಾಹ್ಮಣ ಸಂದರ್ಭ', 'ಎಡ-ಬಲ', 'ದಲಿತ ಪ್ರಜ್ಞೆ'ಗಳ ವಿಶ್ಲೇಷಣೆಯೊಂದಿಗೆ ಮುಗಿಯುತ್ತದೆ. 'ಮಾಸ್ತಿಯವರ 'ಸುಬ್ಬಣ್ಣನ'ನ ಬಗೆಗೆ ಪುನರ್ ವಿಚಾರ' ಹಾಗೂ 'ಭೈರಪ್ಪನವರ ಕಾದಂಬರಿಗಳಲ್ಲಿ ಧರ್ಮ'-ಇವು ಈ ಸಂಪುಟದ ಎರಡನೆಯ ಅಧ್ಯಾಯದಲ್ಲಿ ವಿವರವಾದ ಚರ್ಚೆಗೆ ಒಳಪಟ್ಟಿವೆ. ಕಾರಂತರ 'ಗೀತ ನಾಟಕಗಳು' ಅ.ನ.ಕೃ. ಅವರ 'ರಸಾರ್ದ್ರ ವಿಮರ್ಶಕ,' 'ರಸಿಕರಂಗರ ಭಾವಗೀತೆಗಳು,' 'ಕಡೆಂಗೋಡ್ಲು ಮತ್ತು ಒಲಿವರ್ ಗೋಲ್ಡಸ್ಮಿತ್‌ರ ಬರವಣಿಗೆಯ ತುಲನಾತ್ಮಕ ಸಮೀಕ್ಷೆಗೆ ಮೀಸಲಾದ ಲೇಖನಗಳೂ ಈ ಅಧ್ಯಾಯದಲ್ಲಿವೆ. ಮೂರನೆಯ ಅಧ್ಯಾಯದಲ್ಲಿ ಡಾ: ಕಾಯ್ಕಿಣಿಯವರು ಬರೆದ 'ಸ್ವಾತಂತ್ರ್ಯೋತ್ತರ ವಿಚಾರ ಸಾಹಿತ್ಯ' ಹಾಗೂ ಡಾ: ಶಂ.ಬಾ. ಜೋಶಿಯವರ ಸಾಮಾಜಿಕ ತತ್ವ ವಿಚಾರಗಳು' ಸೇರಿಕೊಂಡಿವೆ.

ಆರನೆಯ ಸಂಪುಟದಲ್ಲಿ ಆರು ಅಧ್ಯಾಯಗಳಿವೆ. ಮೊದಲನೆಯ ಅಧ್ಯಾಯವು ಡಾ। ಶಂ.ಬಾ. ಜೋಶಿಯವರ 'ಹಾಲುಮತ ದರ್ಶನ' ಹಾಗೂ 'ಕರ್ನಾಟಕ ಸಂಸ್ಕೃತಿಯ ಪೂರ್ವ ಪೀಠಿಕೆ'ಗಳ ಕುರಿತಾದುದು. ಎರಡನೆಯ ಅಧ್ಯಾಯದಲ್ಲಿ ಕವಿ ಡಾ। ಎಂ. ಅಕಬರ ಅಲಿಯವರ 'ಗಂಧಕೇಶರ' ಮತ್ತು 'ಕಸಿ ಗುಲಾಬಿಯ ಕಥನ' ಕವನ ಸಂಕಲನಗಳ ಹಾಗೂ ಸರ್ವಜ್ಞಕವಿಯ ಕುರಿತ ಅಲಿಯವರ ಮಹಾಪ್ರಬಂಧದ ಬಗೆಗಿನ ಸಮೀಕ್ಷಾ ಲೇಖನಗಳಿವೆ. ಮೂರನೆಯ ಅಧ್ಯಾಯವು ಕವಿ ಬಿ.ಎ. ಸನದಿಯವರ 'ಕಾವ್ಯಾವಲೋಕನ'ಕ್ಕೆ ಸಂಬಂಧಿಸಿದ್ದು. 'ಉತ್ತರಣ'ಎಂಬ ನಾಲ್ಕನೆಯ ಅಧ್ಯಾಯವು ಗೌರೀಶರು ವಿಷ್ಣು ನಾಯ್ಕರ ಕಾವ್ಯದ (ಆರು ಸಂಕಲನಗಳ) ಕುರಿತು ಬರೆದ ರಸವಿಮರ್ಶೆ ಯನ್ನೊಳಗೊಂಡಿದೆ. ಐದನೆಯ ಅಧ್ಯಾಯದಲ್ಲಿ ಕೆಲವು ಮಹತ್ವದ ಗ್ರಂಥಗಳ ಬಗ್ಗೆ ಗೌರೀಶರು ಬರೆದ ವಿಮರ್ಶೆ ಹಾಗೂ ಬೇರೆ ಕೆಲವು ವೈಚಾರಿಕ ಬಿಡಿಬರಹಗಳು ಸಿಗುತ್ತವೆ. ಕೊನೆಯ ಅಧ್ಯಾಯವು 'ಶೈಲಿ'ಯ ಕುರಿತು ಡಾ: ಕಾಯ್ಕಿಣಿಯವರು ಕೆಲವರ್ಷಗಳಾಚೆ ಬರೆದ ಅಪ್ರಕಟಿತ ದೀರ್ಘ ಲೇಖನವೊಂದನ್ನು ಒಳಗೊಂಡಿದೆ.

ಪ್ರಸ್ತುತ ಈ ೭ನೆಯ ಸಂಪುಟದಲ್ಲಿ ಡಾ: ಕಾಯ್ಕಿಣಿಯವರ ಒಟ್ಟಿಗೆ ೨೩ ರೂಪಕಗಳು ಮತ್ತು ನಾಟಕಗಳು ಸೇರಿವೆ. ಇವು ಕಳೆದ ಆರು ದಶಕಗಳ ಕಾಲಾವಧಿಯಲ್ಲಿ ಬರೆದವುಗಳು. ಇವುಗಳಲ್ಲಿ ಹೆಚ್ಚಿನವು ಬಾನುಲಿ ಪ್ರಸಾರಕ್ಕಾಗಿಯೇ ಬರೆದವುಗಳಾಗಿವೆ. ಅಯಾ ಅಕಾಶವಾಣಿ ಕೇಂದ್ರಗಳು ಬೇರೆಬೇರೆ ಸಂದರ್ಭಗಳ ಅಗತ್ಯಗಳಿಗನುಸಾರವಾಗಿ ಕೇಳಿ ಪಡೆದವುಗಳು. ಈ ಮೊದಲು ಪುಸ್ತಕರೂಪದಲ್ಲಿ ಪ್ರಕಟವಾದ 'ಒಲುಮೆಯ ಒಗಟು', 'ಕ್ರೌಂಚಧ್ವನಿ', 'ಕರ್ಣಾಮೃತ' ಹಾಗೂ 'ಆಕಾಶ ನಾಟಕಗಳು' ಎಂಬ ನಾಲ್ಕು ಸಂಕಲನಗಳಲ್ಲಿಯ ಎಲ್ಲ ಕೃತಿಗಳು ಈ ಸಂಪುಟದಲ್ಲಿವೆ. ಅವುಗಳ ಹೊರತಾಗಿ ಅಪ್ರಕಟಿತ ರೂಪಕಗಳಾದ 'ನರಕ ಚತುರ್ದಶಿ,' 'ಮಕರ ಸಂಕ್ರಮಣ,' 'ದೀಪಾವಳಿ,' 'ಮೀರಾ ಕೆ ಪ್ರಭು', 'ಅಂಬೆ'; ಅಪ್ರಕಟಿತ ನಾಟಕಗಳಾದ 'ಅತ್ತೆಗೆ ಲತ್ತೆ' ಹಾಗೂ

'ಚಿದಂಬರ ಸ್ವಾರಸ್ಯ'ಗಳನ್ನೂ ಸೇರಿಸಿದ್ದೇನೆ.

ಇಲ್ಲಿಯ ಕೆಲವು ಕೃತಿಗಳನ್ನು ಬಹಳ ಪ್ರಯಾಸಪಟ್ಟು ಸಂಗ್ರಹಿಸಬೇಕಾಗಿ ಬಂತು. ಹೀಗಾಗಿ ಬರವಣಿಗೆಯ ಕಾಲಾನುಕ್ರಮದಲ್ಲಿ ಪೋಣಿಸುವುದಕ್ಕೆ ಸಾಧ್ಯವಾಗಿಲ್ಲ. ಉದಾಹರಣೆಗೆ ಗೌರೀಶರು ೧೯೪೪ರಷ್ಟು ಹಿಂದೆ ಬರೆದು ಪ್ರಕಟಿಸಿದ 'ಒಲುಮೆಯ ಒಗಟು' ಇನ್ನೇನು ಸಿಗುವುದೇ ಇಲ್ಲ ಎಂಬ ತೀರ್ಮಾನದೊಂದಿಗೆ ಮುದ್ರಣ ಕೆಲಸ ಕೈಗೆತ್ತಿಕೊಂಡು ಅರ್ಧಭಾಗ ಮುಗಿದುಹೋದ ಮೇಲೆ ಅನಿರೀಕ್ಷಿತವಾಗಿ ಕೈಗೆ ಬಂತು.

ನಮ್ಮ ಪುರಾಣ ಪ್ರಸಂಗಗಳಲ್ಲಿ ಸಿಗುವ ಅನೇಕ ಮಹತ್ವದ ಘಟನೆಗಳನ್ನು ಡಾ: ಕಾಯ್ಕಿಣಿಯವರು ತಮ್ಮ ಇಲ್ಲಿಯ ರೂಪಕಗಳ ಹಾಗೂ ನಾಟಕಗಳ ವಸ್ತುವಾಗಿ ಹೆಕ್ಕಿಕೊಂಡಿದ್ದಾರೆ. ಕತೆಯ ಹಂದರಕ್ಕೆ ಚ್ಯುತಿಯಾಗದ ರೀತಿಯಲ್ಲಿ ತಮ್ಮ ವೈಚಾರಿಕ ಬೀಜಗಳನ್ನೂ ಅಲ್ಲಲ್ಲಿ ಚೆಲ್ಲಿದ್ದಾರೆ. ಕಾಯ್ಕಿಣಿಯವರ ವಿನೋದ ಸ್ವಭಾವದ ನೇರ ಪರಿಚಯವಾಗುವುದು ವಿಶೇಷವಾಗಿ ಅವರ ರೂಪಕ ಮತ್ತು ನಾಟಕಗಳಲ್ಲಿಯೇ ಎನ್ನಬಹುದು. ಎಷ್ಟೊಂದು ಸೊಗಸಿಂದ ಕನ್ನಡ ಪದಗಳನ್ನು ಶ್ಲೇಷೋಕ್ತಿಯಾಗಿ (Pun) ಅವರು ದುಡಿಸಿಕೊಳ್ಳಬಲ್ಲರೆಂಬುದನ್ನೂ ಅವರ ಈ ಬಗೆಯ ಬರವಣಿಗೆಯಲ್ಲಿಯೇ ನಾವು ಹೆಚ್ಚಾಗಿ ಕಾಣಬಹುದು. ರಂಗಪ್ರಯೋಗದ ದೃಷ್ಟಿಯಿಂದಲೂ ಇವು ಯಶಸ್ವಿಯಾದ ಕೃತಿಗಳೆಂಬುದಕ್ಕೆ ಇಲ್ಲಿಯ ಹಲವು ರಚನೆಗಳು ಈಗಾಗಲೇ ಅನೇಕ ಪ್ರಯೋಗಗಳನ್ನು ಕಂಡಿರುವುದೇ ಸಾಕ್ಷಿ.

೬ನೆಯ ಸಂಪುಟದಂತೆ ಈ ಸಂಪುಟವೂ ಕೂಡ ಪೂರ್ತಿ ಆಫ್‌ಸೆಟ್‌ನಲ್ಲಿ ಮುದ್ರಣಗೊಂಡಿದೆ. ಈ ಕಾರ್ಯದಲ್ಲಿ ಬಹುವಿಧದಿಂದ ಸಹಕರಿಸಿದ ಬೆಂಗಳೂರಿನ ಬೃಂದಾವನ ಪ್ರಿಂಟರ್ಸ್ ಎಂಡ್ ಪಬ್ಲಿಷರ್ಸ್‌ನ ಆಡಳಿತ ಮಂಡಳಿಯ ಎಲ್ಲ ಬಂಧುಗಳಿಗೆ ನನ್ನ ಕೃತಜ್ಞತೆಸಲ್ಲಬೇಕು. ಗೌರೀಶರ ಸಮಗ್ರ ಸಂಪುಟಗಳ ಸಂಪಾದಕ ಸಲಹಾ ಮಂಡಳಿಯ ಅಧ್ಯಕ್ಷರಿಗೆ ಮತ್ತು ಸದಸ್ಯ ಮಿತ್ರರಿಗೆ ಅಭಾರಿಯಾಗಿದ್ದೇನೆ.

ವಿಷ್ಣು ನಾಯ್ಕ
ಸಂಪಾದಕ

'ಪರಿಮಳ'
ಅಂಬಾರಕೊಡ್ಲ,
ಅಂಕೋಲಾ (ಉ.ಕ. ಜಿಲ್ಲೆ).

# ಪರಿವಿಡಿ

ರೂಪಕಗಳು-ನಾಟಕಗಳು




# ಕ್ರೌಂಚಧ್ವನಿ

(ಗೀತರೂಪಕ ಸಂಕಲನ)

- ಚೈತ್ರ - ಚಿತ್ರ
- ರಂಗಪಂಚಮೀ
- ಕಾಮದಹನ
- ಕ್ರೌಂಚಧ್ವನಿ (ರಾಮನವಮಿ)
- ವರ್ಷಾಗಮನ
- ಯಶೋಧರಾ

ಪ್ರತಿಭಾ ಗ್ರಂಥಮಾಲೆ ಸಮಾಜ ಪುಸ್ತಕಾಲಯ
ಧಾರವಾಡ - ೧
೧೯೬೩

## ೧

# ಚೈತ್ರ - ಚಿತ್ರ

ನಿವೇದಕ : ಆಕಾಶ ಮಣಿಪುರ ಚಿತ್ರ ಚಿತ್ರಾಂಗದೆ
ರವಿ ತಾನೆ ಅರ್ಜುನ ಬಳಿಸಾರಿದಽ
ಚೈತ್ರದ ಚಂದ್ರಾಮ ಬಭ್ರುವಾಹನ ಸಮ
ಹೊರವಂಟ ಹಿರಿಬಂಟ ದಳವೇರಿದಽ
ಫಾಲ್ಗುನನ ತಲೆಮೆಟ್ಟಿ ತಳವೂರಿದಽ !

ಮರುದ್ಗಣ : ವಿಧುಹಾಸ ಮಧುಮಾಸ ಮೃದುರಾಸವಾಡೆ
ರಸರಾಜ ರತಿರಾಜ ಋತುರಾಜ ಕೂಡೆ
ಚಿತ್ರ ರಥವಾ ಚೈತ್ರಯಾತ್ರೆಗೆ ಹೂಡೆ
ಕಳೆಬಂತು ಕಾಡಿಗೆ ಸವಿ ಬಂತು ಪಾಡಿಗೆ
ನಾಡಿನ ನಾಡಿಗೆ ನವಸ್ಪಂದನಽ
ಚೈತ್ರಾವತಾರಕೆ ಅಭಿನಂದನಽ!

ನಿವೇದಕ : ಸಾಗರದ ಮುದಮಂಜುಘೋಷಕೆ
ಸಹ್ಯಗಿರಿಮಾರ್ನುಡಿವುದು
ಮೈತ್ರಿಯಿಂಚರ ಮಿಡಿವುದು!

ಸಹ್ಯಗಿರಿ : ಮತ್ತು ಸಾಗರ } ಚೈತ್ರ ದೇವತೇ ! ಬಾರ....ಉಘೋ!
ಹೊಸ ಸೃಷ್ಟಿಯ ಕವಿದ್ರಷ್ಟಾರ!
ಕಲ್ಪಶಿಲ್ಪಿ ಶಿವಸ್ರಷ್ಟಾರ!
ಚೈತ್ರದೇವತೆ! ಬಾರ....ಉಘೋ!

ಸಹ್ಯ : ನೋಡಿದೆಯಾ ಸಾಗರಾ?

ಸಾಗರ : ನಾನುವೂ ರಸಾಗರಾ!

ಸಹ್ಯ : ನನ್ನ ಮಣ್ಣು-ಮರಡಿ-ಮರಽ
ಮಾಯಾಮಯ ಮಹತ್ತರಽ
ರತ್ನೋಜ್ಜ್ವಲ ಚಿತ್ರ ಭಾನು
ಕೇಯೂರಿಪ ನೆನ್ನ ಸಾನು
ನೋಡಿದೆಯಾ, ಸಾಗರಾ?

**ಸಾಗರ :** ನಾನುವೂ ರಸಾಗರಾ!
ಪ್ರಕೃತಿ ಹೃದಯ
ಉಕ್ಕಿಸದಯ
ನಿತ್ಯ ಸ್ವಪ್ನ ಜಾಗರಾ
ನೆಲಗುವಲಯ
ಬಳಸಿವಲಯ
ಮಂತ್ರಮುಗ್ಧ ಅಜಗರಾ!
ನಾನುವೂ ರಸಾಗರಾ!

**ನಿವೇದಕ :** ಹೂವಿನ ಮಕ್ಕಳು ಹಾಡುತ ಬಂದರು
ಕನ್ನಡ ಪಡುಸೀಮೆಯೀಸೊಬಗ
ಇದನು ಮೆಚ್ಚಿದವನೇ ಸುಭಗ!

**(ಗುಮಟೆ-ಜಾಗಟೆ-ತಾಳಗಳ ಹಿಮ್ಮೇಳದೊಂದಿಗೆ ಹಾಲಕ್ಕಿ ಒಕ್ಕಲ ಸುಗ್ಗಿಗುಣಿತದ ಕಲಕಲ ದನಿ)**

"ಜಂಗಂ ಜಕ್ಕಂ ಚೊ ಹೋ ಚೋss "
"ಜಂಗಂ ಜಕ್ಕಂ ಚೊ ಹೋ ಚೋss "

**ನಿವೇದಕ :** ಮಣ್ಣಿನ ಮಕ್ಕಳು ಹಾಲಕ್ಕಿ ಒಕ್ಕಲು,
ಭೂದಾಯಿ ನಕ್ಕಳು ಅವರಾಟಕೆ
ಹರಿದಿನ ಹಗರಣ ಗುಮಟೆಯ ಪಾಗಿನ
ಒಡೆ-ಕೊಟ್ಟೆ-ಪಾಯಸ ರಸದೂಟಕೆ!
"ಜಂಗಂ ಜಕ್ಕಂ ಚೊ ಹೋ ಚೋsಯ್'

**ಹೆಣ್ಣುದನಿ :** ಸುಗ್ಗಿಯ ಸಡಗರ ಹಾಲಕ್ಕಿ ಹುಡುಗರ
ಹಿಗ್ಗಿನ ಉಡುಗೊರೆ ಕಂಡಲ್ಲಿ ಕಯ್

**ಗಂಡುದನಿ :** ಕಾನೆಲ್ಲ ಗಮಗಮ, ಕೊಪ್ಪೆಲ್ಲ ಸಂಭ್ರಮ,
"ಜಂಗಮ ಜಕ್ಕಮ ಚೊ ಹೋ ಚೋsಯ್"

**(ಕೊನೆಯ ಸಾಲಿನ ಪಲ್ಲವಿ ಹಿಡಿದು ಸುಗ್ಗಿ ಕುಣಿಯುತ್ತ ಸಾಗುವ ತೇಲುದನಿ)**

**ಹುಡುಗೆಯರು :** ಅಡಕೆಯ ಹನೆಗೊನೆ ಬಿಂಗಾರs
ಹಳ್ಳಿಯ ಹೆಣ್ಣಿನ ಸಿಂಗಾರs
ಬಡವರ ಬೆಡಗಿನ ಬಂಗಾರs
ಕರಿದೇವ ಹರಸಲಿ ಮುಂಗಾರs
-ಹಿಂಗಾರs

(ಸುಗ್ಗಿಯ ಸಮ್ಮಿಶ್ರ ಆವೇಶದ ಸದ್ದು)

"ದೋ ದಯಾss ! ದೋ ದಯಾss !
"ದೋದಯ ತಕತಕ ದೋದಯss !
(ತೇಲುದನಿ)

**ಹುಡುಗರು :** ಬೇವು ತಂಪ
ಮಾವು ಸೊಂಪ
ಪಗಲು ಪೆಂಪ ತೋರಿತು!
ಚಿಗುರು ಕೆಂಪ
ಅಲರು ಕಂಪ ತೂರಿತು!

**ನಿವೇದಕ :** ಜನದ ಹರ್ಷ ಬನದ ಹರ್ಷ
ಕಂಡು ಕಡಲ ಮದೋತ್ಕರ್ಷ!

(ಕಡಲ ತೆರೆಗಳು ದಂಡೆಗೆ ಅಪ್ಪಳಿಸುವ ಗರ್ಜನೆ)

**ಅಂಬಿಗರು :** ಓ ಬೆಲೆ ಲೇಸೋss ಓಮಾಲಿ ಲೇಸೋss
ಹಾಯ ಬಿಚ್ಚಿ ಲೇಸೋss
ಬಲೆಯ ಬೀಸಿ ಲೇಸೋss
ಗಾಳಿಗೋಡಿ ಲೇಸೋss
ಮುಂದಕೊತ್ತಿ ಲೇಸೋss
ತಿರುಗಿರಿತ್ತ ತೇಲಿರತ್ತ
ಹಾಕಿ ಹುಟ್ಟ ಲೇಸೋss
ಓ ಬೇಲೆ ಲೇಸೋss ಓ ಮಾಲಿ ಲೇಸೋss
ಬದುಕು ಬಾದಿ
ಇದು ಅನಾದಿ
ಹಿಡಿದ ಹಾದಿ ಲೇಸೋss
ಓ ಬೇಲೆ ಲೇಸೋss ಓ ಮಾಲಿ ಲೇಸೋss

**ನಿವೇದಕ :** ತೆರೆಗಳ ತಲೆ ಕೆದರಿದೆ
ನೀರ ದೆವ್ವ ಬೆದರಿದೆ
ಗಾಳಿಗೂಳಿ ಕೆರಳಿದೆ
ದೋಣಿ ತಡಿಗೆ ಹೊರಳಿದೆ

ಹೆಣ್ಣಿನದನಿ :

(ಹಾಡು ನಡೆಯುವಾಗ ಪಲ್ಲವಿಯನ್ನು ಗಂಡುದನಿಗಳು ಎತ್ತಿಕೊಳ್ಳಬೇಕು)

ಬೆಳ್ಳಿ ಮೂಡುವ ಹೊತ್ತು
ಕಡಲಿನ ಸಂಪತ್ತು
ತೀರಕ್ಕೆ ತಂದಿತ್ತು - ಕೋಲ್ದೋಣಿ!

-ಓ ಬೇಲೇಸೋ"

-ಕೊಕ್ಕರೆ ಕರೆವಲ್ಲಿ
ತೆರೆ ಮುರಿದು ಮೊರೆವಲ್ಲಿ
ಹೊಯ್ದಾಡಿ ತೊಯ್ದಿದೆ - ಚುಕ್ಕಾಣಿ

-ಓಬೇಲೇಸೋ

(ಹೆಣ್ಣಿನ ದೀರ್ಘ ಸ್ವರಾಲಾಪನೆ)

ಚಂದ್ರೋಟಿ ಸೋರಾ
ಹಿರಿ ಬಣಗು ಭಾರಾ
ಮತ್ಸ್ಯಾವತಾರ-ಇದೆ ಕಾಣೆ!

-ಓಬೇಲೇಸೋ"

(ಹಿನ್ನೆಲೆಯ ಸ್ವರವಾದನ ರಚನೆ ದೇಸಿಯಿಂದ ಒಮ್ಮೆಲೆ ಮಾರ್ಗೀಯ ಸಂಗೀತಕ್ಕೆ ಹಾಯುತ್ತದೆ.)

ನಿವೇದಕ : ಲಂಕಾದಹನದಿ ಸುಟ್ಟಿತು ಹೋಳಿ !
ರಕ್ಕಸ ರಕ್ತದ ಚಿಮ್ಮಿತ್ತೋಕುಳಿ!
ಯುಗಾದಿ ವಿಜಯೋತ್ಸವ ವೈತಾಳಿ!
ತಾಮಸ ಪಟ್ಟ ಕಾಮವೆ ಸುಟ್ಟ!
ರಾಮಗೆ ಪಟ್ಟ! ಪ್ರೇಮಕೆ ಪಟ್ಟ!

( ಜನಸಮ್ಮರ್ದದ ಕೋಲಾಹಲದ ಕಲಕಲ )

ಹಿರಿಹಿರಿ ಹಿಗ್ಗಿ
ಅಯೋಧ್ಯೆ ನುಗ್ಗಿ
ಶರಯೂತೀರದಿ
ನಿಂತಿದೆ ಕಾದಿ
ಸೀತಾರಾಮರ
ಬರವಿನ ಹಾದಿ

ಅಂದೆ ಯುಗಾದಿ
ಮಂಗಲ ತೇದಿ

(ಜನರೊಳಗಿಂದ ತೇಲಿ ಬರುವ ಸರಾಗ ಮಾತು)

ದನಿ ೧ : ಅದೋ, ನೋಡಿ ಪುಷ್ಪಕs !

ದನಿ ೨ : ಆನಂದ ಬಾಷ್ಪಕs !

ದನಿ ೩ : ನೀಲಮೇಘ ತೇಲಿದಂತೆ!

ದನಿ ೪ : ನೀಲಮೇಘ ಶ್ಯಾಮನಾಂತೆ!

ಎಲ್ಲರೂ : ದಿವ್ಯಯಾನ ಬರುತಿದೆ
ಅಯೋಧ್ಯೆಗಸುವ ತರುತಿದೆ!

( ಜನರಿಂದ ಜಯಘೋಷ )

ಜನ : ಶ್ರೀರಾಮಚಂದ್ರ, ಪ್ರಭು ರಾಮಚಂದ್ರ
ರಘುರಾಮಚಂದ್ರ, ಜಯ ಹೇ!

( ತೇಲುದನಿ )

ದನಿ ೧ : ಅಕೋ! ಮುಖವು ರಾಮನದೇ!

ದನಿ ೨ : ಮೋಡದಿ ಮಿಂಚಿದೆ - ಸೀತೆ!

ದನಿ ೩ : ಮಿಂಚಬೆನ್ನೆ ಗುಡುಗು ಕಣಾ!

ದನಿ ೪ : ಯಾರು ?

ಉಳಿದೆಲ್ಲರೂ : ಮಂಕೆ ಲಕ್ಷ್ಮಣಾ!

( ಎಲ್ಲರೂ ಗಹಗಹಿಸಿ ನಗುವರು )
( ಜನರ ಜಯಘೋಷ ತೇಲಿಹೋದ ದನಿ )

ಶ್ರೀರಾಮ : ನಿಲ್ಲು ಪುಷ್ಪಕ, ನಲ್ಲೆ ನೋಡೆಲೆ,
ಬಂದೆವೆಲ್ಲಿಗೆ ಬಲ್ಲೆಯಾ?

ಸೀತೆ : ಏನು ಕಲಕಲ! ತೆಂಕಣ ಕಡಲೆ?
(ಗಾಬರಿ)
ದೂರ - ಹಾ! ತರಲೊಲ್ಲೆಯಾ ?

ಶ್ರೀರಾಮ : (ನಕ್ಕು)

ನೋಡು ಪ್ರಿಯೇ ಜಾನಕೀ
ಹೊಳೆವ ಗಂಗೆ-ಗಂಡಕೀ
ಕೋಸಲದೀ ಭೂಮಿಯಂದ
ಕೌಸಲ್ಯಾ ತಾಯಿಯಂದ!
ಸನ್ಮುಖೀ ಹಸನ್ಮುಖೀ!

ಲಕ್ಷ್ಮಣ : ಅಣ್ಣದೇವ ಶತಸಹಸ್ರ
ಜನಸ್ತೋಮ ನೆರೆದಿದೆ
ಗೋಗರೆಯುವ ಭೋರ್ಗರೆಯುವ
ರಾಮಸ್ತೋತ್ರ ಒರೆದಿದೆ!

( ಜನರ ಜಯಘೋಷ ಸ್ಫುಟವಾಗಿ ಮೊಳಗುವುದು )

ಸಮೂಹಗೀತ : ಜಯ ರಾಮಚಂದ್ರ, ಪ್ರಭು ರಾಮಚಂದ್ರ
ರಘುರಾಮಚಂದ್ರ, ಜಯಹೇ!
ಸಾಕೇತ ಸ್ವಾಮಿ, ಸಹಭಾಗ್ಯಲಕ್ಷ್ಮಿ
ಬಹ ಭಕ್ತ ಪ್ರೇಮಿ, ಜಯಹೇ!
ಬಿಜಗೈಗೈದನಿಂದು ನಿಜರಾಜ್ಯಕೆಂದು
ಸ್ವಜನಾತಿಹರ್ಷ, ಜಯಹೇ!
ಶ್ರೀಪಾದಯುಗಲ ವರಪಾದುಕೆಗಳ
ಪಡೆದೀಯೆ ಪದುಳ, ಜಯಹೇ!

## ೨

# ರಂಗ-ಪಂಚಮೀ

(ತಂಬೂರಿಯ ಸ್ವರಧಾರೆ ಅಲೆಅಲೆಯಾಗಿ ವಾತಾವರಣವನ್ನು ತುಂಬ ಸೂಸುತ್ತಿರಬೇಕು. ಅದರೊಳಗಿಂದ ಕೊಳಲಿನ ಇಂಚರ, ಗೆಜ್ಜೆಗಳ, ನೂಪುರ-ಕಂಕಣಗಳ ಸಪ್ಪಳ, ಹೆಣ್ಣು-ಗಂಡು ದನಿಗಳ ಹಿಗ್ಗಿನ ನಗೆ-ನಲಿವಿನ ಕೇಕೆ ಆಗಾಗ ತುಂತುರಗಳಂತೆ ಸಿಡಿದು ಕೇಳಿಬರುತ್ತಿರಬೇಕು, ಹಿನ್ನೆಲೆಯಲ್ಲಿ)

ನಿವೇದಕ : ಕಾಲಿಂದೀತಟಪುಲಿನದಲಿ
ಗೋಕುಲವೃಂದಾ ವಿಪಿನದಲಿ
ಕೇಳಿತು ಕೃಷ್ಣನ ಕಲಮುರಲಿ
ತಿಳಿಬೆಳದಿಂಗಳ ಇರುಳಿನಲಿ
ಅನಂಗದೀಪನವದು ಕೆರಳಿ
ಸಂಭ್ರಮವನಯಾಂಗನೆಯರಲಿ!

( ಮಿಕ್ಕ ದನಿಗಳು ತೇಲಿಹೋಗಿ ಕೊಳಲ ಇಂಚರ ಒಂದೇ ತಾನೇತಾನಾಗಿ ತೇಲಿಬರುತ್ತದೆ. ಅದಕ್ಕೆ ಮರುಳಾಗಿ ಮೈಮರೆತು ಓಡಿಬರುತ್ತಾರೆ.)

ಗೋಪಿ ೧ : ಕರೆವ ಕಪಿಲೆ ಕರುವಿಗೆ
ಬಿಟ್ಟು ಬಂದೆ ನೀ ಬಗೆ!

ಗೋಪಿ ೨ : ಪತಿಯ ಕೈಗೆ ತಾಂಬುಲ
ಇಡಲು ಮರೆತೆ ಹಂಬಲ!

ಗೋಪಿ ೩ : ಅತ್ತೆಯ ಕಾಲೊತ್ತುತ್ತಿರಲು
ಎದ್ದೆ - ಬಿತ್ತು ಕಿವಿಗೆ ಕೊಳಲು !

ಗೋಪಿ ೪ : ಬಡಿಸುತಿರಲು ಮಾವದಿರಿಗೆ
ಬಿಡಿಸಿತು ಸೆರೆ ಮುರಲಿಯೊಸಗೆ!

( ಮತ್ತೆ ಕೊಳಲಿನ ಉನ್ಮತ್ತ ಆಲಾಪಗಳು )

ಎಲ್ಲರು : ರಂಗನೆಲ್ಲಿ? ಸಂಗವೆಂತು?
ತಿಂಗಳಲ್ಲಿ ಮದವಿದೆ!
ಅಂಗಾಂಗದಿ ಶೃಂಗಾರ ಭು-
ಜಂಗ ಹೆಡೆಯನಾಡಿದೆ!

( ಮತ್ತೆ ದೂರ ಕೊಳಲ ಇಂಚರ ಮೊಳಗುವುದು )

ಶ್ರೀಕೃಷ್ಣ : ನಾನಿಲ್ಲಿ ಮಳಲಲ್ಲಿ ಕೇತಕಿಯ ಬನದಲ್ಲಿ
ಕಾದಲನು ಕಾದಿಹೆನು ಬನ್ನಿ ಚೆನ್ನೆಯರೆ !

ಗೋಪಿಯರು : ಶ್ರೀರಂಗ ವಜ್ರಾಂಗ-ಸುಂದರನು ಚಂದಿರನು
ಹೃದ್ರಂಗವೇರಿ ಕುಣಿವನು ಕಾಣಿರೇ !

ಶ್ರೀಕೃಷ್ಣ : ಇಂದು ರಂಗ-ಪಂಚಮೀ
ಇಂದುಬಿಂಬ ವಿಭ್ರಮೀ!

(ಗೋಪಿಯರು ಓಡಿಬಂದು)

ಗೋ ೧ : ಆಡುವಾ ರಸದೋಕುಳಿ-ಓಕುಳಿ!

ಗೋ ೨ : ನೋಡಿದೆ ಜಲ ಜೀಕಳಿ !

ಗೋ ೩ : ಚೆಲ್ಲಿ ಕುಸುಮ ಕುಂಕುಮ!

ಗೋ ೪ : ರಂಗ ಅಂಗಜಗೆ ಸಮ!

( ಮೃದಂಗದ ದನಿಗೆ ಈ ಜೀಕಳಿಯ ಜಲಕ್ರೀಡೆ ನಡೆಯಬೇಕು. )

ಎಲ್ಲರೂ : ( ವೇಗ ಹೆಚ್ಚಿಸಿ )

ರಸದೋಕುಳಿ! ಹೊಡೆ ಜೀಕಳಿ!
ಮದನನಿಟ್ಟ ಜಗಕೆ ದಾಳಿ!
ಮೊಗ ಮೊಗದಲಿ ದೀಪಾವಳಿ!
ರಾಸಕೇಳಿ! ರಾಸಕೇಳಿ!

ಕೃಷ್ಣ : ನಿಲ್ಲಿ-ಎಲ್ಲಿಹೆ ರಾಧಿಕೆ?
ಎಲ್ಲಿ? ಎನ್ನಾರಾಧಿಕೆ?

ಗೋ ೧ : ಎಲ್ಲಿ ಪೋದಳೊ!

ಗೋ ೨ : ಯಾರು ಬಲ್ಲರೊ!

ಗೋ ೩ : ಮರೆಯಲಾರೆಯ ರಾಧೆಯಾ?

ಗೋ ೪ : ನಮ್ಮ ಚಲುವಿಕೆ ಬಾಧೆಯಾ?

ಕೃಷ್ಣ : ( ನಿಡಿಸುಯ್ದು )
ಎನ್ನೆದೆಯ ಸಾರಿಕೆ

ಬರಳು ಅಭಿಸಾರಕೆ
ಮನದರಸಿ ಯನ್ನರಸಿ ತರುವೆ ಕಾಣೆ !

**ಗೋ ೧ :** ನಾವು ನಕ್ಷತ್ರ-ಮಣಿ

**ಗೋ ೨ :** ರಾಧೆಯೋ ರೋಹಿಣೀ !

**ಗೋ ೩ :** ಎಲ್ಲಿಹಳೋ ವಿರಹಿಣೀ !

**ಗೋ ೪ :** -ರಂಗ-ರಾಣೀ !

**ನಿವೇದಕ :** ವಿರಹದೀನ ರಾಧೆಲೀನ ಗಾನದಲ್ಲಿ ತನ್ನಯ
ಮರೆತು ಮೈ ಅಶೋಕ ತರುವ ತಲದಿ ಧ್ಯಾನ ತನ್ಮಯ !

**ರಾಧೆ :** ಕಾಣೆನೌ ss ನಾ ss ಕಾಂತನಾ
ಕಾಣೆನ್ನೈ ಘನನೀಲ ನಾss
ಊದಿ ಕೊಳಲಲಿ ಮೋಹ ಮಂತ್ರ
ಮಾಡಿಹನು ಪರತಂತ್ರ
ತಿಂಗಳ ಬಿಂಬದಿ ಅವನ ವಿಲಾಸಾ
-ಹಾಸಾ ಭಾಸಾ !
ಬೀರುವನ್ನೈ ಮೊಗದೋರನ್ನೈ
-ಬಾರನ್ನೈ sss
ತಂಗಾಳಿಯಲಿ ತನುವ ಸುವಾಸಾ
ಸೂಸಿ ಬೀಸಿ ತರುವಾ-ಮರವಾ !

( **ಹತ್ತಿರದಲ್ಲಿಯೇ ಫಕ್ಕನೆ ಹುಲಿಯ ಗರ್ಜನೆ** )

**ರಾಧೆ :** ( **ಹೌಹಾರಿ** )
ಹಾ ! ನಾಥ ಕಾಪಾಡು ! ಅಯ್ಯೋ ಹುಲಿ ! ಬಂತು
ಹುಲಿ !

**ಕೃಷ್ಣ :** ( **ನಕ್ಕು** )
ಇಕೊ ನೋಡು ನಾನೆ ಹುಲಿ! ಬರಿ ಹೂಲಿ! ವನಮಾಲಿ!

**ರಾಧೆ :** ಅಹಾಹಾ ! ನೀಡಿದೆಯಾ ದರುಶನಽ !
ರೋss ಮಾಂಚನಽ
ಅಮೃತ ಸಿಂಚನಽ

( ಗೋಪಿಯರೆಲ್ಲ ಕಿಲಿಕಿಲಿ ನಗುತ್ತ ಅಲ್ಲಿಗೆ ಧಾವಿಸಿ ಬರುವ ಗೆಜ್ಜೆ ಹೆಜ್ಜೆಗಳ ಸದ್ದು. )

ಗೋಪಿಯರು : ಆಡುವಾss
ರಸದೋಕುಳಿ ರಸದೋಕುಳಿ
ರಾಸಕೇಳಿ ರಾಸಕೇಳಿ

( ನಗುತ್ತ ಹಾಡುತ್ತ ರಾಧಾಕೃಷ್ಣರನ್ನು ಸುತ್ತುಗಟ್ಟುವರು. )

ಕೃಷ್ಣ : ಏಳಿ ರಾಸಕೆ ! ಎಳು ರಾಧಿಕೆ !
ಬೇಡ. ತಡೆ. ಇಕೊ ಚಲುವೆಯಾರ್ ?
ತರು ಅಶೋಕವ ತರುಣಿಯರೆ ನೀವ್
ತುಳಿದು ಅರಳಿಸೆ ಚಲುವೆಯರ್ !

ಗೋ ೧ : ಸರಿ ಇಕೋ ( ಒದೆಯುವಳು )

ಕೃಷ್ಣ : ಅರಳಿಲ್ಲ !

ಗೋ ೨ : ನಾನೊದೆವೆ ! ( ” )

ಕೃಷ್ಣ : ಏನಿಲ್ಲ !!

ಗೋ ೩ : ತುಳಿದೆನಿದೋ ! ( ” )

ಕೃಷ್ಣ : ತಳಿತಿಲ್ಲ !!!

ಗೋ ೪ : ಇಕೊ ಲತ್ತೆ ( ” )

ಕೃಷ್ಣ : ನೋವಾಯ್ತೆ ?

ರಾಧೆ : ಎನ್ನ ಚರಣತಾಡನ ವ್ಯರ್ಥ ! ( ಒದೆದ ಸದ್ದು )

ಕೃಷ್ಣ : ಸೈ ಸೈ !
ಚೆನ್ನಿ ತರುಣ ಅಶೋಕ ಕೃತಾರ್ಥ !

ಎಲ್ಲರೂ : ಕುಂಕುಮಾರುಣವರಳಿ ವೃಕ್ಷವು
ರಾಧಿಕೆಯ ಮೈಸಿರಿಗೆ ಸಾಕ್ಷವು !

( ಪಾರ್ಶ್ವ ಸಂಗೀತವೆಲ್ಲ ಉತ್ಕಟವಾಗಿ ವಿಜೃಂಭಿಸುವುದು )

ರಾಧೆ : ಮಲಯ ಪವನ ಬೀಸುತಿದೆ
ಮತ್ತು ಮಲರ ಪಸರ ಸೂಸುತಿದೆ
ಕೃಷ್ಣ : ಬನ ಮಧುಮಯ

ಮನ ಮುದಮಯ
ಜನ ಮದಮಯ
ಕುಸುಮಸಮಯ ಬರುತಿದೆ
ಕುಸುಮಶರನ ತರುತಿದೆ !

**ಗೋಪಿಯರೆಲ್ಲರೂ :** ನೀರೆ ನೀರಾಟಾ ನಿಶಾ-ನಾಥ ಸಮ್ರಾಟಾ !
ಕಂಗಳ ರಾಕಾ
ತಿಂಗಳ ಲೋಕಾ
ಕೂಡೇ ಕೊಂಡಾಟಾ ! ನಿಶಾs

ಮನದಣಿ ಕುಣಿವಾ
ಮಣಿವಾ
ತಣಿವಾ
ನವಿಲುಗಳೇ ಬಿಳಿಮುಗಿಲುಗಳೇ
ಗುಂಗಿನಲ್ಲಿ ಗೋಪ ಗೋವು
ರಂಗನಲ್ಲಿ ನಾವು-ನೀವು
ದಂಗು ಕೆಳೆ ಕೂಟಾ ! ನಿಶಾ ss

**( ಕೋಲಾಟ-ನೀರಾಟಗಳ ದನಿಗಳು ತೇಲಿಹೋಗುವುವು )**

೩

# ಕಾಮದಹನ

ನಿವೇದಕ : ರತಿ ಮನ್ಮಥರತಿ ನರ್ಮವಿನೋದಂ
ಮಿಥದೊಲಾಡುತಿರೆ ಅಲ್ಲೈ ತಂದನ್
ವ್ಯಥೆಯನ್ನರುಹಲು ದುಃಖಿತನಿಂದ್ರನ್
ಕಥಿಪೆವದನೆ ರಸರೂಪಕ ಸಾಂದ್ರಂ

( ದೇವಲೋಕದಲ್ಲಿ ಒಂದು ಭವನ. ರತಿಯ ಅಂತಃಪುರ. ರತಿ ವೀಣೆ ನುಡಿಸುತ್ತಿದ್ದಾಳೆ. ದೂರದಿಂದ ದೇವೇಂದ್ರನ ಆಗಮನಸೂಚಕ ಕಹಳೆ ದುಂದುಭಿಗಳು ಮಂದ-ಮಂದ್ರ ಸಮೀಪಿಸುತ್ತಿವೆ. ಗಮನವತ್ತ ಹಾಯ್ದು ರತಿಯ ವೀಣಾವಾದನ ನಿಧಾನವಾಗಿ ನಿಲ್ಲುವುದು. )

ಮನ್ಮಥ : ನಲ್ಲೆ, ನಿಲ್ಲದೆ ನುಡಿಸುತಿರು, ರತಿ
ವೀಣೆಯುಲಿಯಲಿ ರಾಗಿಣಿ !

ರತಿ : ನಾಥ, ಮನ್ಮಥ, ನಿನ್ನ ಸೊಲ್ಲನೆ
ಉಲಿವೆ ನಾ, ಕರದರಗಿಣಿ !

( ಇಬ್ಬರೂ ಕುಲು ಕುಲು ನಗುವರು. ರತಿ ವೀಣೆಯ ಮೇಲೆ ಒಮ್ಮೆ ಕೈಯಾಡಿಸುತ್ತಿದ್ದಂತೆ ಇಂದ್ರನಾಗಮನದ ಸದ್ದು ಸ್ಪಷ್ಟವಾಗುವುದು. )

ಮನ್ಮ : ಬಂದರಾರದು ? ಏನು ಗೊಂದಲ ?

( ರತಿ ಎದ್ದುಹೋಗಿ ನೋಡಿ ಓಡಿಬಂದ ನೂಪುರ ಧ್ವನಿ )

ರತಿ : ಇಂದ್ರದೇವನೆ ಬಂದಿಹ !

( ಮಂದಿರ ಪ್ರವೇಶದ ಘೋಷ "ದೇವಾಧಿದೇವ ಅಮರ ಪುರವರಾಧೀಶ್ವರ ಸಕಲ ಸುರತ್ರಾಣ ಶಚೀಪತಿ ಇಂದ್ರದೇವರಿಗೆ ಜಯವಾಗಲಿ ! " "ದೇವೇಂದ್ರರು ಹೀಗೆ ದಯಪಾಲಿಸಬೇಕು!" ಎಂಬ ದನಿಗಳೊಂದಿಗೆ ಇಂದ್ರನು ಪ್ರವೇಶಿಸುವನು. )

ಮನ್ಮ: ದೇವ ಏನಿದಪೂರ್ವ ಪರ್ವಣಿ !

ರತಿ :
ಮನ್ಮ: } ಸ್ವಾಗತವು ಸ್ವಾಗತವಹ !

ಇಂದ್ರ : ಕಾಮದೇವ ಬೇಡಿದು ಉಪಚಾರ
ನೇಮವಿಹುದು-ಗುರುತರವು ವಿಚಾರ

ಮನ್ಮ : ಆಜ್ಞೆ ! ಪ್ರಭೋ ಈ ಅನುಚರನು ಪ್ರ-
ತಿಜ್ಞೆ ಗೈವನ್ನೈ, ಸಾಧಿಪೆ ಕ್ಷಿಪ್ರ !

ರತಿ : ರಂಭಾಡಿದರೇ ರಂಭೆ-ಮೇನಕೆ ?
ಸಂಭಾವಿಸಿ ಅವರನು ತರಬೇಕೆ ?

ಇಂದ್ರ : ಅವರೇನು ಮಹಾ?

ಮನ್ಮ : -ಮಾಡಿದೆನೂಹಾ !

ಅವನದೋ ತಪನೀಡಿದೆ ದಾಹ !

ರತಿ : ಅಥವಾ ಯಾವನಿಗೋ ಶಚಿ-ಮೋಹ !

ಇಂದ್ರ : ಅಂಥದಲ್ಲ, ಅಂಥದಲ್ಲಿ ಬಂದ ಘೋರ ಸಂಕಟ
ಶಚಿಗೆ ಭೀತಿ, ತಪದ ಮಹತಿ ಬಾಧಿಸಿಲ್ಲ, ಇದು ದಿಟ!
ದೇವಕುಲಕೆ ಮಾರಕನಾಗಿಹನು ತಾರಕಾಸುರ
ಸ್ವರ್ಗದುರ್ಗ ಉರುಳಲಿದೆ ದಿಗಿಲಭುಗಿಲು, ಬೇಸರ !

ಮನ್ಮ : ಏತಕೆ ಭಯ? ಕಾತರತೆಯ
ಮಾಣು ದೇವದೇವನೇ !
ವಜ್ರ ವ್ಯರ್ಥವಾಗುವಲ್ಲಿ
ಹೂಡು ಪುಷ್ಪಧನುವನೆ !
ಅಸುರನಸುವ ಕಸವಿಸಿಗೊಳಿ-
ಸುವದು ಕುಸುಮಸಾಯಕ!

ರತಿ : ರತಿಯ ಶಕುತಿ ಅತಿ ಬಲವತಿ
ಜತೆಗಿರೆ ಋತುನಾಯಕ!

ಇಂದ್ರ : ಬಲ್ಲೆನದನು; ಅದನೆ ಬಳಸ ಬಯಸಿ ಬಂದೆನಾ
ಗೆಲುವದಲ್ಲ, ಕೊಲ್ಲುವದೆ ಲೇಸು ದೈತ್ಯನಾ !

ಮನ್ಮ : ಏನು ಸೇವೆ ಸಲಿಸಲಿ ?

ರತಿ : ಏನಾಣತಿ ? ...ತಿಳಿಸಲಿ !

ಇಂದ್ರ : ಸೇನಾನಿ ಸುರಬಲಕೆ ತಾನಾವನೂ ಇಲ್ಲ

ಮನ್ಮ : ನಾನಾಗಬಲ್ಲೆನೇ ( **ಕುತೂಹಲದಿಂದ** )

ಇಂದ್ರ : ನೀನಲ್ಲ ! ನೀನಲ್ಲ ! ( **ತಾಳ್ಮೆಗೆಟ್ಟು** )

ರತಿ : ಅವ ಎನಗೆ ನಲ್ಲ ! (**ಮೂವರೂ ನಗುವರು** )

ಇಂದ್ರ : ನಿಮಗೆ ನಲ್ಮೆಯ ಗೊತ್ತು
ನೀವೆ ನಲ್ಲರ ಸೊತ್ತು
ನಿಮ್ಮ ಗುರಿಕೆಯ ಗತ್ತು
ಬೇಕು ಈ ಹೊತ್ತು !

ಮನ್ಮ : ಏನಾಣತಿ? ತಿಳಿಸಲಿ !

ರತಿ : ಯಾವ ಸೇವೆ ಸಲಿಸಲಿ ?

ಇಂದ್ರ : ಸೇನಾನಿ ಸುರಬಲಕೆ
ಯಾವನೂ ಇಲ್ಲದಕೆ
ಶಿವ-ಶಕ್ತಿ ಸಂಯೋಗ
ಸಂಭವಿಸಬೇಕೀಗ
ಕಾರ್ತಿಕೇಯನ ಜನನ-
ತಾರಕಾಸುರ ಹನನ !

ಉನ್ನತ ಹಿಮಾದ್ರಿಯಲಿ
ಸನ್ನುತ ಮಹೇಶ ಬಲಿ
ಉಗ್ರ ತಪ-ವ್ಯಗ್ರ ನಿಹ-

ಮನ್ಮ : - ಸರಿ ಏನು ಸನ್ನಾಹ ?

ಇಂದ್ರ : ಶಿವನ ಸನಿಯದಿ ಸೇವೆ-
ಯಲಿ ಸುಳಿವಳತಿ ಚೆಲುವೆ
ಹಿಮಶೈಲಬಾಲೆ ಉಮೆ
ತ್ರಿಭುವನ ಮನೋರಮೆ !

ರತಿ : ( ಕೊಂಕಾಗಿ ) ಅನಿತಿಹಳೆ ಅಪ್ರತಿಮೆ ?
ಮನ್ಮ : ( ಸಂತೈಸಿ ) ಇರಲಿ ಬಿಡು, ಕೇಳೊಮ್ಮೆ
ಇಂದ್ರ : ದಕ್ಷಾಧ್ವರ ಧ್ವಂಸದಲ್ಲಿ
ಹತ ಸತಿಯೆ ಉಮೆಯು ಇಲ್ಲಿ
ಚಂದ್ರ ಮಾವತಂಸನಲ್ಲಿ
ರತಳು-ತರುವ ಬಯಪ ಬಳ್ಳಿ !

ಸಖ ವಸಂತನೊಡನೆ, ಒಡನೆ
ಸಖಿ ರತಿಯನು ಕೂಡಿ, ಓಡಿ

ಮೃಡನ ಮನವ ಮಥಿಸು ಪೋಗು
ದೇವ ಕಾರ್ಯ ಸಲಿಸು, ಸಾಗು !

(ಕೊನೆಯ ಎರಡು ಸಾಲುಗಳನ್ನು ದೇವತೆಗಳೆಲ್ಲ ಕೆಳದನಿಯಲ್ಲಿ ಮತ್ತೆ ಮತ್ತೆ ಒತ್ತಿಹೇಳುವರು, ಹಿನ್ನೆಲೆಯಲ್ಲಿ)

ಮನ್ಮ : ಮೃಡನ ಮನವ ಮಥಿಸಬೇಕು !

ರತಿ : ದೇವ ಕಾರ್ಯ ಸಲಿಸಬೇಕು!

ಇಬ್ಬರೂ : ಸಾಗುವೆವು ! ತಮ್ಮಡಿಗೆ ಬಾಗುವೆವು!
ನಮ್ಮೊಡೆಯ, ಪೋಗುವೆವು!

( ಈ ದನಿಗಳು ತೇಲಿ ದೂರ ಹೋಗುತ್ತವೆ. ಮತ್ತೆ ಸ್ಥಾನಾಂತರವನ್ನು ಸೂಚಿಸಲು ಹತ್ತಿರ ಬರುತ್ತವೆ. )

ಇಬ್ಬರೂ : ಸಾಗುವೆವು ! ತಮ್ಮಡಿಗೆ ಬಾಗುವೆವು!
ನಮ್ಮೊಡೆಯ, ಪೋಗುವೆವು!

ರತಿ : ಬಂದೆವು, ಇಕೊ ಹಿಮಪರ್ವತ!

ಮನ್ಮ : ನಿಂತಿದೆ ಅಕೊ ಶಿವದೈವತ!

ನಿವೇದಕ : ನಂದೀ ಭೃಂಗೀ ಶೃಂಗೀ ಪ್ರಮಥರು
ವಂದಿಸಿ ಸ್ಥಾಣುವ ಸ್ತೋತ್ರವ ಪಠಿಪರು
ನಂದಿನಿಯುಮೆ ತಾಪಸ ಸಿಂಗಾರದಿ
ಬಂದಳು ಪರವಶ ಪರಶಿವ ಸನ್ನಿಧಿ

ಪ್ರಮಥರ ಗೀತ : ಪಶುಪತಿ ಪರಶಿವ ಪರಿಪಾಹಿ!
ಜಯ ಹರ ಶಂಕರ
ಪ್ರಲಯ ಭಯಂಕರ
ಫಣೇಂದ್ರ ಭೂಷಣ
ತ್ರಿನೇತ್ರ ಭೀಷಣ
ಚಂದ್ರ ಮೌಳಿ
ರುಂಡಮಾಲಿ
ವ್ಯಾಘ್ರಾಂಬರ
ವಿಶ್ವಂಭರ-ವಿಶ್ವೇಶ್ವರ ತ್ರಾಹಿ !

ಶಿವ : ಹರಿ ಓಂ ತತ್‌ಸತ್

( ಎಂದು ದೀರ್ಘವಾಗಿ ಉಚ್ಚರಿಸಿ ಸಮಾಧಿಸ್ಥನಾಗುವನು. )

ನಂದಿ : ಸುಮ್ಮನಿರಿ ಪ್ರಮಥರೆ,
ಪ್ರಭು ಸಮಾಧಿಸ್ಥರೈ
ಪ್ರಣವಧ್ಯಾನ ಪ್ರವಣ
ಪದ್ಮಾಸನಸ್ಥರೈ ! ( ಶಂಖ ಊದುವನು )
ಶಂಖ ಡಮರು ಘಂಟೆ ಶೃಂಗ
ಮಂದ್ರ ದುಂದುಭೀ ಮೃದಂಗ
ನಾದ ಬ್ರಹ್ಮಮೊಳಗಲಿ !
ಓಂಕಾರದ ಏಕತಾನ-
ದಲ್ಲಿ ಧ್ಯಾನ ಬೆಳಗಲಿ !
ಆತ್ಮಲಿಂಗ ತೊಳಗಲಿ !
ಮೋಹ-ಮಾಯೆ ತೊಲಗಲಿ !

( ನಂದಿಯು ಉಲ್ಲೇಖಿಸಿದ ವಾದ್ಯಗಳೆಲ್ಲ ಸಮ್ಮೇಳದಲ್ಲಿ ಕೆಲನಿಮಿಷ ಮೊಳಗಿ ತೇಲಿಹೋಗುವ ದನಿ. )

ಮನ್ಮ : ಕಾಮನ ಶರಸಂಧಾನಕೆ ಎರಗನಾವ ವೀರ ?

ವಸಂತ : ಪ್ರೇಮದ ಅನುಸಂಧಾನಕೆ ಕರಗನಾವ ಧೀರ ?

( ದೂರದಿಂದ ನೂಪುರ ಧ್ವನಿ ಸಮೀಪಿಸುತ್ತದೆ )

ಮನ್ಮ : ರುಮ್ ಝುಂ ರುಮ್ ಝುಂ
ಯಾರ ಮಂಜು ನೂಪುರ ?

ವಸಂತ : ಯಾರದೇನು? ಶೈಲಬಾಲೆ
ಬಹಳು ಅನತಿ ದೂsರ

ಮನ್ಮ : ಅವಳ ಭ್ರೂವಿಲಾಸವೇ ನನ್ನ ಬಿಲ್ಲುಗಾರಿಕೆ

ವಸಂತ : ಶಿವನ ಸನಿಯ ಸಾರಳು ಉಮೆ ಸಾರ್ಥಕಳಭಿಸಾರಿಕೆ?

ವಸ್ಂತ : ನಡೆ ನಲ್ಲೆ, ರತಿ, ಹುಲ್ಲೆಯಂತೋಡು, ಉಮೆಯೆಡೆಗೆ
ಸಖನೇ ವಸಂತನೇ ನೀಡು ಬನಸಿರಿ ಕೊಡುಗೆ !

ವಸಂತ : ನೋಡುತಿರುವಂತೆ ಕಡು ಮಂಜು ಬೆಟ್ಟದಲಿ
ಬೀಡು ಬಿಡಲೀ ಬೆಡಗು ಸುಗ್ಗಿ ಹಿಗ್ಗುತಲಿ !

( ಅನುರೂಪವಾದ ಋತು ಪರಿವರ್ತನಸೂಚಕ ಸಂಗೀತ )

ಶೃಂಗಿ : ಏನಿದು ಚಿತ್ರ, ಭೃಂಗಿ ವಿಚಿತ್ರ

ಭೃಂಗಿ : ಶಿಶಿರ-ವಸಂತ, ಫಾಲ್ಗುಣ-ಚೈತ್ರ !

ನಂದಿ : ಸುಮ್ಮನಿರಿ ಪ್ರಮಥರೆ
ಪ್ರಭು ಸಮಾಧಿಸ್ಥರೈ ! (ಶಂಖಧ್ವನಿ)

ಶೃಂಗಿ : ನಾವು ಅಸ್ವಸ್ಥರೈ !

ಭೃಂಗಿ : ಮೋಹ ಮಧುತ್ರಸ್ತರೈ !

ನಂದಿ : ( ಸಿಟ್ಟಿನಿಂದ - ಆದರೆ ತಗ್ಗಿದ ದನಿಯಲ್ಲಿ )

ಸುಮ್ಮನಿರಿ ನೆನಪಿಡಿರಿ
ಹರನ ಹಣೆಗಣ್ಣೆನುರಿ ! ( **ಶಂಖಧ್ವನಿ ದೊಡ್ಡದಾಗಿ** )

ರತಿ : ನೋಡು ಉಮೆ ನವೋನವs
ವಾಸಂತಿಕ ವೈಭವs

ಉಮೆ : ಅಹುದು ಸಖಿ ! ಜಗವೆ ಸುಖಿ !
ಶಿವನ ಅಟ್ಟಹಾಸದಂತೆ
ತಾಂಡವದುಲ್ಲಾಸದಂತೆ
ಸುಗ್ಗಿ ಉಬ್ಬಿ ಹಬ್ಬಿದೆ
ಭೂಮಿ-ವ್ಯೋಮ ತಬ್ಬಿದೆ !

ರತಿ : ಚೂತಹೂತಲೋತು ಬಂತು
ಅರಸಿದುಂಬಿದಂಡು !

ಉಮೆ : ಕೋಕಿಲೆಗಳ ಕುಕಿಲನಣಕಿ-
ಸುವವೌ ಈ ಗಿಳಿವಿಂಡು !

ನಂದಿ : ಸುಮ್ಮನಿರಿ ತಾಯಂದಿರೆ !
ಶಿವಶಾಪ, ಇಲ್ಲದಿರೆ !

ರತಿ : ತಾಯದಿರು ಯಾರಿಲ್ಲಿ ?
ಉಮೆಗೆ ತಾಯ್ತನ ಬರಲಿ !

ಉಮೆ : ಚೀ, ಗೆಳತಿ ಆಡದಿರು
ಆ ಶಿಲಾಸ್ಥಂಡಿಲದಿ

ಆ ಲತಾಮಂಟಪದಿ
ಶಿವನಕೋ ಧ್ಯಾನಸ್ಥ !
ಶಾಂತ ವಸ್ತುಸಮಸ್ತ !

( **ಕ್ಷಣಕಾಲ ಮೌನ** )

**ಉಮೆ :** ನಂದಿಭದ್ರ !

**ನಂದಿ :** ನಗನಂದಿನಿ !

**ಉಮೆ :** ಶಿವಸೇವೆಗೆ ಸಮ್ಮತಿಯೇ ?

**ನಂದಿ :** ತಡೆಯಿರಿ, ಪ್ರಭು ಕಣ್ತೆರೆದಿದೆ
ಕೇಳಿಬರುವೆ, ಶ್ರೀಮತಿಯೇ !

( **ನಂದಿಯು ಒಳಹೊಕ್ಕ, ಆವಿಗೆಗಳ ಸದ್ದು. ಆತ ಹೊರಬರುವ ತನಕ ದೂರದಲ್ಲಿ ವಸಂತ-ಮನ್ಮಥರ ಸೊಲ್ಲು** )

**ಮನ್ಮಥ :** ಕಾಮನ ಶರಸಂಧಾನಕೆ ಎರಗನಾವ ವೀರ ?

**ವಸಂತ :** ಪ್ರೇಮದ ಅನುಸಂಧಾನಕೆ ಕರಗನಾವ ಧೀರ ?

( **ಶಿವನ ಸಮಾಧಿ ಸಮಾಪ್ತಿಸೂಚಕ ಶಂಖಧ್ವನಿ** )

**ಶಿವ :** ಹರಿ ಓಂss ತತ್‌ಸತ್ !
ನಂದಿಭದ್ರ

**ನಂದಿ :** ನಮೋರುದ್ರ

**ಶಿವ :** ಹೊರಗೇನು ಮೆಲುಮಾತು ?
ಯಾರವರು, ಹೇಳು ?

**ನಂದಿ :** ಪಾದಪರಿಚರ್ಯೆಗೆ
ಗಿರಿಜೆ ಕಾದಿಹಳು

**ಶಿವ :** ಬರಬಹುದು, ಒಳಗೆ ಬಿಡು

**ನಂದಿ :** ಬನ್ನಿ ತಾಯೆ, ಬನ್ನಿ ಇತ್ತ
ಸುಪ್ರಸನ್ನ ದೇವಚಿತ್ತ !

**ಮನ್ಮಥ :** ಸಖನೆ ವಸಂತ
ತಪದ ದುರಂತ

ನಮ್ಮ ನಾಟಕದ,
ನೋಡು, ಸುಖಾಂತ

**ವಸಂತ :** ಉಮೆ ತಲೆಬಾಗಿ
ವಂದನೆಗಾಗಿ
ಶಿವಪದಕೆರಗಲು
ಜಡೆ ಹೂ ವುದುರಲು
ಕೆನ್ನೆಗೆಂಪರಳೆ-
ನಾಚಿ ರತಿ ಮರುಳೆ !

**ರತಿ :** ಅಡಿಗೆರಗಿದ ಚಂದ್ರವದನ
ಕಂಡು ಮುಡಿಯ ಚಂದ್ರಮ್ಲಾನ !

ಸುರಸುಂದರಿ ನೀ ನಿರುಪಮೆ
ಶಿವಗನುರೂಪಳು ಪ್ರಿಯತಮೆ !

**ಉಮೆ :** ಓಂ ನಮಃ ಶಿವಾಯ !
ಓಂ ನಮಃ ಶಿವಾಯ !

**ಶಿವ :** ಬಯಸಿದ ವರ ಲಭಿಸಲಿ !
ಬಯಕೆಯ ವರ ಫಲಿಸಲಿ !

**ವಸಂತ :** ಓ ಮದನ ಇದೇ ಸಮಯ ಉಚಿತ ನಿನಗೆ
ಹೂಬಾಣ ಹೂಂ ಹೂಡು ಕಿವಿಗೆ ಬಿಲ್ಲ ನೆಗೆ !

( ಬಾಣ ವೇಗದ ಝೇಂಕಾರ ಮತ್ತು ಸುಂಯ್ಗುಡುವ ದನಿ. ಮತ್ತೆ ಮತ್ತೆ ಐದು ಸಲ ಅದೇ ದನಿ, ಹಿನ್ನೆಲೆಯಲ್ಲಿ )

**ಶಿವ :** ಏನಿದೇನಿದು ದಿಗಿಲು !
ಎಂದು ಇಲ್ಲದ ಭುಗಿಲು !
ಎದೆಯು ಝಲ್ಲೆನ್ನುತಿದೆ !
ಜಪಮಾಲೆ-ಜಾರುತಿದೆ ! ( ಮಾಲೆ ಬಿದ್ದ ಸದ್ದು )

**ಉಮೆ :** ಜಪಮಾಲೆ, ಇದೊ ಕೊಳ್ಳಿ ! ( " ಇದು ಕೊಳ್ಳಿ " ಒಳದನಿ )
ಬೆರಳು ಮುಟ್ಟಿತು ಕ್ಷಮಿಸಿ-

**ಶಿವ :** ಈ ಸ್ಪರ್ಷ ರಸವರ್ಷ !
ಸೈರಿಸೆನು! ಸಹನೆ ಹುಸಿ!

ಮನ್ಮ : ಪಂಚಪ್ರಾಣದಾಹುತಿ
ಪಂಚಬಾಣದಾಣತಿ!
ಸ್ಮರ ಸಾಯುಧನಾಗಿರುತಾ
ಹರ ಸಾವಧನೆಂತು ವೃಥಾ!

ಶಿವ : ತಾಪಸಕೆ ತಾಮಸವು ಕವಿದುದೆಂತು?
ಆರವನು? ಮನ್ಮಥಾ!-ಲಯವಾಗು ಸರ್ವಥಾ!

ವಸಂತ : ಸಂಹರಿಸು ಕ್ರೋಧವನು!

ರತಿ : ಶಪಿಸದಿರು ಶಿಶು ಅವನು!

( "ಕ್ರೋಧಂ ಪ್ರಭೋ ಸಂಹರ ! ಸಂಹರ !" ಎಂದು ಹಿನ್ನೆಲೆಯಲ್ಲಿ ದೇವಾದಿಕರದೆಲ್ಲ ಆರ್ತವಾಣಿ)

ನಂದಿ : ಓ ಭೃಂಗಿ ಓ ಶೃಂಗಿ!

ಶೃಂಗಿ :
ಭೃಂಗಿ : ಏನಂದಿ! ಏನಂದಿ?

ಎಲ್ಲರೂ : ಎಂಥ ರೌದ್ರ ಪ್ರಕೋಪ!
ಹಂತ! ಶಾಪಾಟೋಪ!

(ಆಕಾಶದಲ್ಲಿ ಆಕ್ರೋಶ-ಕೋಲಾಹಲ. ಸಿಡಿಲು-ಮಿಂಚುಗಳ ಗರ್ಜನೆ. ಉಮೆಯ ರತಿಯ ಹೆದರಿದ ಚೀತ್ಕಾರಗಳು.)

ನಂದಿ : ಘಾತ! ಉತ್ಪಾತ!

ಶೃಂಗಿ : -ಶಿವನಾದನಂತರ್ಧಾನ!

ಭೃಂಗಿ : ಆಕಾಶದುದ್ದಕೂ ಅಗ್ನಿಜ್ವಾಲೋಡ್ಡಾಣ!

ನಂದಿ : ಸ್ಮರನ ವಿಸ್ಮರಣವಿದು
ಕಾಮದಹನ ದುರಂತ!

ರತಿ: (ವಿಲಪಿಸುವಳು)

ಹೃದಯರಮಣ ಅಗಲಿದೆಯಾ
ಪ್ರಿಯ ಸಖಿಯಾ
ಬಾಳಬೆಳಕೆ ತೊಲಗಿದೆಯಾ
ಹೇ, ಅದಯಾ!
ಅಂತಪಾರವಿಲ್ಲದಂಥ
ಅಂಧಕಾರಮಯ ದಿಗಂತ

ಎಂತೊ ಎಂದೊ ಮಿಲನ ಪ್ರಿಯಾ
ಮರೆತಿಹೆಯಾ ?
ಶಿವ ಶಿವಾss **(ಅಳುವಳು)**

**ಶಿವ :** ಶೋಕಿಸದಿರು ಹೇ ಭೀರು ಬಾಲಿಕೆ
ಲೋಕದೆದೆಗೆ ಕಾಮನದೇ ಆಳಿಕೆ
ಅಂಗವಾದುದಂಗಾರವು; ಆತನೆ
ಅನಂಗನಂಗಜ ಅನಂತ ಚೇತನೆ
ಕಾಯವಳಿದರೂ ಸಾಯದುಳಿಯುವಾ
ನಿನ್ನೊಳು ನಿನ್ನೊಲು ಕಾವ ಕಾಯುವಾ!

**(ಮಂಗಲ ವಾದ್ಯಗಳು ಮೊಳಗುವುವು. ಹೋಳಿಯ ಹಬ್ಬದ ಓಕುಳಿಯ ಬೀದಿ ಗದ್ದಲದಲ್ಲಿ ರೂಪಕ ಮುಗಿಯುವುದು.)**

೪

# ಕ್ರೌಂಚಧ್ವನಿ

ಅಥವಾ

# ರಾಮನವಮಿ

**(ಹಿನ್ನೆಲೆಯಲ್ಲಿ ತಂಬೂರಿಯ ಝೇಂಕಾರದ ಜತೆಗೆ ವೀಣೆಯ ಸ್ವರಾಲಾಪ ಮಹರ್ಷಿ ನಾರದರ ನಾಮಸಂಕೀರ್ತನೆ:**

"ಓಂ ನಮೋ ಭಗವತೇ ವಾಸುದೇವಾಯ ತೇ"
"ಓಂ ನಮೋ ಭಗವತೇ ವಾಸುದೇವಾಯ ತೇ"
-ಭಜನೆ ಮೊದಲು ಹತ್ತಿರ, ಸ್ಪಷ್ಟ. ಆಮೇಲೆ ದೂರದೂರ ತೇಲುವ ದನಿ.)

**ನಿವೇದಕ :** ದೇವರ್ಷಿ ನಾರದರ ಸ್ವರ್ಗಸೋಪಾನ
ಶ್ರೀರಾಮ ಚಂದ್ರಿಕಾ ಸೋಮರಸಪಾನ
ವಾಲ್ಮೀಕಿಯಾಶ್ರಮದಿ ಅದುವೆ ಗುಣಗಾನ

**ಆಶ್ರಮ ಒಟುಗಳು :** ಶ್ರೀರಾಮಃ ಶರಣಂ ಸಮಸ್ತ ಜಗತಾಂ
ರಾಮಂ ವಿನಾ ಕಾಗತಿಃ
ರಾಮೇಣ ಪ್ರತಿಹನ್ಯತೇ ಕಲಿಮಲಂ
ರಾಮಾಯ ಕಾರ್ಯಂ ನಮಃ
ರಾಮಾತ್ ತ್ರಸ್ಯತಿ ಕಾಲಭೀಮ ಭುಜಗೋ
ರಾಮಸ್ಯ ಸರ್ವಂ ವಶಂ
ರಾಮೇ ಭಕ್ತಿರಖಂಡಿತಾ ಭವತು ಮೇ
ರಾಮ ತ್ವಮೇವಾಶ್ರಯಃ"

**ವಾಲ್ಮೀಕಿ:** **(ನಗುತ್ತ ಪ್ರವೇಶಿಸಿ)**
"ರಾಮತ್ವಮೇವಾಶ್ರಯಃ ರಾಮತ್ವವೇ ಆಶ್ರಮಃ! ಹಃ ಹಃ ಹಃ
ದೇವರ್ಷಿ ನಾರದರು ನೀಡಿಹೋದರು ದೀಕ್ಷೆ
ಆರ್ಯ ಚರಿತಾದರ್ಶ ನಿಮಗದುವೆ ಸುಭಿಕ್ಷೆ!
ನನ್ನ ಪ್ರತಿಭೆ ಪ್ರತಿಜ್ಞೆ
ಕಾಮಮಯ ಸಂಪ್ರಜ್ಞೆ
ಕಾವ್ಯ ರಸ ಸಿಸೃಕ್ಷೆ
ದಿವ್ಯ ಸ್ಫೂರ್ತಿ ನಿರೀಕ್ಷೆ

**(ನಿಟ್ಟುಸಿರು. ಆಡುತ್ತ ಆಡುತ್ತ ಮಹರ್ಷಿಯು ಗಂಭೀರನಾಗುವನು.)**
**(ಶಂಖಧ್ವನಿ-"ಪ್ರಾತಃಸವನವೇಲಾ ಸಮುಪಸ್ಥಿತಾ" ಮತ್ತೆ ಶಂಖಧ್ವನಿ.)**

ವಾಲ್ಮೀಕಿ : ಏಳಿ ಒಟುಗಳೆ ಕಾಡಿಗೆ ತೆರಳಿ
ಕುಶಸಮಿತ್ಕುಸುಮ ಆಯುತ ಮರಳಿ

**(ಒಟುಗಳೆಲ್ಲ "ಅಹಂ ಭೋ ಅಭಿವಾದಯೇ!" ಎಂದೆದ್ದು ಹೋಗುವ ಗದ್ದಲ)**

ಭಾರದ್ವಾಜನೆ ಹೊರಡು ಹೋಗುವಾ
ತಮಸಾತೀರಕೆ-ಸ್ನಾನವೆಸಗುವಾ

**(ಎರಡು ಜೊತೆ ಪಾದುಕೆಗಳು ಹೊರಟು ನಡೆದ ಸದ್ದು. ದೂರ ಹೋಗಿ ಹತ್ತಿರ ಬರುವುದು. ಹೊಳೆಯ ನೀರಿನ ಗಾಳಿಯ ಹಕ್ಕಿಗಳ ಮರ್ಮರ ಚಲಿಪಿಲಿ ದನಿ.)**

ಭಾರದ್ವಾಜ : ಗುರುಗಳೇ ನೋಡಿರಿದು ಎನಿತ್ತೆ ಮನೋರಮಾ
ತೀರ್ಥವು ಪ್ರಸನ್ನಜಲ ನಿರ್ಮಲ ಆಕರ್ದಮಾ

ವಾಲ್ಮೀಕಿ : ಸಜ್ಜನ ಮನೋಪಮಾ!
ಕೊಡು ಇತ್ತ ವಲ್ಕಲವ, ಇಡು ಕಲಶವಲ್ಲಿ
ಮಜ್ಜನಕೆ ಮುಳುಗುವೆನು-
**(ಮುಳುಗಿದ ಸದ್ದು)** - ಅಹ ! ಸೊಗಸಿಲ್ಲಿ!

ಭಾರದ್ವಾಜ : ಅಲೆರಂಗವಲ್ಲಿ
ವಿಪುಲ ಬನ-ಬಳ್ಳಿ
ಚೆಲುವೆ ಬಲೆಚೆಲ್ಲಿ
ಬೇಟೆಗಿಹ ಭಿಲ್ಲಿ!

**(ಕ್ರೌಂಚಪಕ್ಷಿಗಳ ದನಿ)**

ಆಹ! ಗುರುಗಳೆ ಕೇಳಿ
ಕ್ರೌಂಚ ಮಿಥುನದ ಕೇಳಿ
ಇಂಚರದ ಚಿಲಿಪಿಲಿ

**(ಸುಂಯ್ಯನೆ ಬಾಣವೊಂದು ಬಂದು ಗಂಡು ಹಕ್ಕಿಗೆ ನಾಟದ ಸದ್ದು, ಹಕ್ಕಿಯ ಕರ್ಕಶ ಚೀತ್ಕಾರ. ಕೆಳಗೆ ಬಿದ್ದ ಸದ್ದು)**

ಭಾರದ್ವಾಜ : ಅಯ್ಯೋ ಏನೀ ಘಾತ!
ಮರಣ ಮರ್ಮಾಘಾತ!
ಅರಳೆಗಶನಿಯ ಪಾತ!
ಬಾಣ ಬಿಟ್ಟನು ವ್ಯಾಧ
ವೈರನಿಲಯ ನಿಷಾದ
ಪ್ರಾಣಬಿಟ್ಟನೊ ವಿದ್ದ
ಕ್ರೌಂಚನಿಕೊ-ಬಿದ್ದ ಬಿದ್ದ!

(ಕ್ರೌಂಚಿಯ ಆರ್ತ ಚೀತ್ಕಾರದ ಮೇಲೆ ಚೀತ್ಕಾರ. ಹಿನ್ನೆಲೆಗೆ ಕ್ರೌಂಚವು ರೆಕ್ಕೆ ಫಡಫಡಿಸಿ ನರಳುವ ಸದ್ದು. ವಾಲ್ಮೀಕಿ ಎದ್ದು ಬರುವ ಸದ್ದು)

ವಾಲ್ಮೀಕಿ : ಏನಿದು ಘೋರ! ಏನಿದು ಕ್ರೂರ!
"ಮಾನಿಷಾದ ಪ್ರತಿಷ್ಠಾಂ ತ್ವಂ ಅಗಮಃ ಶಾಶ್ವತೀ ಸಮಾಃ
ಯತ್‌ಕ್ರೌಂಚ ಮಿಥುನಾದೇಕಂ ಅವಧೀ ಕಾಮ
ಮೋಹಿತಂ"

(ಹಿನ್ನಲೆಯಲ್ಲಿ ಕ್ರೌಂಚಿಯ ಚೀತ್ಕಾರ ನಡೆದೇ ಇದೆ.)

ನಿವೇದಕ : ತಮಸೆಯ ತೀರದಿ ತಾಮಸವೆಸಗಿತು
ತಾಪಸ ಹೃದಯದಿ ಕರುಣೆಯುಮಸಗಿತ

ಭಾರದ್ವಾಜ : ಏನಿದು ಕ್ರೂರ! ಏನಿದು ಘೋರ!
ಪಾಪರೂಪಿಗೆ ಶಾಪ ಪ್ರಹಾರ!

ವಾಲ್ಮೀಕಿ : ಶಾಪವಲ್ಲವಿದು ವೃತ್ತಾಕಾರ
ಅನುಷ್ಟುಪು-ಸ್ವಚ್ಛಂದ ಸುಂದರ
ಪಾದಬದ್ಧ ಅಕ್ಷರಸಮ ತಂತ್ರೀ ಜತಿಗೂಡುವ
ಶೋಕಾಕುಲ ಹೃದಯಕಲಿತ ಶ್ಲೋಕವಿದು ನವೋನವ

ನಿವೇದಕ : ಕ್ರೌಂಚದರ್ಶನ ಕವಿಯು ಮಂತ್ರ ದ್ರಷ್ಟಾರ!
ಕರುಣೈಕ ರಸಪಾಕದಾದಿಸ್ರಷ್ಟಾರ!
ಮಿಂದೆದ್ದು ನೊಂದೆದ್ದು ಆಶ್ರಮವ ಸೇರ್ದ
ಪೂರ್ಣ ಕಲಶವ ಪಿಡಿದು ಶಿಷ್ಯನನುಸಾರ್ದ.

(ಸ್ಥಾನಾಂತರಸೂಚಕ ಸಂಗೀತಪಲ್ಲಟ)

ಒಟುಗಳು :

ದನಿ ೧ : ಮುನಿಗಳೇಕೆ ಮೌನ ?

ದನಿ ೨ : ಗುರುಗಳೇಕೆ ಖಿನ್ನ ?

ದನಿ ೩ : ಹೇಳು ಭಾರದ್ವಾಜ-

ಭಾರದ್ವಾಜ : ತಡೆಯಿರೊ-ಯಾರೋ ದ್ವಿಜ
ಬಂದರಿಕೊ ದ್ವಾರದಿ ನಿಜ

ಒಟುಗಳು : ಲೋಕಪಿತಾಮಹ ಬ್ರಹ್ಮದೇವನಹ!
ಬಂದಿಹರು ಗುರೋ, ತಮಗಿದೋ ಸನಿಹ

(ಶಂಖ-ಜಾಗಟೆಗಳೊಂದಿಗೆ "ಸ್ವಾಗತಂ ಸ್ವಾಗತಂ" ಘೋಷ)

ಬ್ರಹ್ಮ : ಶೋಕಪರಾಯಣ ಹೇ ವಾಲ್ಮೀಕಿ
ನೀನೇ ಆದಿಕವಿ!
ಆಮ್ನಾಯದ ಹೊರ ಹೊಸ ಅವತಾರೀ
ಛಂದೋ ಬಂಧ ಭವಿ !
ನಾರದನೊರೆದಾ ರಾಮಕಥಾಮೃತ
ಶ್ಲೋಕಬಂಧದಲಿ ಶೋಭಿಸಲಿ !
ನಿನ್ನ ವಾಕ್ಯವೆಂದಾಗದು ಅನೃತ
ಲೋಕೋತ್ತರವು ವಿಲೋಭಿಸಲಿ !
ಯಾವನಕವು ನಿಂತಿರುವುವು ಗಿರಿಗಳು
ಯಾವನಕವು ಹರಿಯುವವೈ ಝರಿಗಳು
ಆತನಕವು ರಾಮಾಯಣ ಕಾವ್ಯವು
ಅಜರ ಅಮರ ಧರೆಯೊಳು ಬಹುಭಾವ್ಯವು!

ವಾಲ್ಮೀಕಿ : ಪ್ರಜಾಪತೇ ನಮಸ್ತುತೇ!
ಒಟುಗಳು : ( ಎರಗುವರು )

ನಿವೇದಕ : "ಉಪಸ್ಪೃಶ್ಯೋದಕಂ ಸಮ್ಯಕ್
ಮುನಿಸ್ಥಿತ್ವಾ ಕೃತಾಂಜಲಿಃ
ಪ್ರಾಜೀನಾಗ್ರೇಷು ದರ್ಭೇಷು-
ಧರ್ಮೇಣಾನ್ವೇಷತೇ ಗತಿಂ
ಸಮುದ್ರಮಿವ ರತ್ನಾಢ್ಯಂ-
ಸರ್ವಶ್ರುತಿಮನೋಹರಂ
ರಘುವಂಶಸ್ಯ ಚರಿತಂ-
ಚಕಾರ ಭಗವಾನ್ ಮಾನಿಃ
ಜನ್ಮ ರಾಮಸ್ಯ ಸುಮಹತ್-
ವೀರ್ಯಂ ಸರ್ವಾನುಕೂಲತಾಂ
ಲೋಕಸ್ಯ ಪ್ರಿಯತಾಂ ಕ್ಷಾಂತಿಂ-
ಸೌಮ್ಯತಾಂ ಸತ್ಯಶೀಲತಾಂ॥"
- ಈ ಪರಿಕ್ರೌಂಚಿಯ ಕರುಣಾಲಾಪಂ
ಭೂಮಿಯ ಭೀತಿಯ ಶೋಕಪ್ರತೀಪಂ

ಭೂಮಿದೇವಿ : ಪೊರೆಯಲಾರೆಯಾ? ಅಭಯ ಒರೆಯಲಾರೆಯಾ?
ಆಲದೆಲೆಯಮೇಲೆ ತೇಲೆ

ಬಾಲಹರಿಯ ಕಾಲಲೀಲೆ
ಪ್ರಳಯದಂಥ ಜಲಧಿಯೊಳೆ
ಅಂದು ಸಲುಹಿದಂದ ನನ್ನ ಪೊರೆಯಲಾರೆಯಾ?
ದುರುಳರಕ್ಷ ಹಿರಣ್ಯಾಕ್ಷ
ಸುರುಳಿಸುತ್ತಿ ನನ್ನನೆತ್ತಿ
ತೆರಳಿದಂದು ನರಳಿನೊಂದು
ಕರೆದಾಗಲೆ ಕರಗಿಬಂದು
ಪೊರೆದ ಕರುಣೆ, ಮರಳಿ ಇಂದು ದೊರೆಯಲಾರೆಯಾ?
ಲೋಕಕಂಟಕನು ರಾವಣ
ಆಕ್ರಮಿಸಿಹನೊ ತ್ರಿಭುವನ
ತಡೆಯಲಾರೆ ತಾಪವವನ
ಒಡನೆ ಕಾಯೊ ಒಡೆಯ ಮೌನ ತೊರೆಯಲಾರೆಯಾ?

(ಹಿನ್ನೆಲೆಯಲ್ಲಿ ಕ್ರೌಂಚಿಯ ಚೀತ್ಕಾರ ನಡೆದೇ ಇದೆ. ಅದರ ಮೇಲೆ ಆಕ್ರೋಶ ಕೋಲಾಹಲ-ದಂಡು ದೌಡಿನ ಸದ್ದು-"ಅಯ್ಯೋ! ರಾಕ್ಷಸ!" "ಅಯ್ಯೋ ರಾವಣ!" "ಅವ್ವಯ್ಯ!" "ದಮ್ಮಯ್ಯ!" "ದೈತ್ಯರ ದಂಡು" "ಹುಲಿಗಳ ಹಿಂಡು" "ಬಂತು, ನೋಡಿ" "ಓಡಿ, ಓಡಿ!"-ಎಂದೆಲ್ಲ ಗಂಡು ಹೆಣ್ಣು ಕೂಗುಗಗಳು-ಅದನ್ನೆಲ್ಲ ಮೀರಿ ಮೊಳಗುವುದು-ರಾವಣನ ಅಟ್ಟಹಾಸ-ಬೇಡನ ಅಟ್ಟಹಾಸವನ್ನೆ ಅಣಕಿಸುವಂತೆ.)

(ಇದೆಲ್ಲ ನಾದ ಪಟಲದ ಮೇಲೆ ಬಿತ್ತರಿಸುವುದು. ಶಾಪವಾಣಿ- "ಮಾನಿಷಾದ ಪ್ರತಿಷ್ಠಾತ್ವಂ ಅಗಮಃ ಶಾಶ್ವತೀ ಸಮಾಃ"

ರಾವಣ : (ಗಹಗಹಿಸಿ)
ಮಾ ನಿಷಾದ! ಮಾ ನಿಷಾದ!
ಯಾರದೀ ವೃಥಾ ವಿಷಾದ?
ಹೇಡಿ ಮಾನವನ ಪ್ರವಾದ
ಬ್ರಹ್ಮನಿತ್ತ ವರ ಹಸಾದ! ಹಃ ಹಃ ಹಃ
ದಶದಿಕ್ಕಿಗು ನನ್ನದೆ ಮುಖ
ನಿಲ್ಲಬಲ್ಲರಾರ್ ಸನ್ಮುಖ?
ದೇವಯಕ್ಷಗಂss ಧರ್ವ
ಕಿನ್ನರ ಪನ್ನಗರು ಸರ್ವ
ಗಲಿತಗಾತ್ರ ದಲಿತಗರ್ವ
ನಾನೋಡಿದ ನಿಟ್ಟೆ ಪೂರ್ವ
ನಾನಡೆದುದೆ ಪುಣ್ಯಪರ್ವ! ಹಃ ಹಃ ಹಃ
ಕೈಲಾಸ-ತ್ರಿವಿಷ್ಟ ಪ-

ನವಖಂಡಕು ನಾನೆ ಅಧಿಪ
ಚಾಚಿ ನನ್ನ ಕಾಳಹಸ್ತ
ಲೋಕತ್ರಯ ಭಯಗ್ರಸ್ತ!
ವಿಶ್ವವೇ ಅಸ್ತವ್ಯಸ್ತ
ಸಂಸಾರವೆ ಸಂತ್ರಸ್ತ! ಹಃ ಹಃ ಹಃ

ನಿವೇದಕ : ಆಪರಿ ಕ್ರೌಂಚಿಯ ಕರುಣವಿಲಾಪಽ
ಕೌಸಲ್ಯೆಯ ಕೊರಗಿನ ಪ್ರತಿರೂಪಽ
ಕೋಸಲಕಿಲ್ಲವೆ ರಘುಕುಲದೀಪ?
ಅಯ್ಯೋಽಽ ಪಾಪ! ಅಯ್ಯೋಽಽ ಪಾಪ!

(ಕ್ರೌಂಚಿಯ ದನಿಯ ಹಿನ್ನೆಲೆಯಲ್ಲಿ ಕೌಸಲ್ಯೆಯ ಗೀತ)

ಕೌಸಲ್ಯಾ : ಯಾವಽ ಜನ್ಮದ ಪಾಪ
ಯಾವಽ ದೈವದ ಶಾಪ
ಬಾಧಿಸಿದೆಽ ಛಲ ಸಾಧಿಸಿದೆಽ
ಕೂಸಿಲ್ಲದೀ ಒಡಲು
ಮೊಲೆಯುಣಿಸದೀ ಮಡಲು

ಯಾರಿಗೂಽ ಬೇಡಽ ಯಾವಳೂಽ ಬೇಡಽ
ಯಾಕೆ ವಸ್ತ ಒಡವಿ?
ಯಾಕೀ ಒಕ್ಕೂಡೆ ಪೊಡವಿ?
ನನಗಿಂತಲೂ ಬಡವಿ
ಯಾರಿಹಳೌ? ಹಾ! ಯಾರಿಹಳೌ?

ಕರುವ ನೆಕ್ಕುವ ಆವು
ಬಳ್ಳಿಯಾಡಿಪ ಹೂವು
ಮರಿಗೆ ಹಕ್ಕಿಯ ಕಾವು
ನೋಂತ ಏೀ ಕಣ್ಣು! ನಾನೆಂಥ ಹೆಣ್ಣು?

ದಶರಥ : ಪ್ರಿಯೆ ವೃಥಾ ಯಾಕೆ ವ್ಯಥಾ
ಕರ್ಮದಿದುರು ಯಾವ ಕಥಾ?

ಯಾರು ನನ್ನನಂತರ
ಕೊರಗುವೆನು ನಿರಂತರ

ಪೂಜ್ಯ ಗುರು ವಸಿಷ್ಠರೆ,
ರಾಜ್ಯ ಕ್ಷೇಮನಿಷ್ಠರೆ,

ಅಹುದೇ ನಾ ನಿಪುತ್ರಿ ಕs ?-
ಇಹಪರದೊಳು ನಿರ್ಗತಿಕ?

ವಸಿಷ್ಠ : ಆsಹ್ವಾನಪತ್ರಿಕಾ
ಯಜ್ಞಕೆ ಸಾರ್ವತ್ರಿ ಕs
ಕಳುಹಿಸಯ್ಯ ದಶರಥs
ಫಲಿಸೆ ತವ ಮನೋರಥs

ಕೌಸಲ್ಯೆ : ಯಾವ ಯಜ್ಞ ಮುನಿವರ್ಯ?

ದಶರಥ : ಯಜ್ಞವಹುದೆ ಅನಿವಾರ್ಯ?

ವಸಿಷ್ಠ : ಅಹುದದೊಂದೆ ಕಾರ್ಯಪುಷ್ಟಿ
ಇಲ್ಲದಿರೆ ಮಹತೀ ವಿನಷ್ಟಿ
ಪಿತೃಕಾಮತುಷ್ಟಿ
ಪುತ್ರ ಕಾಮೇಷ್ಟಿ
ಯಜ್ಞಾಶ್ವವು ಸಂಚರಿಸಲಿ

ದಶರಥ:
ಕೌಸಲ್ಯೆ: } ಆಜ್ಞೆ, ಗುರುಹಸಾದವಿರಲಿ!

(ಯಜ್ಞಾಶ್ವದೊಂದಿಗೆ ವಾದ್ಯ ವಿಜೃಂಭಣೆಯಿಂದ ಸೈನ್ಯವು ಹೊರಟುಹೋದ ಸದ್ದುಗಳು.)

ನಿವೇದಕ : ಮುಗಿಯಿತೊಂದು ಸಂವತ್ಸರ
ಯಜ್ಞಾಶ್ವವು ನಿರ್ಮತ್ಸರ
ತಿರುಗಿ ಬಂತಯೋಧ್ಯೆಗೆ
ಶರಯೂ ನದಿಯುತ್ತರಕೆ
ಪುತ್ರ ಕಾಮಾಶ್ವಮೇಧ
ಸತ್ರವನ್ನು ಸಾಂಗಗೈದ
ಋಷ್ಯಶೃಂಗ ಪುರೋಹಿತ
ಋಷಿ ಋತ್ವಿಜ ರಾಜಸಹಿತ

ಕೌಸಲ್ಯೆ : ಮೇಧಾಶ್ವ ಪರಿಚರ್ಯಾ
ಸಾಧಿಸಿದೆನು ಗುರುವರ್ಯs !

**ವಸಿಷ್ಠ :** ಕೌಸಲ್ಯೆ ಕೈಕೇಯ-ರಾಣಿ ಸುಮಿತ್ರಾ
ಮೂರು ಕೃಪಾಣಗಳಿವನು ಕೊಳ್ಳಿ ಪವಿತ್ರs
ಅಶ್ವವ ಸ್ಪರ್ಶಿಸಿ ಸಂತಾನೋದಯಕ್ಕೆ
ವಿಶ್ವಾಸದಿ ಕಳೆಯಿರಿರುಳ ಹಯದ ಸನಿಯಕೆ

**(ಯಜ್ಞವಿಧಿಯ ಮಂತ್ರಘೋಷ ವಾದ್ಯಘೋಷ)**

**ನಿವೇದಕ :** ಅಧ್ವರ್ಯು ಹೋತಾ ಮತ್ತು ಉದ್ಗಾತಾ
ಪಾಡಿದರು ಯಜ್ಞೇಶ್ವರಗುಣಗಾಥಾ

**ವೃಂದಗೀತ:** **(ಗಂಡು ದನಿಗಳು):**
ಜಯದೇವ ಜಯದೇವ ಜಯ ಯಜ್ಞ ಪುರುಷಾ
ಹಯಮೇಧ ಫಲವೀಯೋ ಕಾಯೋ ಹುತಾಶಾ
ರಕ್ತಾಂಭರ ರಕ್ತಾನನ ಕೃಷ್ಣಾಂಗ ಸುವರ್ಣಾ
ದಿವ್ಯಾಭರಣವಿಭೂಷಿತ ಶುಭಲಕ್ಷಣ ಪೂರ್ಣಾ
ಹರಿಕೇಸರ ಕೇಶಾಂಕುರ ಗಿರಿಶೃಂಗೋಪಮನೆ
ದುಂದುಭಿ ನಿಸ್ವನ ವಾಣಿಯ ದಯಪಾಲಿಸು ಜವನೆ

**(ಹರ್ಷಸಂಭ್ರಮ. "ನಮೋ ಯಜ್ಞ ನಾರಾಯಣಾಯ!" "ಯಜ್ಞೇಶ್ವರನು ಪ್ರಸನ್ನ!" " ಯಜ್ಞಪುರುಷ ಪ್ರತ್ಯಕ್ಷ!"-ಎಂಬ ಸಾಮೂಹಿಕ ಕೂಗುಗಳು. ಮಂಗಲ ವಾದ್ಯಗಳು)**

**ಯಜ್ಞ ಪುರುಷ :** ದಿವ್ಯಪಾಯಸ ಕುಂಭ ಸ್ವೀಕರಿಸು ರಾಜನ್

**ದಶರಥ :** ಹವ್ಯವಾಹನ, ಧನ್ಯನಾದೆನಿಂದು ಭಗವಾನ್

**ಯಜ್ಞಪುರುಷ :** ರಾಣಿಯರೊಳನುರೂಪನೀಡು ಸೇವಿಸಲು
ಕಾಣುವರು ಯಜ್ಞಫಲ ಗರ್ಭವನಿತರೊಳು

**ದಶರಥ :** ಯಜ್ಞೇಶ್ವರನ ಭೃತ್ಯ-
ಇಂದು ನಾ ಕೃತಕೃತ್ಯ!
ದೇವನಂತರ್ಧಾನ!
ಎಂಥ ಭಾಗ್ಯವಿಧಾನ!
**(ಕರೆಯುವನು)**

ಕೌಸಲ್ಯಾ! ಕೈಕೇಯಿ! ರಾಣಿ ಸುಮಿತ್ರಾ

**ಮೂವರೂ :** **(ದೂರದಿಂದ)**
ಬಂದೆವು, ಬಂದೆವು-

ದಶರಥ : ನೀವೇ ಸತ್ಪಾತ್ರs !
ಪಾಯಸದರ್ಧವ ಕೊಳ್ಳಿದೊ ಹೇ ಪ್ರಿಯ ಸಮ್ರಾಜ್ಞೀ

ಕೌಸಲ್ಯೆ : ದೇವಾನುಗ್ರಹ ಧನ್ಯಳು-

ದಶರಥ : -ಸುಮಿತ್ರಾ ರಾಣೀ!
ಅರ್ಧದ ಅರ್ಧವ ಕೊಳ್ಳಿದೊ

ಸುಮಿತ್ರೆ : ನಾನಾಜನ್ಮ ಋಣಿ!

ದಶರಥ : ಉಳಿದುದರರ್ಧವ ನೀಡುವೆ,
ಪ್ರಿಯತಮೆ ಕೈಕೇಯೀ

ಕೈಕೇಯಿ : ನಿಮ್ಮೊಂದೊಲುಮೆಯು ಸಾಲದೆ,
ಯಜ್ಞಪ್ರಸಾದಮಯೀ?

ದಶರಥ : ಇನ್ನುಳಿದಿದೆ ಅದರರ್ಧವು
ನೀಡುವದಿದನಾರ್ಗೆ?
ನರ್ಮ ಸಖೀ ನಮ್ರಮುಖೀ
ಸೌಮಿತ್ರೆಗೆ ಸೇರ್ಗೆ!

ನಿವೇದಕ : ದಶರಥನೀತೆರ ಯಜ್ಞಫಲ
ಹಂಚಲು ಬಿಡಿಬಿಡಿ ಮಡದಿಯರೊಳ್
ಕೌಸಲ್ಯೆಯು ಶೋಭಿಸಿದಳಹಾ!
ಇಂದ್ರಗರ್ಭಳಾ ಅದಿತಿಯವೊಲ್!
ಇಂದ್ರ ಸಿದ್ಧ-ಗಂಧರ್ವ ದೇವ-ಋಷಿ
ಲೋಕಕರ್ತ ಬ್ರಹ್ಮನ ಸಹಿತ
ಮೊರೆಯಿಟ್ಟರು ಮೊರೆವಂದ ಕಾರ್ಗಡಲು
ಶ್ರೀಹರಿ ಕರುಣೆಯನೇ ವಿಹಿತ

ವೃಂದಗೀತ : (ಗಂಡು ದನಿಗಳು)
ತ್ರಾಹಿ, ತ್ರಾಹಿ, ತ್ರಾಹಿ! ಪ್ರಭೊ,
ಪಾಹಿ, ಪಾಹಿ, ಪಾಹಿ!
ಲೋಕತ್ರಯ ತ್ರಸ್ತವಹಾ
ರಾವಣಭಯಗ್ರಸ್ತವಹಾ

ಬ್ರಹ್ಮವರದಿ ಮೋಹಮತ್ತ
ಬ್ರಹ್ಮಾಂಡವ ಬಾಧಿಸುತ್ತ
ಸ್ವರ್ಗ-ಮರ್ತ್ಯ-ಪಾತಾಳ
ವ್ಯಾಪಿಸಿಹನು ಬೇsತಾಳ
ಅವನೆದುರಿಗೆ ಸೂರ್ಯನುರಿಯ!
ಅವನ ಬದಿಗೆ ವಾಯು ಹರಿಯ!
ಭೋರ್ಗರೆಯುವ ಕಡಲು ಕೂಡ-
ಅವನ ಅಡಿಗೆ ಅಲೆಯ ಸರಿಯ!

ಶ್ರೀವಿಷ್ಣು : ಬಿಡಿರಿ ಭಯs ಸಂಶಯs
ಕಾಪಾಡುವೆ ನಿಶ್ಚಯs
ಭದ್ರವಹುದು ಅಕ್ಷಯs
-ಆದರದಕೆ ಏನುಪಾಯ?
ಆದೇಶಿಸಿರೀ ಸಮಯ!

ಬ್ರಹ್ಮ : ಯಕ್ಷ-ರಕ್ಷ-ದೇವಾದಿಗೆ
ನನ್ನ ವರದಿ ಅವನವಧ್ಯ
ಮಾನವರನು ಕಡೆಗಣಿಸಿದ
ರಾವಣ ವಧೆ ನರಗೆ ಸಾಧ್ಯ!

ದನಿ೧ : ಮಾನವಾವತಾರಿಯಾಗು!

ದನಿ ೨ : ದಾನವಾಂತಕಾರಿಯಾಗು!

ದನಿ ೩ : ಮನುಜರಲ್ಲಿ ಮರ್ತ್ಯನಾಗು!

ದನಿ ೪ : ರಾವಣನಿಗೆ ಮೃತ್ಯುವಾಗು!

ಶ್ರೀವಿಷ್ಣು : ರಘುಕುಲ ಸಂದರ್ಭದಲ್ಲಿ
ಕೌಸಲ್ಯೆಯ ಗರ್ಭದಲ್ಲಿ
ಜನಿಸಿ ನಾ ಮನುಷ್ಯನಾಗಿ
ಕೋದಂಡಧನುಷ್ಯನಾಗಿ
ಪುತ್ರ-ಪೌತ್ರ-ಮಿತ್ರ-ಗೋತ್ರ
ದೊಂದಿಗೆ ರಾವಣನ ಕೊಲ್ವೆ
ಜಗದ್ಧಿತಕೆ ಮತ್ತೆ ಸಲ್ವೆ!

(ಸ್ಥಾನಾಂತರ ಸೂಚಕ ಸಂಗೀತ ಪಲ್ಲಟ)

**ನಿವೇದಕ :** ಆರು ಋತುಗಳು ಸಂದವು
ಹನ್ನೆರಡು ತಿಂಗಳು ನಿಂದವು
ಚೂತಚೈತ್ರವ ಪೊಂದವು
ತುಂಬಿ ಜೇನಿಗೆ ಬಂದವು
ಸೂರ್ಯ, ಮಂಗಲ, ಶುಕ್ರ, ಶನಿ, ಗುರು
ಕಂಗೊಳಿಸೆ ಗ್ರಹಪಂಚಕ
ಕರ್ಕಲಗ್ನಕೆ ಚಂದ್ರನೇರಿದ
ಪುನರ್ವಸುವಿನ ಮಂಚಕ
ಅವಧಪುರದೊಳು ಅರಳೆ ಚೈತ್ರ
ಶರತ್ಕಾಲದ ಕೌಮುದಿ!
ಹರ್ಷಕಿರಣೋಜ್ಜ್ವಲನಿಧಿ!

**ಕೌಸಲ್ಯೆ :** "ದೇವದೇವ ನಮೋಸ್ತುತೇ
ಶಂಖಚಕ್ರ ಗದಾಧರ
ಪರಮಾತ್ಮಾಽಚ್ಯುತೋಽನಂತ
ಪೂರ್ಣಸ್ತ್ವಂ ಪುರುಷೋತ್ತಮ"
ನನ್ನ ಕಂದನಾಗಿ ಬಾ
ನಿನಗನಂತವಂದನಾ
ವಿಶ್ವವಂದ್ಯ ದಿವ್ಯಮಾಯೆ
ಅಣಕಿಸದಿರು ತಾಯ್ತನಽ
ಕೋಮಲಾಂಗ ಬಾಲರೂಪ
ಲಲಿತಾಲಿಂಗನಾಲಾಪ
ತಾಳಿ ತೊಡೆಯೊಳಾಡು, ಬಾ!
ತಾಯ್ಮಡಲಿಗೆ ಓಡಿ ಬಾ!

**ಶ್ರೀವಿಷ್ಣು:** **(ನಕ್ಕು)**
ತಥಾಸ್ತು ಹೇ ಮಾತೇ!

**ಕೌಸಲ್ಯೆ :** ನಮೋಸ್ತುತೇ! ನಮೋಸ್ತುತೇ!

**(ಕೂಸು ಆಳುವ ದನಿ. ಒಮ್ಮೆಲೆ ನಗು ನಲಿವಿನ ಸದ್ದುಗಳು. ರಾಜಸ್ತ್ರೀಯರು ಓಡಿಬರುವ ನೂಪುರಧ್ವನಿ. ಒಮ್ಮೆಲೆ ರಾಜದ್ವಾರದಲ್ಲಿ ನಗಾರೆ. ನಾಗಸ್ವರಗಳ ದನಿ ಹೊಮ್ಮುತ್ತದೆ. ಅದು ಕೊನೆಯವರೆಗೂ ಹಿನ್ನೆಲೆಯಲ್ಲಿ ಮೊಳಗುತ್ತದೆ.)**

ನಿವೇದಕ : ನಡುಹಗಲಲಿ ಚಂದ್ರೋದಯ
ತಡೆದು ರಥವ ರವಿ ವಿಸ್ಮಯ
ಲೋಕವೆಲ್ಲ ಅಕುತೋಭಯ
ರಾಮನವಮಿ ಮಹಿಮಾಮಯ!

(ಅಲ್ಲಲ್ಲಿ ಗಾಯನ, ವಾದನ, ನರ್ತನ, ಕೋಲಾಟಗಳ ಲಲಿತ ಮಧುರ ಕಲ-ಕಲ ದನಿ)

ರಾಜಸ್ತ್ರೀಯರು : (ತೊಟ್ಟಿಲ ತೂಗುತ್ತಾರೆ)
ಕೌಸಲ್ಯಾ ಮಡಿಲಲ್ಲಿ ಶ್ರೀರಾऽऽಮಾ
ವಟಪತ್ರದುಡಿಯಲ್ಲಿ ಘನಃಶ್ಯಾऽಮಾ
ಮುಗಿಲ ತೊಟ್ಟಿಲಿನಲ್ಲಿ ಚಂದ್ರಾऽಮಾ
ತಿಳಿನೀರ ಕೊಳದಲ್ಲಿ ಅರವಿಂऽದऽ
ಹೂವಹಾಸಿಗೆಯಲ್ಲಿ ಮಕರಂऽದऽ
ಅಂತೆಯೇ ಮಲಗಿರು ನನಕಂऽದऽ

ವೃಂದಗೀತ : (ಗಂಡು-ಹೆಣ್ಣು ಜೋಡು ದನಿಗಳಲ್ಲಿ)
(ಹಿನ್ನೆಲೆಗೆ ನಗಾರೆ-ನಾಗಸ್ವರಗಳೊಡನೆ)

ರಾಮನಂ, ಭುವನಾಭಿ ರಾಮನಂ!
ಗುಣರತ್ನ ಧಾಮನಂ !
ರಘುಕುಲಲಲಾಮನಂ! ಧಾಮನಂ !
ಚಾರು ಘನಶ್ಯಾಮನಂ !
ರೂಪಜಿತ ಕಾಮನಂ !
ಹೃದಯಾಬ್ಧಿ ಸೋಮನಂ !
ನಿಖಿಲ ವಿಶ್ರಾಮನಂ !
ಸುಖದ ಶುಭನಾಮನಂ !
ಮುಂಡಾಡುವಾ ಬನ್ನಿ ಕೊಂಡಾಡುವಾ !
ನಾವ್ ಪಾಡುವಾ ನೆನಹು ಕಾಪಾಡುವಾ !

೫

# ವರ್ಷಾಗಮನ

ನಿವೇದಕ: ಕೃತಯುಗದ ಕ್ರತುಗಳಿಗೆ ಕ್ರಾಂತದರ್ಶನರಾಗಿ
"ಕೃಣ್ವಂತೋ ವಿಶ್ವಮಾರ್ಯಂ" ಎಂದು ಘೋಷಿಸಿದ
ಆರ್ಯಕಂಠಗಳೆನಿತೊ ಆರ್ಷವಾಣಿಯೊಳಂದು
ವೃಷ್ಟಿಕಾಮಿಗಳಾಗಿ ಪರ್ಜನ್ಯ ಸೂಕ್ತಗಳ
ಹಾಡಿಕೊಂಡಾಡಿದರು-ಉದ್ಗಾಥವಿದರಿಗೊ-

**("ವೃಷ್ಟಿಕಾಮಸೂಕ್ತ" ದಿಂದ ಕೆಲ ಮಂತ್ರಗಳ ಪಠಣ)**

ನಿವೇದಕ : ಶತಮಾನಗಳ ಹಿಂದೆ ಆರ್ದ್ರಾ ಪುನರ್ವಸುಗ-
ಳಿಂದಲೇ ವರ್ಷರ್ತುವಾಗತಿರ್ದುದು ಇಂದು
ಆ ಬಿಂದು ಹಿಂಜರಿದು ಮೃಗಶಿರೆಗು ಹಿಂದಾಗಿ
ರೋಹಿಣಿಗೆ ದೋಣಿ ಬಿಡದಂತೆ ಜಡಿಹಿಡಿಯುವದು

**(ದೋಣಿಗಳನ್ನು ದಡಕ್ಕೆ ಎಳೆದುಹಾಕುವ ಗದ್ದಲ-" ಏ ದಾಮಲೇ ss ಏss ದಾಮಲೇss ").**

ನಿವೇದಕ : ಗ್ರೀಷ್ಮ ಭೀಷ್ಮನೊಲು
ಶರಪಂಜರದೊಳು
ಬದುಕಿಹುದಾಸೆ
ಶುಷ್ಕಪಿಪಾಸೆ !

**(ಭೂದೇವಿ ನುಡಿಯುವ ಕೆಳಗಿನ ಹಾಡಿನೊಂದಿಗೆ ಹಿಮ್ಮೇಳಕ್ಕೆ ಗಾಳಿಯ ರಭಸದ ಸದ್ದು ನಡೆದಿರಬೇಕು.)**

ಭೂದೇವಿ : ಆಸುರ ಆಸರ ತೀರದ ದಾಹss
ಬಾಯ್ಬಿಡುತಿಹೆ ಭೂಮಿಯು ನಾ ಹಾ ! ಹಾ !
ಉರಿ ಬೇಸಿಗೆ ರಣ
ನಿಗಿನಿಗಿ ಕಣಕಣ
ಎತ್ತಲಾರೆ ದನಿ
ಬಿಕ್ಕದು ಕಂಬನಿ !
ನೆತ್ತಿಗುರಿವ ಮಾರ್ತಂಡ ಮಂಡಲ
ಸುತ್ತಿ ತಗ್ನಿ ಸರ್ಪ !
ಬತ್ತಿದೆದೆಗೆ ಧಗೆಹತ್ತಿಕೊಂಡಲ!
ಕತ್ತಿದ ಕಂದರ್ಪ!

ಏಸು ದಿವಸ ಪಂಚಾಗ್ನಿ ಸಾಧನೆ?
ಮೃಗಜಲದಲಿ ತಣ್ಣೀರ ಶೋಧನೆ?
ಆರ್ತತಾಪ ಪರಿಹಾರವೆಂದು?
ಕರುಣಾವತಾರದೋರೈ!
ಮರವಟ್ಟಿದೆ ಮೈ, ಮನವು ಮರುಸ್ಥಳ
ಮರಗುತಿರುವೆ ಬಾರೈ!

ನಿವೇದಕ: ನೆಲ ಬಾನ ನೋಡಿತು
ಮಲೆ ಮುಗಿಲ ಸೂಡಿತು
ಮಳೆ ಗಾಳಿ ಕೂಡಿತು
ಮಿಥುನ ಮಾಸss !
ಆರ್ದ್ರೆ ಪುನರ್ವಸು ತಾರೆ
ರೋಹಿಣಿ, ಮೃಗಶಿರೆ
ನಿರಿಕಿಸಿ ನಿಂತಾರೆ
ರವಿಯ ವಾಸss !

ಪುನರ್ವಸು: ನಾನೆ ಆ ಪುನರ್ವಸು
ವಸುಂಧರೆಯು ನನ್ನ ಹಸು
ಪರ್ವನೋಂತು ಸೂರ್ಯನಾಂತು
ಉರ್ವಿಗೆ ಹಾಲುಣಿಸಲೆಂತು
ಇದೆ ನನ್ನದೆ
ಎಡೆಬಿಡದೆ
ಮಿಡಿಯುತಿದೆ!
ಮಿಡುಕುತಿದೆ!

ಆರ್ದ್ರೆ: ಆರ್ದ್ರೆ ನಾ ದಯಾರ್ದ್ರ ವೃಷ್ಟಿ
ಆರದ ತೇವೆನ್ನ ಸೃಷ್ಟಿ
ನನ್ನಿಂದಲೆ ನೆಲವೆಣ್ಣಿಗೆ
ಋತು ಸ್ನಾನ, ಮೊಗ, ಮಣ್ಣಿಗೆ!
ಧಾರೆ ಧಾರೆ ಅಮೃತವರ್ಷ
ದೂರ್ವಾಂಕುರ ರೋಮಹರ್ಷ!

ಮೃಗಶಿರ: ವ್ಯಾಧನಿರಿದ ಮೃಗಶಿರೆ
ರವಿಯ ರಮಿಸ ಬಯಸಿರೆ

ವ್ಯೋಮಕೇಶ ನೀಳರಾಶಿ
ಕೆದರಿ ಕುಳಿತ ಕಾತರೆ
ನನ್ನಂಕದ ಪರ್ಯಂಕಕೆ
ಇನಿಯ ಇವನು ಬರುವರೇ?

ರೋಹಿಣೀ: ವಿರಹಿಣೀ ರೋಹಿಣೀ
ನಾ ಮರುತ್ತರಂಗಿಣೀ
ತೀರದಿಹ ವಿಯೋಗಿನೀ
ರವಿಯ ಬರವ ಹಾರೈಸುವ
ಯೋಗಿನಿ ಹತಭಾಗಿನೀ !

ನಾಲ್ವರೂ : ಪ್ರಿಯಕರ ದಿನಕರ ಬಾ ಸಖನೆ
ಕನಿಕರವಿಡು ಉದಯೋನ್ಮುಖನೆ
ಭೂಮಿತಾಯ್ಗೆ ಪ್ರಜನನಚಾಪಲ್ಯ
ನೇಗಿಲಿಡದ ನೆಲ ಶಿಲೆಯು ಅಹಲ್ಯಾ !
ದ್ರವಿಸು, ಸ್ರವಿಸು, ಕೊಡು ಸುಖ ಸಾಫಲ್ಯ !

**(ಈ ಹಾಡಿನ ಹಿನ್ನೆಲೆಯಲ್ಲಿ ಮಳೆಯ ರಿಮಝಿಮ ಮತ್ತು ನಾಟಿಯ ಕೆಲಸದ ಒಕ್ಕಲು ಹಾಡುಗಳು ನಡೆದಿರಬೇಕು.)**

ಉತ್ತರಾಯಣವೆ ಮುಗಿಯಲ್ಕೆ
ನನ್ನ ಪ್ರದಕ್ಷಿಣೆ ದಕ್ಷಿಣಕೆ
ಸೂರ್ಯನಾ ಹಿರಣ್ಯಗರ್ಭ
ತೂರ್ಯನಾ ವರೇಣ್ಯಭರ್ಗ
ನಿಮ್ಮೊಡನಾಡುವೆ ಪೊಡವಿಯನಾಳುವೆ
ಜೀವನದಾಳವೆ - ಬೆಳಕಿನ ಬಾಳುವೆ !

**("ಜೀವನದಾಳವೆ ಬೆಳಕಿನ ಬಾಳುವೆ" - ಈ ಸಾಲನ್ನು ನಾಲ್ವರೂ ತಾರೆಯರು ರವಿಯೊಡನೆ ದನಿಗೂಡಿಸಿ ಹಾಡುತ್ತಾರೆ.)**

ರವಿ-ತಾರೆಗಳು : ಜೀವನದಾಳವೆ ಬೆಳಕಿನ ಬಾಳುವೆ
ವಾಯು ವಾಹನವ ನಾವೇರಿಹೆವೈ !
ನಮ್ಮೊಡನಾಟವೆ ಇದು ಸುಲಗ್ನವೈ !

**( ಹಾಡು ತೇಲಿಹೋಗುವ ದನಿ )**

**ನಿವೇದಕ :** ವಿಶ್ವದ ಹೃದಯ ಸಮುದ್ರ ಮೂಡಿಸಿತು
ಕಾವ್ಯಕಲ್ಪ ಮೋಡಽ
ಅಂತರಿಕ್ಷದಂತಃಕರಣವೆ ಕರ-
ಕರಗೆರೆಯಿತು ನೋಡಽ !
ಮೋಡಽ ನೋಡಽ

**ಮೋಡ :** ಘನಶ್ಯಾಮ ಸುಂದರನು ಹರಿಯೆನಾ
ಭೂತದಯಾಮೇಘ
ಜನವ ತಣಿಸುವೆನು ಜಗವನುಣಿಸುವೆನು
ಎನ್ನೊಸಗೆಯಮೋಘ !
ಹಳ್ಳಿವೆಣ್ಣುಗಳ ಬಯಕೆಗಣ್ಣು ಗುಟು-
ಕರಿಪ ಕಾಮರೂಪ !
ದಯಿತ ದೂತನ್ನೆತರುವೆ ಮಂಗಲವು
ತರುವೆ ನಭಕೆ ಭೂಪ !

**ನಿವೇದಕ :** **(ನವಿಲಿನ ಕೇಕೆಯ ಹಿನ್ನೆಲೆಯಲ್ಲಿ )**
ಮೇಘ-ಮತ್ತ ಮಯೂರ ಮಾರ್ದನಿ
ಮೊಳಗಿಸಿದೆ ಕೇಕಾವಲೀ!

**(ಚಾತಕಪಕ್ಷಿಗಳ ಚೀತ್ಕಾರಗಳ ಹಿನ್ನೆಲೆಯಲ್ಲಿ)**

ಚಾತಕವು ಚಿರವಿರಹಕೇತನ
ಒರೆವ ಕರುಳಿನ ಕಾಕಲೀ !

**ಹೆಣ್ಣು ದನಿ :** ದಿಗ್ದೆಸೆಗಳ ತಕ್ಕೈಸಿತು ಕಾರ್ಗಪ್ಪಿನ ಮಡಲು
ಬ್ರಹ್ಮಾಂಡದ ಒಡಲು
ಬಿರಿಯಿತು ಬರಸಿಡಿಲು
ತೆಂಕಣಗಾಳಿಯ ಭೂತವು
ನಿಟ್ಟುಸಿರನೆ ಬಿಡಲು

**ಗಂಡು ದನಿ :** ಘುಡು ಘುಡು ಘುಡು ಉಗ್ಗಡಿಸಿತು
ಗುಡುಗಿನ ಆಟೋಪ
ನಿಬ್ಬರದುಬ್ಬರದಬ್ಬರ
ಬೊಬ್ಬಿರಿದ ಪ್ರಕೋಪ !
ಹೆಡೆ ಹೊರಳಿಸಿ

ಹೊಡೆ ಮರಳಿಸಿ
ಬುಸುಗುಟ್ಟುತ ಹಾಯ್ದ
ಸಾವಿರ ನಾಲಗೆ ಹಾವೋ ?
ಕಡಲಾಳದ ದೆವ್ವ !

ಹೆಣ್ಣು ದನಿ : ನಂಜಿನ ಹೊಗೆ ಮಂಜಿನ ಮೊಗೆ
ಹಿಂಜಿದ ಮುಗಿಲಾಗೆ
ನಭ-ನೀಲಿಮೆ-ನದಿಲೊಗೆಯಿತು
ಮಳೆಬಿಲ್ಲಿನ ಸೋಗೆ !

ಗಂಡು ದನಿ : ಉದ್ದಾಮ ಹೆದ್ದಾನೆ ಮದ್ದಾನೆಗಳ ಹಿಂಡು
ದಾಳಿಯಿಕ್ಕಿತೊ ಗಗನದಾದುರ್ಗಕೆ !
ವೃತ್ರ-ವಧ-ವಜ್ರವಿದೆ ಬೆಳಕ ಸೆರೆ ಬಿಡಲೆಂದು
ನೀರ್ನೀರೆಗಳಿಗೆಲ್ಲ ಕರೆ ಸ್ವರ್ಗಕೆ !

ಹೆಣ್ಣು ದನಿ : ಇಂದ್ರಚಾಪ ಜಲತರಂಗ
ಗಹಗಹಿಸಿತು ಘನಮೃದಂಗ
ಸುರಿಮಳೆ ಸರಿ-ಸಾsರಂಗ
ಮಿಂಚಿನ ಬೆರಳಾಡಿದಂಗ
ಜೀವನ ಸಂಗೀತ ರಂಗ !

**( ಹೆಣ್ಣಿನ ಈ ಹಾಡಿಗೆ ಆಯಾ ವಾದ್ಯಗಳ ಹಿಮ್ಮೇಳವಿರಬೇಕು. )**

ಗಂಡು ದನಿ : ದೇವದುಂದುಭಿ ಧುಮುಧುಮಿಸುತಿರೆ
ಮಿಂಚು ಕುಣಿವುದು ಅಪ್ಸರೆ
ಕಾಮಧನು ಕಮನೀಯ ತೋರಣ
ನಾಕದಗಸೆಗೆ ಮೆರೆದಿರೆ
ಭಲರೆ ! ಭಾಪುರೆ ! ಮಝುರೆ ! ಹಾಕಿತು
ಹಳ್ಳ-ಹೊಳೆಗಳ ಕೈಪರೆ !

**( ಗುಡುಗಿನೊಂದಿಗೆ ನಗಾರೆಯ ಸದ್ದು ಮೊದಲು. ಕೈಪರೆಗಳ ಸದ್ದು ಕೊನೆಗೆ - ಆ ಹಾಡಿಗೆ ಹಿನ್ನೆಲೆ. )**

ಗಂಡು-ಹೆಣ್ಣು ದನಿಗೂಡಿ: ಕಿರಿಮಳೆಗರೆಯಿತು
ಬಿರಿಮಳೆ ಬಡಿಯಿತು
ಜಡಿಮಳೆ ಜಪ್ಪಿತು - ಧೋ ಧೋ ಧೋ !
ಮೆಲ್ಸರಿ ತೆಳ್ಸರಿ

ಸಾಲ್ಸರಿ ಸೂಳ್ಸರಿ
ಕಾಲ್ಸರಿ ಸುರಿದವು - ಉಧೋ ಉಧೋ !

(ಮೇಲಿನ ಗಂಡು-ಹೆಣ್ಣು ದನಿಗಳ ಬಡಿಹಾಡು-ಜೊತೆಹಾಡುಗಳೆಲ್ಲ ಗಂಭೀರ ಗುಡುಗು-ಮಿಂಚು-ಗಾಳಿಗಳ ಹಿಮ್ಮೇಳಕ್ಕೆಯೇ ನಡೆಯಬೇಕು. ಆ ಸದ್ದಿನ ರಭಸ ಒಮ್ಮೆ ತೀವ್ರ, ಒಮ್ಮೆ ಮಂದವಾಗುತ್ತ ಹಾಡುಗಳ ಭಾವಕ್ಕೆ ಪೋಷಕವಾಗಿರಬೇಕು.)

**ನಿವೇದಕ :** ಶರದಃಶತಂಗಳಲಿ ಲೋಕದಾಯುರ್ಮಾನ-
ವಳೆಯುವಂದಿನ ಋಷಿಯು ಮಳೆಕಂಡು ಕಳೆಗೊಂಡು
ಕಾರ್ಗಾಲದಿಹದಲೇ ನೂರ್ಗಾಲದಾ ಶಿಶವ
ಸಾರಲಾರ್ಯಾವರ್ತವಾಯ್ತು ಭಾರತವರ್ಷ !

**ಮಕ್ಕಳು :** "ಮಳೆಬಂತೋss ಮಳೆರಾಯss
ಕೊಡೆ ತಾರೋss ಸುಬ-ರಾಯss
ಸುಬರಾಯs ಕೊಡೆಹಿಡಿಸೆ
ಮಿಡಿನಾಗರ ಹೆಡೆ ಬಿಡಿಸೆ
ಅದರಡಿ ಕೂಗಿತು ಕಪ್ಪೆ
ತಲೆದೂಗುತ- "ಓ ತಂಪೇ!"

**ನಿವೇದಕ :** ನೀರಡಿಸಿ ಗೋಗರೆವ ಕಪ್ಪೆಗಳ ಕರ್ಕಶವೆ
ಧನ್ಯ ವರ್ಷಾಗಮನ ಸ್ವಾಗತಕೆ ಶ್ರುತಿಯಾಯ್ತು !

("ಮಂಡೂಕಸೂಕ್ತ" ದೊಳಗಿನ ಕೆಲವು ಋಕ್ಕುಗಳೂ ಕಪ್ಪೆಗಳ ಕೂಗಾಟವೂ ಕೂಡಿಯೇ ಕೇಳಿಬರುತ್ತವೆ.)

**ನಿವೇದಕ :** ಹೊಲಗಳಿಗೆ ಹೊಸ ತಂಪು
ಹಸಿಹಸಿರ ನರುಗಂಪು
ಕಾಲ್ಕೆರೆs ಕೊಳ ಕೆಂಪು
ರೈತಗಲಂಪಿನ ಪೆಂಪು !

**ರೈತರು :** (ಹಿಗ್ಗಿ ಹಾಡುವರು)
ಆನಂದಾss ಬಿಸವಂದಾ ss
ಮಳೆರಾಯಾss ಮಳೆ ತಂದss
ನಕ್ಕಿತು ಇಳೆ, ಉಕ್ಕಿತು ಹೊಳೆ, ಸೊಕ್ಕಿತು ಬೆಳೆ ಚಂದ
ತುಂಬಲಿ ತೆನೆ, ತುಂಬಲಿ ಮನೆ, ತುಂಬಲಿ ಚಕ್ಕಂದ
ನೆಲ ಬಾನನೆ ನೆಯ್ದಿದೆ ಮಳೆ ಅಂತಃಪಟ ಹಿಡಿಯೆ
ಮಿಂಚಿನ ಗೊಂಚಲು ಮಿಂಚುಳೆ ಮಂತ್ರಾಕ್ಷತೆ ಸಿಡಿಯೆ

ಜಲಗರ್ಭದಿ ತೇಲಾಡಿತು ನವಸೃಷ್ಟಿಯ ಕಂದ
ಮಣ್ಣೊಳು ಸಾವಿರ ಕಣ್ಣವೆ ತೆರೆದಿವೆ, ಏನಂದ !
ಆನಂದಾss ಬಿಸವಂದಾss

೬

# ಯಶೋಧರಾ

## (ನೋವನೋಂಪಿ)

(ಅಂತಃಪುರ. ಕಪಿಲವಸ್ತುವಿನ ಅರಮನೆಯಲ್ಲಿ. ಸಿಂಗಾರಸಜ್ಜಿಕೆಯಿಂದ ಒಪ್ಪುವುದು. ಪರ್ಯಂಕ ಒಂದು ಬದಿ. ಅದರ ಪಕ್ಕದಲ್ಲಿಯೇ ಪ್ರೇಕ್ಷಕರಿಗೂ ಪಡಿನೆಳಲು ಕಾಣುವ ಕೋನಕ್ಕೆ ನಿಲುಗನ್ನಡಿ. ರಮಣೀಯ ಗೃಹೋಪಸ್ಕರಗಳು.)

ಯಶೋಧರೆ : ( ಪರ್ಯಂಕದಲ್ಲಿ ಕುಳಿತಿರುವಳು. ಏಮನಸ್ಕ ಉದ್ವಿಗ್ನ ಸ್ಥಿತಿಯಲ್ಲಿ. )

ಈ ದಿನ ನನ್ನ ಪರೀಕ್ಷೆ !
ಅದುವೆ ಸಫಲ ಪ್ರತೀಕ್ಷೆ ?
ನೋವಿನ ನೋಂತಿಹೆ ದೀಕ್ಷೆ
ದೈವಕೆ ದೈವತ ರಕ್ಷೆ !

(ಒಮ್ಮೆ ದೂರದಲ್ಲಿ ನಗಾರೆಯ ಉಗ್ಗಡ)

ಆತುರ ಕಾತರ ಮನವೇ
ಏತಕೆ ಭಯ ಸಂಶಯವೈ ?

(ನಗಾರೆಯ ಅಬ್ಬರ ಬಲವಾಗುತ್ತದೆ.)

ಇದೋ ಮೊಳಗಿತು ಸ್ವಾಗತಭೇರಿ !
ನಡೆತಹನೌ ಗುರು ಅವತಾರಿ !
ಶತಸಹಸ್ರ ಪುರನರ-ನಾರಿ
ಉತ್ಕಂಠೆಯ ಉರುಹನೆ ಮೀರಿ
ಕಿಕ್ಕಿರಿದಿದೆ ಪುಳಕಿತ ನಗರಿ
ಗುಡಿ-ಗೋಪುರ-ಗಿಡಮರವೇರಿ !

(ನಗಾರೆಯ ಸದ್ದು ಗಾಳಿಯಲ್ಲಿ ಅಲೆಯುತ್ತ ಒಮ್ಮೆ ತೀವ್ರ ಒಮ್ಮೆ ಮಂದ್ರವಾಗಿರುತ್ತದೆ.)

ಎನ್ನೆದೆಯೂ ಮೊರೆವ ನಗಾರಿ !
ಧುಮುಧಮಿಪುದು ಧಮನಿಯೆ ಹಾರಿ !
ನಡೆತಹನೈ ಪ್ರಭು ಅವತಾರಿ
ಶ್ರೀ ಭಗವಾನ್ ಬುದ್ಧ ಮಾರಾರಿ !

(ಹೊರಗೆ ರಾಜಾಂಗಣದಲ್ಲಿ ಜಯಘೋಷ ಕಲಕಲ ಸಮೀಪಿಸುತ್ತಿದೆ. ಘೋಷ: "ಶ್ರೀ ಧರ್ಮಚಕ್ರ ಪ್ರವರ್ತಕ, ಶಾಕ್ಯ ಮುನೀಂದ್ರ, ನಿಖಿಲ ಶ್ರಮಣ ಶ್ರಾವಕ ಹೃದಯಾಬ್ಧಿಚಂದ್ರ ಭಗವತೇ ನಮೋ ಬುದ್ಧಾಯ! ನಮೋ ಬುದ್ಧಾಯ ! ನಿತ್ಯಶುದ್ಧ ತಪಃಸಿದ್ಧಾಯ, ನಮೋ ನಮೋ ಸಿದ್ಧಾರ್ಥಾಯ!")

ಯಶೋಧರಾ : ಸಿದ್ಧಾರ್ಥನೋ, ನಿಃಸ್ವಾರ್ಥನೋ

( ಖಿನ್ನಳಾಗಿ ನಗುವಳು. )

-ವಿರಹಿಣೀ ಚಿತ್ರಾಂಗದೇಯನೇ
ಮರೆತು ತೆರಳಿದ ಪಾರ್ಥನೋ !

(ಮೆರವಣಿಗೆಯ ಕೋಲಾಹಲ ಇನ್ನೂ ಸಮೀಪಿಸುವುದು.)

ಯಶೋಧರಾ:
(ಸಂಭ್ರಮದಿಂದ ಮಂದಿರದ ಶೃಂಗಾರಕ್ಕಾಗಿ ಗಾಬರಿಪಡುತ್ತ ಅತ್ತಿಂದಿತ್ತ ಹಾರಾಡುತ್ತ )

ಹೇ ಸಖೀss ಶ್ಯಾಮಲೀss
ಹೇ ಸಖೀss ಶ್ಯಾಮಲೀss

ಶ್ಯಾಮಲೀ: ( ಓಡಿಬರುತ್ತ )

ಓss ಬಂದೆ ಒಡತಿಯೇ !

ಯಶೋಧರಾ : ಎನಿತೇ ನಾ ಕೂಗಲಿ ?
ಹೋದುದೆಲ್ಲಿ ? ನೋಡಿಲ್ಲವೆ ?
ಶ್ರೀಚರಣಗಳಾಗಮಾ

( ಗವಾಕ್ಷದಿಂದ ಹೊರಗೆ ಕಾಣಿಸುತ್ತ ಹರ್ಷದಿಂದ )

ಸಗ್ಗದಲ್ಲಿ ಸುಗ್ಗಿ ಹಿಗ್ಗಿ-
ದಂತಿದೆ ಪುರ-ಸಂಭ್ರಮಾ !

ಶ್ಯಾಮ : ಪುರದ ಮಾತು ಏನು ಮಹಾ ?
ಅರಮನೆಯೇ ಅರಳಿದೆ !
ಸ್ವಯಂವರದ ಗೃಹಾಗಮನ-
ದಂದಿನಂದ ಮರಳಿದೆ !

(ಆ ಅಂದಿನ ನೆನಪಿಗೆ ಯಶೋಧರೆ ಮರ್ಮಾಹತಳಾಗುವಳು )

ಯಶೋಧರಾ : ( ಕಸಿವಿಸಿಯಾಗಿ )
ಇಂಥ ಮಾತು ಆಡುತಲಿರೆ
ನಾನಿದುವೆ ತೆರಳಿದೆ !

( ಹೋಗಲು ಹೊರಡುವಳು. ಮರುಗಳಿಗೆಗೆ ಮರುಕದಿಂದ )

ಎಂಥ ಮಂಕು ಬಡಿಯಿತೆನ್ನ ?
ದೋಷವೇನು ಬಂತು ನಿನ್ನ ?

ಏನು ಬೋನ? ಏನು ಬನ್ನ ?
ಕ್ಷಮಿಸು ಸಖಿ, ಒರಿಸು ಕಣ್ಣ !

( ಇಬ್ಬರೂ ಹನಿಗಣ್ಣನ್ನೊರಸಿಕೊಳ್ಳುವರು-ಪರಸ್ಪರರ, ಮೆರವಣಿಗೆಯ ಶಂಖ, ನಗಾರಿ, ನಾಗಸ್ವರ, ತೂರ್ಯಸ್ವನಗಳು ಸಮೀಪಿಸುವುವು. )

ಯಶೋಧರಾ : ತೂರ್ಯಸ್ವನ ಜನದುದ್ಗಾರ !
ಮರ್ಮಾಹತ ಮಮ ಚೀತ್ಕಾರ !
ಮನದಾಳದ ಮೂರ್ಛನೆ ಮುಖರ !
ಶೂನ್ಯವನಣಕಿಸುವದು ಪ್ರಖರ !
ತಾನಾಲಿಸಿ ಅಂತಃಕರಣ
ಕರಗರೆಯಲು ಹರಿದಿದೆ ಕರುಣ

ಶ್ಯಾಮ : ಐತರುತಿವೆ ಶ್ರೀಗುರು-ಚರಣ
ಮನುಕುಲವಿದು ಅಭಯಾಭರಣ

ಯಶೋಧರಾ: ಶ್ರೀಗುರುಚರಣ?
ಏಕೀ ಸ್ಮರಣ?
ಹೃದಯವಲ್ಲಭಗೆ
ಗುರುವೆನ್ನುವ ಬಗೆ
ಸರಿಯೇ?
ಪರಿಯೇ?
ಅರಿಯೆ, ಹಾ! ನಾನರಿಯೆ!

(ಮನದುಬ್ಬಗೆಯಲ್ಲಿ ಮಂದಿರದ ಶೃಂಗಾರ ಕಾರ್ಯವನ್ನು ಶ್ಯಾಮಲಿಗೆ ಬಿಟ್ಟಂತೆ ಆಗಿ, ಯಶೋಧರೆ ಅಸ್ಪಷ್ಟಚಿತ್ತದಿಂದ ಉದ್ಗರಿಸುತ್ತಾಳೆ.)

ಯಶೋಧರಾ : ನನ್ನ ಪ್ರಿಯತಮ, ಪ್ರಿಯ ಮನೋರಮ
ಬರುವವನು ಪ್ರೇಮಾತ್ಮನೋ
ಲೋಕವನೆ ಉದ್ಧರಿಸೆ ಬಂದಿಹ
ಪರಮಹಂಸ ಮಹಾತ್ಮನೋ ?

( ಬುದ್ಧದೇವನು ಅರಮನೆಯ ಸಮೀಪಬಂದ ಸದ್ದು, ದೂರದ ಹಿಂದಿನ ಜಯಘೋಷ ಈಗ ಇನ್ನೂ ಸ್ಪಷ್ಟ)

ಶ್ಯಾಮ: ದೇವ ಬಂದನು ದೇವ ಬಂದನು
ಅರಮನೆಯ ಒಳಸಾರ್ವನು
ಹೋಗಿಬರಲೇ ? ಕರೆದು ತರಲೇ?
ಬೆಸಸಲೇ ರಾಹುಲನನು ?

ಯಶೋಧರಾ : (ಒಮ್ಮೆಲೆ ಗಂಭೀರ ಹಟದಿಂದ)

ಸುಮ್ಮನಿರು, ಬಿಮ್ಮನಿರು,. ಹಾಗೊಂದು ಮಾಡದಿರು
ಒತುಬಹ ಹೋತುವೆಂತಾಗದದು-ಆಗದದು
"ಧರ್ಮೇಚ ಅರ್ಥೇಚ ಕಾಮೇಚ ನಾತಿಚ-
ರಾಮಿ" ಎಂದಗ್ನಿ ಸಾಕ್ಷಿಯನಾಂತು ನಾನೀಚ-
ಳಂದದಿ ಧರ್ಮಪ್ರವರ್ತಕ ಪರಮಾರ್ಥ
ಭಂಗಿಸಲೆ? ಹಂಗಿಸಲೆ? ಆ ಮಾತು ಹಾ ವ್ಯರ್ಥ!
ಆ ಮಾತನಾಡದಿರು, ದೇವನನು ಕಾಡದಿರು
ಕಂಗೇಡು ಮಾಡದಿರು-ಆಡದಿರು ಕಾಡದಿರು !

( ನಿಟ್ಟುಸಿರುಬಿಟ್ಟು )

ರಾಜಧಾನಿಗೆ ಬರುವ ಕಾಲ್ಗಳು
ರಾಜಭವನಕೆ ಬಾರವೆ ?
ರಾಜಭವನಕೆ ಬಂದ ಪಾದುಕೆ
ಈ ಮನೆಯ ಒಳಸಾರವೆ?
ಇಷ್ಟು ದೂರಕೆ ಇನಿಸುದೂರವೆ ?
ಇಷ್ಟದರುಶನ ಭಾರವೆ ?
ಎನ್ನನಿಲ್ಲಿಯೆ ಉಳಿದುಹೋದರು-
ಎನ್ನನ್ನಿಲ್ಲಿಯೆ ನೋಡಲಿ
ಬೆನ್ನತೋರಿಸಿದವರೆ ಮೋರೆಯ
ಕಾಣಿಸಲಿ ಕಾಪಾಡಲಿ !
ದೇವನಾಗಲು ಹೊರಟವಗೆ ಸ-
ರ್ವಸ್ವ ಬಿಡುವದು ಭಾಗ್ಯವೆ !
ಹೊಸ್ತಿಲಾಚೆಗೆ ಹೆಜ್ಜೆ ಇಡುವದು
ದೇವದಾಸಿಗೆ ಯೋಗ್ಯವೆ ?

( ಬುದ್ಧದೇವ ಬಾಗಿಲಿಗೆ ಬಂದ ಸದ್ದು. "ಭಗವಾನ್ ಬುದ್ಧದೇವನಿಗೆ ಜಯವಾಗಲಿ !" ಶಾಕ್ಯಮುನಿ ಸಿದ್ಧಾರ್ಥ ದೇಶಿಕೇಂದ್ರನಿಗೆ ಜಯವಾಗಲಿ!" "ಹೀಗೆ ಚಿತ್ತೈಸಬೇಕು ! "-ಎಂಬೆಲ್ಲ ಘೋಷಗಳು. ಹಲವು ಆವಿಗೆಗಳ ಲಯಬದ್ಧ ಸದ್ದು ಒಮ್ಮೆಲೆ ಮಂದವಾಗುತ್ತದೆ. ಒಂದೇ ಆವಿಗೆ-ಜತೆಯ ಸದ್ದು ಹತ್ತಿರ ಬರುತ್ತದೆ. ಮತ್ತೆ ಹಿಂದಿನಂತೆಯೆ ಜಯಘೋಷ. )

ಯಶೋಧರಾ : ಬಂದನೇ ? ಬಂದರೇ ?
ಬಂದರಿದೋ ಬಂದರೈ !

ದೇಶೀಕೇಂದ್ರ? -ಅಹುದು ನಾನೆ
ದೇಸಿಗಳೆನಗಿಂದ್ರನೈ!
ಎಲೆಮನವೆ ದುಡುಕದಿರೈ!
ಮಿಡುಕದಿರೈ ತುಡುಕದಿರೈ!
ಭಾಗ್ಯನಿಧಿಯು ಬಾಗಿಲಿಗಿದೆ
ಕಣ್ಣ ಕಿವಿಯು ನಂಬದೈ!
ಕಿವಿಯ ಕಣ್ಣು ನಂಬದೈ !
ಶ್ಯಾಮಲೀ,ನಡೆ ಒಳಗೆ, ನನ್ನ ಒಂಟಿ ಕಾಣಲಿ !
ನಂಟನೆಂತು ಮಾಣಲಿ?

( ಶ್ಯಾಮಲಿ ಹಿಂದೆ ಸರಿಯುವಳು. ಯಶೋಧರೆಯು ನಿಲುಗನ್ನಡಿಯ ಮುಂದೆ ನಿಂತು ತನ್ನ ಬಿಂಬವನ್ನು ಒಮ್ಮೆ ಧೇನಿಸುವಳು.)

ಯಶೋಧರಾ : ಪಾರಿಜಾತ ಪುಷ್ಪರಾಶಿ ಅರುಣೋದಯ ಕಾಂತಿಗೆ
ಕಂಗೊಳಿಸುವ ಈ ಬಗೆ - (ಬೆಚ್ಚಿ)
ಕಂಗೆಡಲಿದೆಯೇ ಬೇಗೆ?

( ಮೈ ಜುಮ್ಮೆಂದು ಕಣ್ಣುಮುಚ್ಚಿಕೊಂಡು ತೆರೆಯುವಳು. ಬುದ್ಧದೇವನು ಬಾಗಿಲಲ್ಲಿ ಕಾಣಿಸಿಕೊಳ್ಳುವನು. ಕೈಯೆತ್ತಿ ಸನ್ನೆಮಾಡಿ ಹೊರಗಿನ ಜಯಕಾರದ ಗದ್ದಲವನ್ನು ಥಕ್ಕನೆ ನಿಲ್ಲಿಸುವನು. ಒಳಗೆ ಪ್ರವೇಶಿಸುವನು.)

ಬುದ್ಧ : ಕರೆಯಬರಲು ಕಪಿಲವಸ್ತು
ಅಂದೆನದಕೆ ನಾ ತಥಾಸ್ತು
ಒಲ್ಲೆನೆ ನಾ ಯಾವ ವಸ್ತು?
ಶಾಕ್ಯಮಾತೆಯೆ, ನಮೋಸ್ತು!
ತಗ್ಗು ತುಂಬಿ ಹರಿವ ಹೊಳೆ
ತಿರೆಯ ತಣಿಸೆ ಕರೆವ ಮಳೆ
ಕತ್ತಲುಡುಗೆ ಕಿರಣಧಾರೆ
ಬತ್ತಿದೆಡೆಗೆ ಚಿಮ್ಮುವ ತೊರೆ
ಬರುವದೆಂತೊ ಅಪರಿಹಾರ್ಯ
ಅಂತೆ ತಥಾಗತನ ಕಾರ್ಯ
ಪುನರಾಗಮನ ಅನಿವಾರ್ಯ

( ಬುದ್ಧನ ಸ್ವಗತ ಮಾತು ಮುಗಿಯುವತನಕ ಯಶೋಧರೆಯು ನಿದಾನವಾಗಿ ಎದುರಿಗೆ ಬಂದಿದ್ದಾಳೆ. ಮಾತಿನ ಮರ್ಮ ಆಕೆಯ ಅಂತರಂಗಕ್ಕೆ ಮಾರ್ದನಿಯಂತಾಗಿದೆ.)

ಬುದ್ಧ : (ನಸುನಕ್ಕು)
ನಿನಗೆನಿಸಿತೆ ಇದು ಅನಾರ್ಯ

ಯಶೋಧರಾ : ನೀನನಾರ್ಯ? -ಎನಲೆ ನಾನು?
ಜಡಮೂಢಳು ಅನಿತೆ ನಾನು?
ಆರ್ಯಸತ್ಯಗವನೆ ಸಾರ್ವ
ಆರ್ಯವರ್ಯ ನಿನ್ನ ಸರ್ವ
ಚರ್ಯೆ-ಚರಿತ ಪುಣ್ಯಪರ್ವ
ಅದುವೆ ನನಗೆ ಅತುಲ ಗರ್ವ !

ಬುದ್ಧ : ಸಲ್ಲದು ಸಲ್ಲದು ಹೇ ಪ್ರಮದೆ
ಸಲಿಸದಿರೌ ನೀ ಗರ್ವಕಿದೆ
ಒಳಿತಿಗು ಒಗ್ಗದು ಈ ದರ್ಪ
ಉಗ್ರ ವಿಷದ ಸೂಕ್ಷ್ಮವು ಸರ್ಪ!
ಅಭಿಮಾನವೆ ನರಕಕೆ ಬೇರು
ದಯೆಯ ದಾರಿಯಲಿ ಶುಭದೂರು

ಯಶೋಧರಾ : ಕ್ಷಮಿಸಿರೆನ್ನ, ಆರ್ಯಪುತ್ರ

ಬುದ್ಧ : (ದೈನ್ಯದಿಂದ)

ನಾನು ಪುತ್ರ, ನೀನು ಆರ್ಯೆ!

ಯಶೋಧರಾ : ನೀನೆ ಭರ್ತ, ನಾನು ಭಾರ್ಯೆ!

ಬುದ್ಧ : ( ಕಿವಿ ಮುಚ್ಚಿಕೊಂಡು )
ಶಾಂತಂ ಪಾಪಂ ! ಶಾಂತಂ ಪಾಪಂ !
ಎಂತೀ ಮಾಯಾಮೂಲ ಪ್ರಲಾಪಂ!

ಯಶೋಧರಾ : ಏನಿದನೊರೆದಿರಿ ಅಭಿಶಾಪಂ?

ಬುದ್ಧ : (ನಕ್ಕು, ಕನಿಕರದಿಂದ)
ಮುಗುದೆ, ಸತ್ಯವಿದು ಸಲ್ಲಾಪಂ !

ಯಶೋಧರಾ : (ಕಾತರಳಾಗಿ)

ದೇವ ನನ್ನವನಲ್ತೆ
ನನಗೆ ರಾಹುಲನಿತ್ತ
ದೇವ ನನ್ನವನಲ್ತೆ ?

ಬುದ್ಧ : ನಿನ್ನವನು ಇನ್ನಿಲ್ಲ; ಎಂದೊ ಜ್ಞಾನಾಗ್ನಿಯಲಿ
ಭಸ್ಮಾದನು ಆತ-ಅಸ್ಮಿತೆಯ ಹೋಮದಲಿ !
ದುಃಸ್ವಪ್ನ ಜಾಗೃತಿಯ ಜಾವ ಕರಗಿತು ಬಳಲಿ!

ಯಶೋಧರಾ : (ಆಕ್ರೋಶದಿಂದ)
ನಾನು ಪಡೆದುದೇನು? ಪ್ರಭೋ,
ನಾನು ಪಡೆದುದೇನು?
ನಿನಗಾಯಿತು ಜ್ಞಾನೋದಯ
ಲೋಕಕೊಂದು ಭಾಗ್ಯೋದಯ
ನವಧರ್ಮಕೆ ಬುದ್ಧೋದಯ
ಪಡೆದರೆಲ್ಲ ಹೊಸನಿಧಿ!

ಧರ್ಮಕೆ, ಗುರು ಸನ್ನಿಧಿ!
ಜಗದ ಪುಣ್ಯ ನಿರವಧಿ !
(ಬಿಕ್ಕಿ) ಎನ್ನ ಪಾಲೀಗೀ ವಿಧಿ !

ಬುದ್ಧ : (ಮರುಕದಿಂದ)

ಅಯ್ಯೋ ಮುಗುದೆ, ಅರಿಯೆಯಾ ?
ಇನ್ನು ಮೋಹ ಮರೆಯೆಯಾ?
ಕಣ್ಣಪರೆಯ ಹರಿಯೆಯಾ ?
ನಿನ್ನ ನಿಧಿಯೆ ನಿರವಧಿ
ಕಡಲ ಸೇರಿದಂತೆ ನದಿ
ಯಾರು ನೀನು? -ನೀ ತಿಳಿದಿ ?
ನೀನು-ನಾನು-ರಾಹುಲ
ಎಂಬುದರ ಕುತೂಹಲ
ಕಳೆದು ಆಚೆ ಕಣ್ಣತೆರೆ
ರವಿಯ ಕವಿದ ತಮದ ತೆರೆ
ಹರಿದೊಗೆ,-ಒಳಗಣ್ಣ ಪರೆ !
ಸಿದ್ಧಾರ್ಥನ ಪ್ರೇಯಸಿ ರಾ-
ಹುಲನ ತಾಯಿ ಆಗಳೇ?
ಪರಿಮಿತ ಪ್ರಜ್ಞಾ ಪ್ರಪಂಚ
ಪಿರಿಯದಾಯ್ತು ಆಗಲೇ!
ಮಮತೆಯ ಸುಳಿ ಹಬ್ಬಲಿ

ಮಾನವತೆಯ ತಬ್ಬಲಿ!
ವ್ಯಕ್ತಿ, ವ್ಯಕ್ತಿ ತಬ್ಬಲಿ!
ಮರೆಯೆ ಬಕುಲ ಬೊಬ್ಬುಳಿ!
ಬಿಂದು ಸಿಂಧು ಸೇರಿತೆಂದು
ನೀರಿಗೇನು ಬಂತು ಕುಂದು?
ಲೋಕಕೆಂದೆ ಭಾಗ್ಯೋದಯ
ಲೋಕಬಾಹಿರಳೇನು ನೀ?
ಧರ್ಮಕೆಂದೆ ಗುರುಸನ್ನಿಧಿ
ನೀನೆ ಧರ್ಮವಿರೋಧಿನೀ?
ಯಶೋಧರೆಗೆ ಧರೆಯ ಯಶದ
ಒಂದು ಪಾಲು ದೊರಕದೇ ?
ಸಮತೆಯಲ್ಲಿ ಮಮತೆಗೆಲ್ಲಿ-
ಇಂಬು? ನಂಬು, ಮರುಗದೆ !

**(ಯಶೋಧರೆ ಬಿಕ್ಕಿ ಬಿಕ್ಕಿ ಅಳತೊಡಗುವಳು. ಬುದ್ಧದೇವ ಆಕೆಯ ತಲೆ ನೇವರಿಸುತ್ತ ಮಾತು ಮುಗಿಸುವನು. ಕ್ಷಣಕಾಲ ಮೌನ.)**

**ಯಶೋಧರಾ:** ಭಗವನ್ ! ಮೋಹವೃತ್ರಹಂತಮಘವನ್!

**ಬುದ್ಧ:** **( ದಿಗ್ಗನೆದ್ದು )**

ಭಿಕ್ಷಾಂದೇಹಿ, ಭವತಿ,
ಭಿಕ್ಷಾಂದೇಹಿ!

**ಯಶೋಧರಾ:** ಭಿಕ್ಷೆ? - ನಾನೆ ನಿನ್ನ ಪಾದರಕ್ಷೆ!
ಬೇರೆ ನೀಡಲೇನು ಭಿಕ್ಷೆ?
ಈ ದೇಹವೆ ನಿನ್ನದು
ನಿನ್ನಾಳ್ಕೆಗೆ ಸಂದುದು!

**ಬುದ್ಧ :** ಅದನೆ ನೀಡು, ನೀಡು ಅದನೆ

**ಯಶೋಧರಾ:** **(ಜಗ್ಗನೆ ಎದ್ದು ಆವನ ಪಕ್ಕದಲ್ಲಿ ಪರ್ಯಂಕದಲ್ಲಿ ಮಾಟವಾಗಿ ಅಡ್ಡಾಗಿ)**
ನೀಡಿದೆನಿದೆ ನಿನ್ನಾಳ್ಕೆಗೆ
ನೀಡಿದೆನಿದೆ-ನೀಡಿದೆನಿದೆ!

ಬುದ್ಧ : ( ಅಸಹ್ಯಪಟ್ಟು ಮೋರೆ ತಿರುವಿಸುವನು )
ಶಾಂತಂ ಪಾಪಂ ! ಶಾಂತಂ ಪಾಪಂ !

ಯಶೋಧರಾ: (ವಿಕಾರವಶತೆಯಿಂದ ನಕ್ಕು)

ಶಾಂತಂ ಪಾಪಂ ! ನೋಡೀ ರೂಪಂ!
ಶ್ರೀಮದ್ರೂಪಂ! ರಸಪ್ರದೀಪಂ!
ಏಕೆ ವಿಮುಖ? ನೋಡೀ ಮುಖ
ರೂಪೋಜ್ಜ್ವಲ ಶ್ರೀಮುಖ!
ಶೃಂಗಾರಕೆ ಸುಖಸ್ವಾಮಿನಿ
ಭೃಂಗಾಲಕೆ ಶೃಂಗಸ್ತನಿ
ಮದನನ ನಯನೋತ್ಸವ
ಸೌಂದರ್ಯದ ಸೌಷ್ಠವ!

( ಉನ್ಮತ್ತಳಾಗಿ ನೋಡುವಳು. ಬುದ್ಧ ಕನಿಕರದಿಂದ ನಗುತ್ತ ಒಂದು ನಿರ್ಧಾರಕ್ಕೆ ಬಂದಂತೆ-)

ಬುದ್ಧ : ಏನು ಮಂಕು! ಏನು ಬಿಂಕ !
ಶೀಲಚಂದ್ರಕೀ ಕಲಂಕ !-
ಕಳೆಯಬೇಕು, ಆತ್ಮಬಿಂಬ
ಹೊಳೆಯಬೇಕು ಬೆಳಗಿ ತುಂಬ
ಯಶೋಧರಾsss!

( ಯಶೋಧರೆ ಆ ಕರೆಗೆ ಮಂತ್ರಮುಗ್ಧಳಂತೆ ಎದ್ದುಬರುವಳು. ಬುದ್ಧದೇವ ಅವಳ ಹೆಗಲ ಮೇಲೆ ಕೈಯಿಟ್ಟು ಭುಜದಳತೆ ನಿಲ್ಲಿಸಿ ಅವಳನ್ನು ನಖಶಿಖಾಂತ ಒಮ್ಮೆ ಕನ್ನಡಿಯಲ್ಲಿ ದಿಟ್ಟಿಸುತ್ತ -)

ಅಹುದು -
ಸೌಂದರ್ಯದ ಸೌಷ್ಠವ
ಮದನನ ನಯನೋತ್ಸವ
ಮೈಯು ಚಿನ್ನ, ಕಣ್ಣು ರನ್ನ
ಹವಳ ತುಟಿ, ಹಲ್ಲು ಮುತ್ತು
ಏನಿದು ರಸ ಸಂಪತ್ತು !

ಯಶೋಧರಾ: ( ಗಹಗಹಿಸಿ ನಕ್ಕು )

ಅಯ್ಯೋ! ನೆಳಲ ನೋಡಲೇಕೆ?
ಬೆಳಕೆ ನಿಲಲು ಸನಿಯಕೆ !
ಕನ್ನಡಿಯಲಿ ಗಂಟು ಕಂಡು

ಕೊಂಡಾಡುವದೇನು, ಮೊಂಡು?
ಇತ್ತ ನೋಡಿ, ಎನ್ನ ನೋಡಿ
ಅಂಗಾಂಗದ ಗಾಡಿಮೋಡಿ !

ಬುದ್ಧ : (ನಕ್ಕು)
ಚೆಲುವೆ ಒಂದು ನೆಳಲು !
ಮಂಜುಹನಿಯ ಕೊಳಲು
ಕೈಗೆ ಬಂದುದೇನು ? -
ನೋಡು-ನಿನ್ನ-ನೀನು !

(ಕನ್ನಡಿಯಲ್ಲಿ ಪ್ರತಿಬಿಂಬ ಬದಲಾಗಿ ಇದ್ದಕ್ಕಿದ್ದಂತೆ ಹಣ್ಣು-ನರೆತ ಮುದಿ ಹೆಂಗುಸಿನ ವಿದ್ರೂಪ ಕಾಣಿಸಿಕೊಳ್ಳುವುದು.)

ಯಶೋಧರಾ : (ಚೀತ್ಕರಿಸಿ)
ಅಯ್ಯೋ ! ಯಾರಿದು? ಯಾವ ರಕ್ಕಸಿ?-

ಬುದ್ಧ : (ನಕ್ಕು)
ಬೇರೆ ಯಾರು? ಯಶೋಧರೆ !
ಚೆಲುವ ಜವ್ವನ ಜವನು ಜೀರ್ಣಿಸೆ
ಮುಂದೆ ಬರಲಿದೆ ಈ ಜರೆ !

ಯಶೋಧರಾ : (ಕಣ್ಣು ತೆರೆಯಲಾರದೆ)
ಸಾಕು ನೋಡೆನು-
ಮುಗಿಯಿತೇ ಕತೆ ?

ಬುದ್ಧ : ನೋಡು, ಮುಗಿತಾಯವನಿಕೋ-

(ಕನ್ನಡಿಯಲ್ಲಿ ಅಸ್ಥಿಪಂಜರ ನಿಂತು ಕೈ ಬೀಸುವುದು, ಕೇಕೆ ಹಾಕುವುದು.)

-ಚೆಲುವು ಚರ್ಮವು
ಅದರ ಮರ್ಮವು
ಮೂಳೆ-ಮೂಟೆಯ ನೋಡಿಕೋ !

(ಯಶೋಧರೆ "ಅಯ್ಯೋss!" ಎಂದು ಚೀರಿ ಹೌಹಾರಿ ಮೂರ್ಛಿತಳಾಗಿ ನೆಲಕ್ಕೆ ಕುಸಿಯುವಳು. ಬುದ್ಧದೇವ ಅವಳನ್ನೆತ್ತಿ ಪರ್ಯಂಕದಲ್ಲಿ ಒರಗಿಸಿ ಶೈತ್ಯೋಪಚಾರವೆಸಗುವನು.)

ಬುದ್ಧ : ಸ್ಥೈರಿಸು ಮಗುವೆ, ಸ್ಥೈರಿಸು ಮುಗುದೆ
ಎಚ್ಚರ ! ಎಚ್ಚರ! ಭ್ರಮನಿರಸನವಿದೆ!

( ಯಶೋಧರೆಗೆ ಎಚ್ಚರ. ಸುತ್ತಲೂ ಕತ್ತೆತ್ತಿ ನೋಡಿ ಬುದ್ಧದೇವನನ್ನು ನೋಡಿದೊಡನೆ ಆತನ ಪಾದಕ್ಕೆ ಬಿದ್ದು ಅಳುತ್ತ-)

ಯೋಶೋಧರಾ : ಕ್ಷಮಿಸುವಿಯಾ ?
ಕ್ಷಮಿಸಿದೆಯಾ ?
ಓ ತಂದೆ-ಓ ತಾಯಿ
ಹಸುಳೆ ಎನ್ನ ಕಾಯಿ, ಕಾಯಿ! ( ಅಳುವಳು )

ಬುದ್ಧ : ( ಆಕೆಯನ್ನು ಎಬ್ಬಿಸಿ ಮೈದಡವಿ )
ಸಾಕು ಶೋಕ, ಯಶೋಧರೆ
ಕಣ್ಣ ಕವಿದ ಮೋಹದ ಪರೆ
ಹರಿದು ಕರಗಿ ಹರಿದಿದೆ
ಆತ್ಮ ತನ್ನನರಿತಿದೆ
"ದೇಹವನ್ನೆ ನೀಡು" - ಅಂದೆ
ಅದನು ನೀನಪಾರ್ಥದಿಂದೆ
ಗ್ರಹಿಸಿ ದಹಿಸಿ ಬಳಲಿ ಬೆಂದೆ
ಸ್ವಸ್ವರೂಪ ಕಂಡುಕೊಂಡೆ!
ಇನ್ನು ನಿನ್ನ ದೇಹ ಮುಡಿಪು
ಧರ್ಮಕೆ, ಸಂಘಕ್ಕೆ ಒಡಪು!
ರಾಹುಲ ಈಗಾಗಲೆ
ಆತ್ಮಾರ್ಪಣ ಗೈದನಲೆ!

ಯಶೋಧರಾ : (ಹಿಗ್ಗಿ)
ರಾಹುಲನೆ? ಗೈದಿಹನೆ ?
ಧನ್ಯನಹ! ಧನ್ಯನಹ!
ತಂದೆ-ಮಕ್ಕಳೆಂದಾಗಿರೆ
ತಾಯಿ ತಡೆವಳೆ ಇದುರೆ ?

ಬುದ್ಧ : ( ಸಸ್ಮಿತ )
ಯಾರು ತಾಯಿ? ಯಾರು ತಂದೆ ?
ತಥಾಗತಗೆ ಎಲ್ಲ ಒಂದೆ ?
ಧರ್ಮಚಕ್ರ ಪ್ರವರ್ತನೆ
ಕರ್ಮಚಕ್ರ ಪರಿವರ್ತನೆ-
ಒಂದೆ ನಿತ್ಯ. ಅದಕೆ ತಾನೆ

ನಾನು-ನೀನು-ನಿಖಿಲ ವ್ಯಕ್ತಿ
ಎಲ್ಲರಿಹೆವು ಆರಪಂಕ್ತಿ !
ಉರುಳಿ ಸುತ್ತಿ ಸಾವಧಾನ
ಸೇರಲಿಹೆವು ನಿರ್ವಾಣ !

ಯಶೋಧರಾ : ( **ಮಂಡಿಯೂರಿ** )
ಬುದ್ಧಂ ಶರಣಂ ಗಚ್ಛಾಮಿ!
ಸಂಘಂ ಶರಣಂ ಗಚ್ಛಾಮಿ!
ಧರ್ಮಂ ಶರಣಂ ಗಚ್ಛಾಮಿ!

( **ಪಾದಕೆರಗುವಳು** )

ಬುದ್ಧ : ( **ಅಭಯಹಸ್ತದಿಂದ ಆಶೀರ್ವದಿಸುತ್ತ** )

ಓಂ ಮಣಿ ಪದ್ಮೇ ಓಂss !

೨

# ಕರ್ಣಾಮೃತ

- ಕರ್ಣಾಮೃತ
- ವಾಸವದತ್ತಾ
- ದೇವಿಕೊಟ್ಟ ಬೆಳಕು
- ಶಿವಯೋಗಿ ಸಿದ್ಧಿ

ಶ್ರೀ ರಾಘವೇಂದ್ರ ಪ್ರಕಾಶನ, ಅಂಬಾರಕೊಡ್ಲ
ಅಂಕೋಲಾ ಉ.ಕ.

೧೯೮೦

# ಕರ್ಣಾಮೃತ

## ಪಾತ್ರಗಳು

ಕರ್ಣ

ಕೃಷ್ಣ

ವಿದುರ

ಅಥಿರಥ
(ಕರ್ಣನ ಸಾಕು ತಂದೆ)

ಕುಂತಿ

ಭಾಗಿರಥಿ

ರಾಧಾ
(ಕರ್ಣನ ಸಾಕು ತಾಯಿ)

**ಧ್ವನಿಗಳು: ರಥ, ಕುದುರೆ, ನದಿ-ಸದ್ದುಗಳು**

(ವಸ್ತುವಿಗೆ ಮೂಲ-ವಚನಭಾರತ, ಕುಮಾರವ್ಯಾಸ ಮತ್ತು ಉಳಿದುದೆಲ್ಲ ಕಲ್ಪನೆ)

(ಕೌರವ ಸಭಾ-ವಿಸರ್ಜನೆಯನ್ನು ಸೂಸುವ ಕಲಕಲ ಕೋಲಾಹಲ ಶಂಖ, ತುತ್ತೂರಿ, ನಗಾರೆಗಳು ಮೊಳಗುತ್ತಿವೆ. ಜನಸ್ತೋಮ ಗುಂಪು ಗುಂಪಾಗಿ ಚದುರುವ ಸದ್ದು-ಮಾತುಕತೆ, ಕೃಷ್ಣ ಸಂಧಾನ ವಿಫಲವಾದ ಸಭೆಯ ವಿಚಿತ್ರ ಮುಗಿತಾಯದ ಬಗೆಗೆ ಮಿಶ್ರ ಪ್ರತಿಕ್ರಿಯೆ-ಉದ್ಗಾರಗಳು ಮುನ್ನೆಲೆಯಲ್ಲಿ-ಹಿನ್ನೆಲೆಯಲ್ಲಿ ನಗಾರೆಯ ಸದ್ದು ಕೆಲ ನಿಮಿಷ ಮುಂದುವರಿಯುತ್ತ ಮಂದವಾಗುತ್ತದೆ.)

**ಧ್ವನಿಗಳು :**

೧. :- ರಾಜಾಧಿರಾಜ ಕೌರವೇಶ್ವರರಿಗೆ ಜಯವಾಗಲಿ !

೨. :- ದ್ವಾರಕಾಧೀಶ್ವರ ಶ್ರೀಕೃಷ್ಣ ಮಹಾರಾಜರಿಗೆ ಜಯವಾಗಲಿ!

೩. :- ಮಹಾರಾಜನಲ್ಲ, ಪ್ರತ್ಯಕ್ಷ ಪರಮಾತ್ಮ !

೨. :- (ಕೆಳದನಿ) ಮೂರ್ಖಾ, ಹಾಗೆನ್ನಬೇಡ. ಶಕುನಿಯ ಕುನ್ನಿಗಳು ಕೇಳ್ಯಾರು: ಆಮೇಲೆ ನಿನಗೆ ಉಳಿಗಾಲ ಉಂಟೆ?-ಈ ಕೌರವ ಸಭೆಯಲ್ಲಿ !

೧. :- ಸಾಕು, ಸುಮ್ಮನಿರು. ಕೌರವ ಸಭೆ ಅಲ್ಲ, ರೌರವ ಸಭೆ.

೨. :- ಹೌದು ಇಲ್ಲಿ ಎಲ್ಲಿ ಮಾತಿಗೆ ಗೌರವ ?

೩. :- ಅದೆಲ್ಲ ಹಳೆಕತೆ. ಏನು ಅದ್ಭುತ ನಡೆಯಿತು-ಇಂದಿನ ಸಭೆಯಲ್ಲಿ! ಓಹೋ, ಎಂಥ ಚಮತ್ಕಾರ !

೧. :- ಅದೆಂಥ ದುಃಸಾಹಸ! ಸುಯೋಧನ ದೊರೆಗೆ ಹೋಗೋಕಾಲ.

೨. :- ದುಃಶಾಸನನಿಂದ ಶ್ರೀಕೃಷ್ಣನನ್ನು ಕಟ್ಟಿ ಹಾಕಿಸಲು ಹವಣಿಸಿದ ಮಹಾಮೂರ್ಖ.

೩. :- ಕೃಷ್ಣನೆಂದರೆ ಅದೇನು ದ್ರೌಪದಿಯ ಸೀರೆಯೋ?

೧. :- ಆದರೆ, ಅದೆಂಥ ಘೋರರೂಪ ಶ್ರೀಕೃಷ್ಣ ಪ್ರಕಟಿಸಿದ.

೨. :- ವಿರಾಟ್‌ರೂಪ !

೩. :- ಭೀಷ್ಮದ್ರೋಣಾದಿಗಳ ಕಣ್ಣು ಕುಕ್ಕಿತು.

೧. :- ದುರ್ಯೋಧನನ ದರ್ಪ ಮಣ್ಣು ಮುಕ್ಕಿತು.

೨. :- ಶ್. ಶ್ ಅದಾರೋ ಬರುತ್ತಿದ್ದಾರೆ. ಕೌರವನ ಕಡೆಯವರಿರಬೇಕು.

೩. :- ಹೆದರಬೇಡೋ ಅದು ಮಹಾತ್ಮಾ ವಿದುರ. ದಾರಿ ಬಿಡು.

**ವಿದುರ :** ಧನ್ಯ, ಧನ್ಯ-ಜನ್ಮ ಸಾರ್ಥಕವಾಯಿತು. ಕಣ್ಣಿನ ಪುಣ್ಯ ಫಲಿಸಿತು. ಪರಮಾತ್ಮನ ವಿರಾಟರೂಪ ಕಂಡೆ. ಸಮಸ್ತ ಸಭೆ-ಅಂಧ ಧೃತರಾಷ್ಟ್ರನೂ ಕಂಡ. ಅದೆಂಥ ಭವ್ಯ ದಿವ್ಯ-ದರ್ಶನ. ಕೃಷ್ಣನ ರೋಮ ರೋಮದಿಂದ ತೇಜಃಪುಂಜ ರುದ್ರಾದಿತ್ಯವಸು ದೇವತೆಗಳು ಹೊರ ಬಂದು ನಿಂತರು.

ಶಂಖಚಕ್ರ ಗದಾಪದ್ಮಗಳು ಎದುರಿಗೆ ಸಜ್ಜಾದವು. ಸಭೆಗೆ ಸಭೆಯೇ ಭಯಚಕಿತ. ಶರಣಾಗತ. ಆದರೂ ಅದೇನು ದರ್ಪ ದುರ್ಯೋಧನನದು! ಅಂಧಪುತ್ರ ಮದಾಂಧರಾಜಪುತ್ರ. ಕೊನೆಗೂ ಸಿಂಹಾಸನದಿಂದ ಉರುಳಿಬಿದ್ದ-ಶ್ರೀಕೃಷ್ಣನ ಅಡಿದಾವರೆಗೆ ಅಬ್ಬ ! ಓಹೋ - ಹೋ-

ಧ್ವನಿ ೨ : (ರಥವು ಹತ್ತಿರ ಬಂದ ಸದ್ದು) ಓ ಶ್ರೀಕೃಷ್ಣನ ರಥ.

ಶ್ರೀಕೃಷ್ಣ : ಹಾಂ ಹಾಂ ನೀನೂ ಅಡಿಗೆ ಬೀಳುವಿ. ಬಡ ಕುದುರೆಗಳ ಅಡಿದಾವರೆಗೆ! ಜೋಕೆ !

ವಿದುರ : ಅದಾರು? ಕೃಷ್ಣಾ,ಅದ್ಭುತ ಮಾಡಿಬಿಟ್ಟೆಯೋ!

(ಹರ್ಷಗದ್ಗದ) ಕಣ್ಣಪಾಪ ತೊಳೆಯಿತು.

ಕೃಷ್ಣ : ತೊಳೆಯಲು ನೀನು ಪಾಪವಾದರೂ ಏನು ಮಾಡಿರುವಿ? ಈ ಸುಳ್ಳೇ ಒಂದು ಪಾಪ. (ನಗು) ಇರಲಿ. ಬಾ ರಥವನ್ನೇರು. ನಡೆದೇಕೆ ಹೋಗುವಿ?

ವಿದುರ : ಬೇಡ ಕೃಷ್ಣಾ ನನ್ನ ಉಸಿರು ಗಟ್ಟಿದಂತಾಗಿದೆ. ಸಭೆಯಲ್ಲಿ ನಡೆದ ರಾದ್ಧಾಂತದಿಂದ. ನೀನು ಮುಂದೆ ನಡೆ. ನಾನು ನಿಧಾನವಾಗಿ ನಡೆದು ಬರುತ್ತೇನೆ. ಮುಂದಾಗು, ನಾ ಹಿಂಬಾಲಿಸುತ್ತೇನೆ.

ಕೃಷ್ಣ : (ನಕ್ಕು) ನೀನು ಎಂದಿಗೂ ನನ್ನ ಹಿಂಬಾಲಕನೆ.

ವಿದುರ : ಅಲ್ಲವೆ? ಮತ್ತೆ ? ನಾನು ಬಾಲಕ. ನೀನು ಗೋಪಾಲಕ. ನಿನ್ನ ಹಿಂದೆ ನಾನು ಗೋವು.

ಕೃಷ್ಣ : ಇಲ್ಲಿ ತಪ್ಪಿದೆ ನೀನು. ಗೋವೆಲ್ಲ ಮುಂದೆ. ಅವನ್ನು ತರಬುವ ಗೋಪಾಲ ಹಿಂದೆ. (ನಗು) ಗಡ್ಡ ಹಣ್ಣಾಯಿತು. ಇದು ಇನ್ನೂ ಗೊತ್ತಾಗಿಲ್ಲವೆ?

ವಿದುರ : ಗಡ್ಡ ಹಣ್ಣಾದರೂ-ನನ್ನ ಕರ್ಮ ಹಣ್ಣಾಗಿಲ್ಲ. ಬುದ್ಧಿ ಕರ್ಮವನ್ನು ಹಿಂಬಾಲಿಸುತ್ತದೆ.

ಕೃಷ್ಣ : ನೋಡು, ವಿದುರಾ ನನ್ನ ರಥದಲ್ಲಿ ಬಾ. ಇನ್ನೊಂದು ಪವಾಡ ನೋಡುವಿಯಂತೆ !

ವಿದುರ: ಸಾಕು ದೇವಾ. ಈ ದಿವಸಕ್ಕೆ ಒಂದು ಪವಾಡ ಸಾಕು- ಕಣ್ಣು ಮಂದವಾದ ಮುದುಕನಿಗೆ. ನೀ ಮುಂದಾಗು, ಮನೆಗೆ ಹೋಗಿ ವಿಶ್ರಮಿಸು.

ಕೃಷ್ಣ : ನಿನ್ನ ಇಚ್ಛೆ. (ರಥ ಮುಂದುವರಿಯುವ ಸದ್ದು)

ವಿದುರ : ಗೋಪಾಲ ನೀನು, ಕುರುಕುಲವನ್ನು ತುರುಮಂದೆಯಂತೆ ಅಟ್ಟಿಕೊಂಡು ಹೋಗ್ತಾ ಇದ್ದೀಯೆ, -ಕಾಲನ ಕೊಟ್ಟಿಗೆಗೆ. ಅರೆ ಇದೇನು? ಕೃಷ್ಣನ ರಥ ಮತ್ತೆ ನಿಂತಿತು. ಅದಾರು! ಕರ್ಣನನ್ನು ಕರೆದು ಮಾತಾಡಿಸುತ್ತಿದ್ದಾನೆ! ಎಲಾ ಕೈಹಿಡಿದು ಕರ್ಣನನ್ನು ಎತ್ತಿ ರಥದಲ್ಲಿ ಕುಳ್ಳಿರಿಸಿಕೊಂಡ, ತನ್ನ ತೊಡೆಗೆ ತೊಡೆ ತಾಗಿಸಿ! ಸರಿ, ಇದೇ ಇನ್ನೊಂದು ಪವಾಡ. ಕೃಷ್ಣ ಸಂಧಾನದ ನಂತರ ಕರ್ಣ ಸಂಧಾನ! ಇದೂ ನಡಿಯಲ್ಲಿ ಜಗನ್ನಾಟಕ, ಸೂತ್ರಧಾರ, ನಿನ್ನ ಲೀಲೆ ನೋಡುವದೊಂದೇ ನಮ್ಮ ಭಾಗ್ಯ !

( ಕಾಲಕ್ರಮೇಣ ಸೂಚಕ ಸಿತಾರ-ಸ್ವರಜತಿ)

## ೨

(ದೃಶ್ಯಪಲ್ಲಟ)

(ವಿದುರನ ಮನೆಯಲ್ಲಿ-ವಿದುರ-ಕುಂತಿ)

ಕುಂತಿ : ವಿದುರಣ್ಣಾ ಕೊನೆಗೂ ಹೀಗಾಯಿತೆ? ಸಂಧಾನ ಮುರಿಯಿತೇ?

ವಿದುರ: ಒಂದು ಸಂಧಾನ ಮುರಿಯಿತು. ಕುಂತಿದೇವಿ. ಆದರೆ ಇನ್ನೊಂದು ಆರಂಭವಾಗಿದೆ.

ಕುಂತಿ : ಅದೇನು?

ವಿದುರ : ಕರ್ಣಸಂಧಾನ!

ಕುಂತಿ : ಅಂದರೇನಣ್ಣಾ?

ವಿದುರ : ಶ್ರೀಕೃಷ್ಣ ಕರ್ಣನನ್ನು ಸಂಧಿಸಿ ಭೇದೋಪಾಯ ನಡೆಯಿಸಿದ್ದಾನೆ. ಇದೋ ಆ ಕಪಟ ಕಾರಸ್ಥಾನಿಯೇ ಬಂದ. ಕೃಷ್ಣಾ-

ಕೃಷ್ಣ : ಕಾರಸ್ಥಾನ ಸರಿ ! ಆದರೆ ಕಪಟವಿಲ್ಲ, ಹಿಂದೆಯೇ ಆದ ಕಪಟದ ಕವಾಟವನ್ನು ತೆರೆದು ತೋರಿಸಿದೆ, ಅಷ್ಟೆ !

ವಿದುರ : ಆದರೆ ಕರ್ಣನೆಲ್ಲಿ ?

ಕೃಷ್ಣ : ಇದ್ದಲ್ಲಿಯೇ! ಸುಯೋಧನನ ಪಕ್ಕದಲ್ಲಿ. ಆತ ತನ್ನ ತಮ್ಮಂದಿರ ಪಕ್ಷಕ್ಕೆ ಬರಲೊಲ್ಲ.

ಕುಂತಿ : ತಮ್ಮಂದಿರ? ಅಂದಾಗ-

ಕೃಷ್ಣ : ಆಗಲೆ ಅಂದೆನಲ್ಲ! ಹಳೆಯ ಕಪಟದ ಕವಾಟ ತೆರೆದು ತೋರಿಸಿದೆನೆಂದು, ಕರ್ಣನಿಗೆ ಅವನ ಹುಟ್ಟಿನ ಗುಟ್ಟನ್ನು ತಿಳಿಸಿಬಿಟ್ಟೆ.

ಕುಂತಿ : ಅಯ್ಯೋ, ಕೃಷ್ಣ, ಇದೇನು ಮಾಡಿಬಿಟ್ಟೆ! ನನ್ನ ಬಚ್ಚಿಟ್ಟ ಪಾಪ ಬಯಲಾಯಿತಲ್ಲ.

ಕೃಷ್ಣ : ವ್ಯಥೆ ಪಡಬೇಡ ಅತ್ತೆ! ಅದು ಎಂದೋ ಬಯಲಾಗಿದೆ. ಸೂರ್ಯನಲ್ಲಿ ಘಟಿಸಿದ್ದು ಬೆಳಕಿಗೆ ಬಾರದುಂಟೆ? ಕರ್ಣನಿಗೆ ತಾನು ಯಾರೆಂದು ಮೊದಲೇ ಗೊತ್ತಾಗಿದೆ.

ಕುಂತಿ : ಅದು ಹೇಗೆ?

(ಸಿತಾರಿನ ಸ್ವರಜತಿ)

ಕೃಷ್ಣ : ಸೂರ್ಯದೇವನೇ ಬಂದು ಮಗನಿಗೆ ಹೇಳಿದನಂತೆ.

ವಿದುರ : ತಾನು ಪ್ರಥಮ ಪಾಂಡವನೆಂದು ತಿಳಿದ ಮೇಲೂ ಕರ್ಣ ಕೌರವನ ಪಕ್ಷ ಬಿಡಲೊಲ್ಲನೆ?

ಕೃಷ್ಣ : ಇಲ್ಲ ವಿದುರ ಇಲ್ಲ. ಆತ ನಿಜವಾಗಿಯೂ ಸತ್ಯಸಂಧ. ಸ್ವಾಮಿ ಭಕ್ತ. ಆದರ್ಶಮಿತ್ರ. ಕೌರವನ ಅನ್ನದ ಋಣವನ್ನು ತೀರಿಸಲು ನಾಳಿನ ಕುರುಕ್ಷೇತ್ರವನ್ನು ಕಾತರನಾಗಿ ಕಾಯುತ್ತಿದ್ದಾನೆ.

ವಿದುರ : ಕೃಷ್ಣಾ, ನಿನ್ನ ಮಾತಿನ ಜಾಣತನ ಅವನಲ್ಲಿ ಪರಿಣಾಮ ಮಾಡಲಿಲ್ಲವೇ?

ಕೃಷ್ಣ : ಮಾತಿನ ಜಾಣತನ ಕಾಣಿಸಲು ಹೋದೆ. ಜಾಣತನದ ಮಾತನ್ನು ಕೇಳಿ ಮರಳಿ ಬಂದೆ.

ಕುಂತಿ : ಕರ್ಣನೇನೆಂದ?

ಕೃಷ್ಣ : (ನಕ್ಕು) ನನಗೇ ಮರುಳನೆಂದ.

ಕುಂತಿ:
ವಿದುರ: } ಮರುಳ ? ನಿನಗೆ ?

ಕೃಷ್ಣ : ಮರುಳನಲ್ಲದೇ ಮತ್ತೇನು? ಅವನ ಅನನ್ಯ ನಿಷ್ಠೆಯನ್ನು ರಾಜ್ಯದ ರಕ್ತ-ಸಂಬಂಧದ ಮೋಹ ಹಚ್ಚಿ ಭ್ರಷ್ಟ ಮಾಡಲು ಹವಣಿಸಿದ ನಾನು ಅವನ ಕಣ್ಣಿಗೆ ಮರುಳನಾಗಿ ಕಂಡರೆ ಸೋಜಿಗವೇನು ?

ಕುಂತಿ: ಹಾಗಾದರೆ, ಕರ್ಣನ ನಿಲುಮೆ ನಿನಗೂ ಸಮ್ಮತವೇ?

ಕೃಷ್ಣ : ಪೂರ್ತಿ ಸಮ್ಮತ ಅತ್ತೆ, ಕರ್ಣನ ದೃಢ ನಿರ್ಧಾರಕ್ಕೆ, ಅದಕ್ಕೂ ಮಿಗಿಲಾದ ನಿಷ್ಠೆಗೆ ನಾನು ಮಾರಿಹೋದೆ. ಅಹಹ, ನಿಜವಾಗಿಯೂ ಕರ್ಣ-ಕೌರವರ ಸ್ನೇಹವೇ ಸ್ನೇಹ! ಕೃಷ್ಣಾರ್ಜುನರ ಸಖ್ಯ ಅದರೆ ಮುಂದೆ ಏನೂ ಅಲ್ಲ.

ಕುಂತಿ: ಹಾಗಾದರೆ ಮುಂದೇನು!

ಕೃಷ್ಣ : ನಾನಿನ್ನು ಯುಧಿಷ್ಠಿರನಿದ್ದಲ್ಲಿಗೆ ತೆರಳಬೇಕು. ಇಲ್ಲಿಯ ವಿದ್ಯಮಾನಗಳನ್ನು ಅವನಿಗೆ ಅರುಹಬೇಕು. ಅತ್ತೆ ಹೋಗಿಬರುತ್ತೇನೆ. ನಿನ್ನ ಮಕ್ಕಳಿಗೆ ಏನಾದರೂ ಸಂದೇಶ?

ಕುಂತಿ: ಇನ್ನೇನು ಸಂದೇಶ? ಕ್ಷತ್ರಿಯ ಧರ್ಮವನ್ನು ಕಾಪಾಡಲು ಯುಧಿಷ್ಠಿರನಿಗೆ ಹೇಳು. ಸಾಮಭೇದಗಳಾದವು ಇನ್ನುಳಿದದ್ದು ದಂಡ. ರಾಜಕಾರಣದ ಕೊನೆಗೆ ರಣ. ಹೆರವನ ಮನೆಯಲ್ಲಿ ಅನ್ನಕ್ಕಾಗಿ ಆಶ್ರಯ ಪಡೆದ ನಾನು, ತುಂಬಿದ ಸಭೆಯಲ್ಲಿ ಅವಮಾನ ಮಾಡಿಸಿಕೊಂಡ ನನ್ನ ಸೊಸೆ, ಇವರ ದುರ್ದೆಶೆಗೆ ಕೊನೆ ಎಂದು? ಶಾಸ್ತ್ರಾರ್ಥದ ಮೀನ-ಮೇಷ ಮುಗಿಯಿತು. ಇನ್ನು ಶಸ್ತ್ರಾಸ್ತ್ರ ಪರುಷಾರ್ಥದ ಕರೆ. ಕೌರವರ ಸೇಡು ಅವರ ಪಕ್ಷದವರ ಕೇಡು. ಅದೊಂದೇ ನನ್ನ ಮಕ್ಕಳ ಹಾದಿ, ಹೆಜ್ಜೆ, ಹೆಗ್ಗುರಿಯಾಗಲಿ.

ಕೃಷ್ಣ: ಅತ್ತೆ, ನಿನ್ನ ಪಾದಕ್ಕೆ ಬಿದ್ದೆ. ವಿದುರಾ, ನಿನಗೂ ನಮಸ್ಕಾರ.

ಕುಂತಿ:
ವಿದುರ : } ನಿನ್ನ ಪಯಣ ಸುಖವಾಗಲಿ, ಶುಭಮಸ್ತು.

೩

(ಕರ್ಣನ ಮಂದಿರ. ಚಿಂತಾಕ್ರಾಂತನಾದ ಕರ್ಣ)

ನಿವೇದಕ : ಕಾದುಕೊಲುವೊಡೆ ಪಾಂಡುಸುತರು ಸ
ಹೋದರರು ಕೊಲಲಿಲ್ಲ ಕೊಲ್ಲದೆ
ಕಾದೆನಾದೊಡೆ ಕೌರವೇಂದ್ರನಿಗವನಿಯಲಿ ಹೊಗಲಿಲ್ಲ
ಭೇದದಲಿ ಹೊಕ್ಕಿರಿದನೋ ಮಧು
ಸೂದನನು ತಾನಕಟೆನುತಚಿಂ
ತೋದಧಿಯೊಳದ್ದಂತೆ ಮೌನದೊಳಿದ್ದನಾ ಕರ್ಣ

ಕರ್ಣ : (ನಿಟ್ಟುಸಿರು) ಅಬ್ಬ! ಏನೆಲ್ಲ ಘಟಿಸಿಹೋಯಿತು!. ಸಂಧಾನ ಮುರಿಯಿತು. ಆದರೆ ನನ್ನ ಸ್ವಾಮಿ ಸುಯೋಧನನ ಅಭಿಮಾನ ಮುರಿಯಲಿಲ್ಲ. ಕೌರವೇಶ್ವರನಿಗೆ ವಿನಾಶ ನಿಶ್ಚಿತ. ನಾವೆಲ್ಲರೂ ಅದೇ ಲೋಕಸಂಹಾರದ ಸರ್ವನಾಶದ, ಸಾಗರವನ್ನು ಸೇರಲು ಧಾವಿಸುವ ಹುಚ್ಚು ಹೊಳೆ ಹಳ್ಳಗಳು, ಮುನ್ನುಗ್ಗುವದೊಂದೆ ನಮ್ಮ ನಿಯತಿ. ತಡೆ ಇಲ್ಲ, ತಡವಿಲ್ಲ, ಹೊರಟು ಮರಳುವದಿಲ್ಲ. ಆದರೆ ಶ್ರೀಕೃಷ್ಣ, ಇದೇನು ನೀನು ಮಾಡಿದಿ! ಭೇದದಲಿ ಹೊಕ್ಕಿರಿದಿಯಾ? ಮಧುಸೂದನ! ನಿಜವಾಗಿಯೂ ನೀನು ಮಧುಸೂದನ-ಮಧುಮಧುರ ಮಾತಿನಿಂದಲೆ ಕೊಲ್ಲುವ ಕಾರಸ್ಥಾನಿ. ನನ್ನ ಜನನವನ್ನು ಅರುಹಿಕೊಂದೆ. ಹಾ ಎಂಥ ಧರ್ಮಸಂಕಟಕ್ಕೆ ನಮ್ಮನ್ನು ಒಡ್ಡಿಬಿಟ್ಟೆಯೋ? ಪಾಂಡವರು ನನ್ನ ತಮ್ಮಂದಿರು ಅವರನ್ನು ಕೊಲ್ಲುವಂತಿಲ್ಲ. ಅವರನ್ನು ಹಾಗೆಯೆ ಬಿಟ್ಟರೆ ಅವರಿಂದ ನನ್ನ ಜೀವದ ಜೀವದ ಗೆಳೆಯ, ಬಾಳಿನ ಒಡೆಯ ಕೌರವೇಶ್ವರ ಬದಕುವಂತಿಲ್ಲ. ಓಹ್, ಎಂಥ ಪೇಚು, - ಅತ್ತ ಬಂಧುಹತ್ಯೆ ಇತ್ತ ಸ್ವಾಮಿ-ದ್ರೋಹ, ಅತ್ತ ಶತ್ರುಮೋಹ ಇತ್ತ ಮಿತ್ರ ದ್ರೋಹ. ಅಮಮಾ, ಎಂಥ ದಾಹ! ಏನು ಮಾಡಲಿ? ಹೂಂ, ಇದೇ ನಿರ್ಧಾರ. ನಾಳಿನ ಭಾರತ ಮಾರಿಗೌತಣ. ಪಾಂಡವರ ಸೇನೆಯನ್ನೆಲ್ಲ ಧ್ವಂಸ ಮಾಡಿ ನನ್ನ ಸ್ವಾಮಿಯ ಋಣ ತೀರಿಸುವೆನು. ಅವನನ್ನು ರಕ್ಷಿಸಲು ನನ್ನೀ ದೇಹವನ್ನು ರಣದೇವತೆಗೆ ಬಲಿ ಕೊಡುವೆನು. ಹುಟ್ಟಿನಲ್ಲಿ ಕೆಟ್ಟೆ. -ಅದು ನನ್ನದಿದ್ದಿಲ್ಲ, ಸಾವು ನನ್ನದು-ಅದರಲ್ಲಿ ಕೆಡಲಾರೆ. -ಇದೊ ಸೂರ್ಯೋದಯವಾಯಿತು. (ದೂರದಲ್ಲಿ ಕೋಳಿ ಕೂಗು ಪಕ್ಕಿಗಳು ಚಿಲಿಪಿಲಿ ಹೆಚ್ಚಾಗುವದು. ಹಿನ್ನೆಲೆಯಲ್ಲಿ ಮುಂಜಾವಿನ ನಾಗಸ್ವರ, ನಗಾರೆ)

ರಾತ್ರಿ ಎಲ್ಲಾ ಒದ್ದಾಡಿದೆ. ಆ ಕೃಷ್ಣ ನನ್ನ ನಿದ್ರೆಯನ್ನೂ ಕೊಂದ. ತಾಯಿ ಭಾಗೀರಥಿಯ ತೊಡೆಯಲ್ಲಿ ಆದರೂ ಮೈಮನಗಳನ್ನು ತಣಿಸೋಣ.

(ದೃಶ್ಯ - ಪಲ್ಲಟ)

(ವಾದ್ಯಸಂಗೀತ-ಉದಯ ಪೂರ್ಣ-ಉತ್ತರರಾತ್ರಿಯರಾಗ)

೪

(ವಿದುರನ ಮನೆ ಕುಂತಿ-ವಿದುರರು ಅದೇ ರಾತ್ರಿ)

ಕುಂತಿ : ವಿದುರಣ್ಣಾ ss

ವಿದುರ : ಕುಂತೀದೇವಿ, ಏನು ಕರೆದಿ?

ಕುಂತಿ : ಏನಿಲ್ಲ (ನಿಟ್ಟುಸಿರು) ನೀನು ಮೌನವಾಗಿ ಕುಳಿತಿರುವೆ. ನಿನ್ನ ಮೋರೆ ಏಕೆ ಇಷ್ಟು ಗಂಭೀರ?

ವಿದುರ : (ಖಿನ್ನವಾಗಿ ನಕ್ಕು) ಮತ್ತೆ ನೀನೇಕೆ ಇಷ್ಟು ವ್ಯಾಕುಲ? ಅಂದು ಯುಧಿಷ್ಠಿರನಿಗೆ ಅಷ್ಟೊಂದು ರಣೋತ್ಸಾಹದಿಂದ ವೀರಸಂದೇಶ ಕಳುಹಿಸಿದವಳು ನೀನೇ ತಾನೆ?

ಕುಂತಿ : ಆ ಜ್ವರವೀಗ ಇಳಿಯಿತು. ಈಗ ನಮ್ಮಿಬ್ಬರಿಗೆ ಒಂದೇ ಚಿಂತೆ.

ವಿದುರ : ಯುದ್ಧಕ್ಕೆ ಸಿದ್ಧರಾಗೆಂದು ನೀನು ಯುಧಿಷ್ಠಿರನಿಗೆ ಸಂದೇಶ ಕಳುಹಿಸಿದಿ.

ಕುಂತಿ : ಸರಿ ಅದು ವಿಧಿಯಾಡಿದ ಸಂದೇಶ. ನನ್ನ ಬಾಯಿಂದ ಬಂತು. ಕುರು-ಪಾಂಡವರ ಯುದ್ಧ ಕ್ಷತ್ರಿಯ ಕುಲಕ್ಕೇ ಸರ್ವನಾಶ. ಲೋಕಕ್ಷಯಕ್ಕೆ ಕಾಲಪಾಶ.

ವಿದುರ : ಮತ್ತೆ?

ಕುಂತಿ : ಅಹುದಣ್ಣಾ ಅದೇ ಚಿಂತೆ. ಅದಕ್ಕೇನು ಗತಿ?

ವಿದುರ : (ಖಿನ್ನನಾಗಿ ನಕ್ಕು) ಇನ್ನೇನು? ವೀರರಿಗೆ ಸದ್ಗತಿ. ಹೇಡಿಗಳಿಗೆ ದುರ್ಗತಿ. ಇನ್ನು ನೀನೂ ನಾನೂ ಚಿಂತಿಸಿ ಫಲವೇನು? ಶ್ರೀಕೃಷ್ಣನಿದ್ದಾನೆ. ನೋಡಿಕೊಳ್ಳುತ್ತಾನೆ. ಏಳು, ರಾತ್ರಿ ಬಹಳವಾಯಿತು. ವಿಶ್ರಮಿಸೋಣ. ತಂಗಿ ನಿನ್ನ ಮಂದಿರಕ್ಕೆ ತೆರಳು ಬಾಗಿಲಲಿ ಪಂಜಿನಾಳು ಕಾಯುತ್ತಿದ್ದಾನೆ. ನಾನೂ ಎದ್ದೆ, (ಹೋಗುವನು)

ಕುಂತಿ : ಅಯ್ಯೋ ಹಾಳು ಯುದ್ಧ ಜ್ವಾಲೆಗಳು, ಪರಸ್ಪರ ಹೊಡೆದಾಡಿ ಸಾಯುವರಲ್ಲ. ಸ್ವಜನರನ್ನೆಲ್ಲ ಕೊಂದು ಪಡೆದ ಗೆಲುವು ಗೆಲುವೇ? ನೆತ್ತರದ ಕೋಡಿ ಕುಲಕ್ಷಯ. ನನಗಂತೂ ಭೀಷ್ಮ-ದ್ರೋಣ-ಕರ್ಣರಿಂದಲೇ ಭಯ. ಅಲ್ಲಿಯೂ ಭೀಷ್ಮನಿಗೆ ಮೊಮ್ಮಕ್ಕಳೆಂದು ದ್ರೋಣನಿಗೆ ಪ್ರಿಯಶಿಷ್ಯರೆಂದು ಪಾಂಡವರಲ್ಲಿ ಮಮತೆ ಉಂಟು. ಆದರೆ ಕರ್ಣ; ಅಕಟ, ಅಬ್ಬ ಆ ದುರ್ಯೋಧನನ ಬೊಗಸೆಯಿಂದ ನೀರು ಕುಡಿದು ನನ್ನ ಮಕ್ಕಳ ಮೇಲೆ ವಿಷ ಕಾರುತ್ತಾನೆ. ದ್ವೇಷದ ದಳ್ಳುರಿಯಾಗಿದ್ದಾನೆ. ಅವನೊಬ್ಬನೆ ನಮಗೆ ಎದೆಗಿಚ್ಚು. ಹೇಗಾದರೂ ಅವನನ್ನು ಒಲಿಸಿಕೊಳ್ಳಲೇಬೇಕು, ಹೇಗಾದರೂ ಅವನನ್ನು ಒಲಿಸಿಕೊಳ್ಳಲೇಬೇಕು! ಹೇಗೆ? ಶ್ರೀಕೃಷ್ಣನಿಗೇ ಕರಗಲಿಲ್ಲ ಆತ. ಆದರೂ ನನ್ನ ತಾಯ್ಗರುಳಿಗೆ ಒಲಿಯಬಹುದು. ಒಮ್ಮೆ ಹೋಗಿ ಕಂಡು ಪ್ರಯತ್ನ ಮಾಡುವೆನು-ನಾಳೆ ಸೂರ್ಯೋದಯಕ್ಕೆ ...

(ದೃಶ್ಯ ಪಲ್ಲಟ)

(ವಾದ್ಯ-ಸಂಗೀತ ಉದಯದ ರಾಗ)

(ಭಾಗೀರಥಿ ತೀರ ಸ್ನಾನ ಸಂಧ್ಯಾದಿಗಳ ಸದ್ದು. ಮೊದಲು ಸಮೀಪ ಆ ಮೇಲೆ ದೂರವಾಗುತ್ತ ಹೋಗುತ್ತದೆ.

ಕರ್ಣ: ಓಂ ಭೂರ್ಭುಸ್ವಃ
ಓಂ ತತ್‌ಸವಿತುರ್ವರೇಣ್ಯಂ
ಭರ್ಗೋದೇವಸ್ಯ ಧೀಮಹೀ
ಧಿಯೋಯೋನಃ ಪ್ರಚೋದಯಾತ್
(ಈ ಸದಿತ್ಯ ಮಂತ್ರವನ್ನು ಜಪಿಸುತ್ತಿರುತ್ತಾನೆ. ಧೀರ ಗಂಭೀರ ದನಿಯಲ್ಲಿ. ಕುಂತಿಯು ಬರುತ್ತಾಳೆ)

ಕುಂತಿ : ಅದೋ ಕರ್ಣ ಸ್ನಾನಾದಿ ಅಹ್ನಿಕಮುಗಿಸಿ ಸೌರಮಂತ್ರವನ್ನು ಜಪಿಸುತ್ತ ಸೂರ್ಯನಿಗೆ ಇದುರಾಗಿ ನಿಂತಿದ್ದಾನೆ. ಎಂಥ ಧೀರ ಉದಾತ್ತ ಛವಿ! ಈತ ಔದಾರ್ಯದ ಕಲ್ಪವೃಕ್ಷ! ನನ್ನ ಭಿಕ್ಷೆ ತಿರಸ್ಕರಿಸಲಾರ. ಓ ಎಂಥ ಬಿಸಿಲು! ಸೂರ್ಯದೇವನು ಉರಿಗಣ್ಣು ಬಿಟ್ಟಿದ್ದಾನೆ ನನ್ನ ನೋಡಿ. ಕರ್ಣನ ಜಪ ಮುಗಿಯುವ ತನಕ ಹಿಂದೆಯೆ ಜಪ್ಪಿಸಿ ನಿಲ್ಲುತ್ತೇನೆ.

ಕರ್ಣ : ಅದಾರು ಹೆಣ್ಣು ಆಕೃತಿ? ಮೋರೆ ಮುಸುಕುಹಾಕಿ ಇತ್ತ ಬರುವಂತಿದೆ. ಬಾಡಿದ ತಾವರೆಯ ಬಳ್ಳಿಯಂತೆ ಬಳಕುತ್ತಾಳೆ. ಅರೇ ನನ್ನ ಬಳಿಗೇ

ಬಂದಳು! ಓ ಗೊತ್ತಾಯಿತು. ಇವಳು ಕುಂತಿದೇವಿ ಪಾಂಡವರ-ನನ್ನ-ಹಡೆದವ್ವ-ಅಮ್ಮಾ ಇದೋ ನಾನು ಅಧಿರಥ ರಾಧೆಯರ ಪುತ್ರ ವಸುಷೇಣ ಕರ್ಣ ಅಭಿವಂದಿಸುತ್ತೇನೆ.

**ಕುಂತಿ** : (ಬಿಕ್ಕುತ್ತ) ಅಲ್ಲ, ಅಲ್ಲ ನೀನು ರಾಧೇಯನಲ್ಲ, ಕಂದಾ ಕೌಂತೇಯ. ನನ್ನ ಹೊಟ್ಟೆಯ ಕೂಸು ನೀನು ಚೊಚ್ಚಲ ಕೂಸು. ಬಾ, ಹೀಗೆ ಬಾ. ನನ್ನನ್ನು ಹೀಗೆ ಬಿಗಿದಪ್ಪು! ಆಹಾಹಾಹಾ.s

**ಕರ್ಣ** : (ಗದ್ಗದ) ಆಹಾ, ಧನ್ಯನಾದೆ! ಅಮ್ಮಾ ಈ ತೋಳತೆಕ್ಕೆ ಎಂದೊ ಸಿಗಬೇಕಿತ್ತು! ಅಂದು ಬೇಕಾದಾಗ ಸಿಗಲಿಲ್ಲ. ಇಂದು ಸಿಕ್ಕಾಗ ಬೇಕಾಗಿಲ್ಲ. ಅಹುದಮ್ಮ, ಬೇಕಾಗಿಲ್ಲ!

**ಕುಂತಿ** : ಅಯ್ಯೋ! ಹೆತ್ತ ತಾಯಿಗೆ ಹಾಗೆ ಅನ್ನಬಾರದು.

**ಕರ್ಣ** : ಅಮ್ಮಾ ನನಗೂ ಗೊತ್ತು. ಹಾಗೆ ಅನ್ನಿಸುತ್ತದೆ. ಆದರೆ ಹಾಗೆನ್ನದೆ ವಿಧಿ ಇಲ್ಲ. ನೀನು ನನ್ನ ಹೆತ್ತ ತಾಯಿ. ನಾನು ಪ್ರಥಮಪಾಂಡವ. ಇದು ನನಗೆ ಹಿಂದೆಯೇ ಗೊತ್ತು. ಶ್ರೀಕೃಷ್ಣನೂ ಹೇಳುವ ಮುಂಚೆಯೇ ಗೊತ್ತು.

**ಕುಂತಿ** : ಅಂದಾಗ ಹೀಗೇಕೆ?

**ಕರ್ಣ** : ಈಗ ಕಾಲ ಮಿಂಚಿ ಹೋಯಿತಮ್ಮಾ!

**ಕುಂತಿ** : ಇಲ್ಲ ಹೆತ್ತ ತಾಯಿ ಎಂದೆಂದಿಗೂ ಹೆತ್ತ ತಾಯಿಯೇ, ಈ ಸತ್ಯಕ್ಕೆ ಕಾಲಬಾಧೆ ಇಲ್ಲ.

**ಕರ್ಣ** : ಹೆತ್ತ ತಾಯಿಯೊಬ್ಬಳೇ ತಾಯಿಯಲ್ಲ. ನನಗಾಗಿ ತನ್ನ ಬಾಳನ್ನೆಲ್ಲ ತೆತ್ತ ತಾಯಿ, ನನ್ನ ಹಡೆದವ್ವಳಲ್ಲಿ ನಾನು ಪಡೆದದ್ದೇನು? ಅಮ್ಮಾ ನೀನು ಹುಟ್ಟಿದೊಡನೆ ನನ್ನ ಕೈ ಬಿಟ್ಟೆ. ಪಾಪದ ಪಿಂಡವೆಂದು ಹಳ್ಳಕ್ಕೆಸೆದು ಬಿಟ್ಟೆ.

**ಕುಂತಿ** : ಮಗು ಅಂದಿನ ದೇಶ ಕಾಲ ಪರಿಸ್ಥಿತಿ ನನ್ನ ಮನಸ್ಥಿತಿ ಬೇರೆ. ಅದನ್ನು ಇಂದಿನ ಕಣ್ಣಿನಿಂದ ಕಂಡು ಅಳೆಯಬೇಡ.

**ಕರ್ಣ** : ಅಂದು ಇಂದು ಮುಂದೂ ಎಂದೆಂದಿಗೂ ತಾಯ್ತನ ಒಂದೆ. ಈ ಸತ್ಯಕ್ಕೆ ಕಾಲಬಾಧೆ ಇಲ್ಲ! ಹೊರುವದು, ಹೆರುವದು ಪ್ರಕೃತಿ ಸಾಕಿ ಸಲಹಿ ಬದುಕಿಸಿ ಬೆಳೆಸುವದು ಸಂಸ್ಕೃತಿ, ಅದು ನನ್ನದಾಗಲಿಲ್ಲ. ತಾಯಿ ನಿನ್ನದಾಗಲಿಲ್ಲ.

(ದೃಶ್ಯ ಪಲ್ಲಟ)
( ಹಿನ್ನೋಟ-ವಾದ್ಯಸಂಗೀತ )

ಜಿ

(ಗಂಗಾ ತೀರದಲ್ಲಿ ಚೊಚ್ಚಲ ಶಿಶುವೊಂದಿಗೆ ಕುಂತಿ)

**ಕುಂತಿ :** ಹೇ ಗಂಗೆ, ಪಾವನತರಂಗೆ ಈ ನನ್ನ ಕೂಸು ಕನ್ಯಾವಸ್ಥೆಯಲ್ಲಿ ಹುಟ್ಟಿದ್ದು' ನಿನ್ನ ಉಡಿಯಲ್ಲಿ ಬಿಡುತ್ತೇನೆ. ಇದನ್ನು ತೇಲಿಸು ಇಲ್ಲವೆ ಮುಳುಗಿಸು ದೇವಿ, ನನ್ನ ಕೌಮಾರ್ಯವನ್ನು ಕಾಪಾಡು.

(ಮತ್ತೆ ಮೊದಲಿನ ದೃಶ್ಯ-ಉದಯ ವಾದ್ಯ ಸಂಗೀತ)

**ಕುಂತಿ :** ಕಂದಾ, ಆಗ ನಾನು ಹಾಗೆ ಮಾಡಿದ್ದು ಲೋಕಲಜ್ಜೆಗಾಗಿ. ಅಂದು ನಾನು ಕನ್ಯೆ, ನನ್ನ ಹೆಸರು ಕೆಡಬಾರದೆಂದು.

**ಕರ್ಣ :** (ಖಿನ್ನನಾಗಿ) ಅದು ಗೊತ್ತು. ಅಮ್ಮಾ ನಿನ್ನನ್ನು ನಾನು ದೂಷಿಸುವದಿಲ್ಲ. ಅಂದು ನೀನು ತಾಯಿಯಾಗಿ ಕೆಟ್ಟೆ. ನಾನು ನಿನ್ನ ಮಗನಾಗಿ ಕೆಟ್ಟೆ. ಆದರೂ ಧನ್ಯಗೊಳಿಸಿದೆ-ಅಧಿರಥರಾಧೆಯರ ಹೊಟ್ಟೆ.

(ಮತ್ತೆ ಹಿಂದಿನ ದೃಶ್ಯ-ಅದೇ ವಾದ್ಯ ಸಂಗೀತ)

(ಭಾಗೀರಥೀ ತೀರ ಕುದುರೆ-ಬಟ್ಟೆ ತೊಳೆವ ಸೂತ ದಂಪತಿ)

**ಅಧಿರಥ :** ಎಲಾ ಎಲಾ ಎಲಾ ಇಕಾ! ಲೇ ಲೇ ಲೇ.

**ರಾಧಾ :** ಅದೇನ್ರೀ ಕೂಕ್ಕೊಳ್ತೀರಿ? ಕುದುರೆ ಮೈ ತೊಳೆಯೋದು ಬಿಟ್ಟು?

**ಅಧಿರಥ :** ರಾಧೆ, ಲೇ ಅತ್ತ ಆ ಕಡೆ ನೋಡು ನೀರಿನತ್ತ ಅದೇನು ತೇಲ್ತಾ ಮುಳ್ಗತಾ ಬರ್ತಾ ಇದೆ.

**ರಾಧಾ :** ಹೌದಲಾ ಅದೇನೋ ಪೆಟ್ಟಿಗೆ.

**ಅಧಿರಥ :** ಅದನ್ನ ನಾ ನೋಡಿಕೊಳ್ತೀನಿ. ನೀ ಬಟ್ಟೆ ಒಗೆದು ಮುಗಿಸು ನಾ ಕುದುರೆ ಮೈ ತೊಳೆದಾಯ್ತು.

(ಕುದುರೆ ಹೇಕರಿಸುವ ದನಿಗಳು ನಡು ನಡುವೆ)

**ರಾಧಾ :** ಇಕಾ ನೋಡು ಪೆಟ್ಟಿಗೆ ಈ ಕಡೆಗೇ ಬಂತು ಹೊಳೆ ತಂದು ಚಲ್ತು.

**ಅಧಿರಥ :** ಅಬ್ಬ ಪೆಟ್ಟಿಗೆ ಚಂದೈತಿ ಒಳಗೇನಿದ ನೋಡ್ಲಾ?

ರಾಧಾ : ನೋಡಿ, ನೋಡಿ ಚಿನ್ನಗಿನ್ನ ಇರ್ಬೋದು. ಸಿಕ್ಕರೆ ಈ ರಥಾ ಹೊಡೆಯೋ ಚಾಕರಿನಾದ್ರೂ ತಪ್ಪೀತು. ಈ ಕೆಟ್ಟ ಸೊಕ್ಕಿನ ಕೌರವನಲ್ಲಿ.

ಅಧಿರಥ : ಮುಚ್ಚು ಬಾಯಿ, ಮಳ್ಳಹೆಣ್ಣೆ! ಇದು ಬಟಾಬಯಲು ಸುತ್ತೆಲ್ಲ ಕಿವಿ! ಇತ್ತ ಬಾ, ಆ ಪೆಟ್ಟಿಗೆ ಹಿಡಿ.

ರಾಧಾ : ಯವ್ವಾ ಯವ್ವಾ, ಇದೇನು ಇದರಲ್ಲಿ ಒಂದು ಕಂದಮ್ಮ ಬಂಗಾರದಂಥ ಮಗು! ಯಾವ ಪಾಪಿ ತಾಯಿ ಹೀಗೆ ಒಗೆದಿಟ್ಟಳು ನೀರಿಗೆ!

ಅಧಿರಥ : ಇಕಾ ಈ ಬಾಲೆ ಕಿವಿಗೆ ಥಳಾ ಥಳಾ ಹೊಳೆತ್ತೈತಿ ಇದೇನು?

ರಾಧಾ : ಇವು ಕುಂಡ್ಲಾ ಹುಟ್ಟಾ ಕಿವಿಗೆ ಕುಂಡ್ಲಾ.

ಅಧಿರಥ : ಎತ್ಕೋ ಆ ಬಾಲೇನ ಇದೇನು ಫಕ್ಕನೆ ನಾಚಿ ಕೆಂಪಾಗ್ಬಿಟ್ಟೆ.

ರಾಧಾ : ಕಂದಮ್ಮನ ತಕ್ಕೊಂಡೆ ಕುಬ್ಸಾ ಎಲ್ಲಾ ತೋಯ್ದುಹೋಯ್ತು. (ನಾಚಿಕೆ ಧ್ವನಿ)

ಅಧಿ : ಇಶ್ಯಿ ಮಾಡ್ದನಾ?

ರಾಧಾ : (ನಾಚಿ ನಗುತ್ತ) ಹೋಗ್ರೀ ಹಳೇ ಹುಚ್ಚು ಕಣ್ರೀ ನೀವು. ನನ್ನ ಎದೇಲಿ ಹಾಲು ತುಂಬಿ ಬಂತು.

ಅಧಿ : (ಗಹಗಹಿಸಿ ನಗುತ್ತ) ಅಯ್! ಭೇಶ ಆತುಬಿಡು. ಬಂಜೆ ಎದೆಗೆ ಹಾಲು ಅಂದ್ರೇನು. ಈ ಕಂದ ನಿನ್ನ ಮಗ ಅಂತ ಇಟ್ಕೋ.

ರಾಧಾ : ಇಟ್ಕೊಂಡ ಬಿಡ್ಲಾ? ಈಗ ನನ್ನ ಮಗು. ( ಅದು ಅಳುತ್ತದೆ) ಅಯ್ಯೋ ಅಳಬೇಡ ಮರಿ. ಮುತ್ತಿಟ್ಟು ನನ್ನ ಮುದ್ದು ಮರಿ. ಅಲ್ಲಾ ಈ ನನ್ನ ಕಂದನ ಏನೆಂದು ಕರೆಯೋಣ.

ಅಧಿ : ಇನ್ನೇನು ನಮ್ಮಜ್ಜಂದೇ ಹೆಸರು-ವಸುಷೇಣ.

ರಾಧಾ : ವಷ-ವಸಣ್ಣ? (ಅಧಿರಥ ಖೊಳ್ಳನೆ ನಗುತ್ತಾನೆ)

ಅಧಿ : ಹುಚ್ಚೀ ವಸಣ್ಣಲ್ಲ ವಸುಷೇಣ.

ರಾಧಾ : ವರ್ಸೇ ವರ್ಸೇಣ (ಮತ್ತೆ ನಗು) ನಾ ಒಲ್ಲೆ ನಾನಿಡ್ಲಾ ಒಂದು ಮುದ್ದಾದ ಹೆಸರು.

ಅಧಿ : ಆಯ್ತು ಮಾರಾಯ್ತೀ ಇಟ್ಟುಬಿಡು. ಯಾವುದು?

ರಾಧಾ : ಇಕಾ ನೋಡಿ ಹುಟ್ಟಾಕರ್ಣಕುಂಡ್ಲಾ ತೊಟ್ಕೊಂಡೆ ಬಂದಾನೆ. ನನ್ನ ಬಂಟಾ. ಅದಕ್ಕೆ ಇವಂಗೆ ಕರ್ಣ ಎಂದೇ ಕರೆಯೋಣ. (ಮಗು ಅಳುತ್ತದೆ)

ಅಧಿ : ಸರಿ ಹೋಯ್ತು ಕರ್ಣ. ಆದರೆ ಮುಂದೆ ಈತ ಲಂಬ ಕರ್ಣನೊ ಕುಂಭಕರ್ಣನೋ-ಏನಾಗ್ತಾನೋ (ಮಗು ಅಳುತ್ತದೆ)

ರಾಧಾ : ಅದಿರಲಿ. ಈಗ ಮಗುಗೇ ಹಸಿವೆ, ಹಾಲುಣಿಸುತ್ತೇನೆ. ಆಮೇಲೆ ಕುಂಭಕರ್ಣಾ.
(ಇಬ್ಬರೂ ನಗುತ್ತ ತೆರಳುತ್ತಾರೆ)

೬

(ಮತ್ತೆ ಮೊದಲಿನ ದೃಶ್ಯ - ವಾದ್ಯ ಸಂಗೀತ)

ಕರ್ಣ : ದೇವಿ, ಆ ರಾಧ ನನ್ನ ತಾಯಿ ಅವಳ ಹಾಲುಂಡು ನನ್ನ ಈ ವಜ್ರದೇಹ ಬೆಳೆಯಿತು. ನಿನ್ನಿಂದಾಗಿ ನಾನು ಕ್ಷತ್ರಿಯ ಕುಲವನ್ನೂ ಸಂಸ್ಕಾರವನ್ನೂ ಕಳೆದುಕೊಂಡೆ. ಲೋಕದಲ್ಲಿ ಯಾವ ತಾಯಿಯೂ ಹೀಗೆ ಮಾಡಿರಲಿಕ್ಕಿಲ್ಲ, ನಾನು ಸೂತಪುತ್ರನಾಗಿ ಬೆಳೆದು ಸೂತರಲ್ಲಿಯೇ ಮಡದಿ ಮಕ್ಕಳನ್ನು ಪಡೆದೆ.

ಕುಂತಿ : ಈಗಾದರೂ ನನ್ನ ಮಗನಾಗಿ ಒಲಿದು ಬಾ.

ಕರ್ಣ : ಈಗಾದರೂ ನೀನು ಏಕೆ ಬಂದಿ? ನಿನ್ನ ಸ್ವಾರ್ಥಕ್ಕಾಗಿ. ನಿನ್ನವರೆ ಎಂಬ ಮಕ್ಕಳನ್ನು ಉಳಿಸಿಕೊಳ್ಳುವದಕ್ಕಾಗಿ. ಅದಕ್ಕಾಗಿ ಅಷ್ಟಕ್ಕಾಗಿ ನಾನು ನಿಮ್ಮ ಪಕ್ಷಕ್ಕೆ ಬರಬೇಕಾಗಿಲ್ಲ.

ಕುಂತಿ : ನನ್ನದೇನೆ ತಪ್ಪಿರಲಿ, ಯುಧಿಷ್ಠಿರಾದಿಗಳು ನಿನ್ನ ಸೋದರರಲ್ಲವೆ?

ಕರ್ಣ : ಅಲ್ಲವೇ ಅಲ್ಲ. ನನಗೊಬ್ಬನೆ ಸೋದರ, ಆಪ್ತ, ಮಿತ್ರ, ಸರ್ವಸ್ವ. ಆತ ಸುಯೋಧನ. ಲೋಕವೇ ದೂರ ಮಾಡಿದಾಗ ದೂಷಿಸುತ್ತಿರುವಾಗ ಸುಯೋಧನ ನನ್ನನ್ನು ಒಪ್ಪಿಕೊಂಡ; ಅಪ್ಪಿಕೊಂಡ. ಎಂದೆಂದಿಗೂ ತಪ್ಪಿ ನಡೆಯಲಿಲ್ಲ. ನನ್ನ ಬಾಳು, ನನ್ನ ತೋಳು, ನನ್ನ ಬಲವೆಲ್ಲವೂ ಅವನಿಗೆ ಮುಡಿಪು. ಅವನಿಂದ ನಾನು, ಅವನಿಗಾಗಿ ನಾನು, ಅವನಿಲ್ಲದೆ ನಾನಿಲ್ಲ.

**ಕುಂತಿ** : ಅಯ್ಯೋ ಇದೆಂಥ ದುರ್ಬುದ್ಧಿಯೋ?

**ಕರ್ಣ** : (ತೀಕ್ಷ್ಣವಾಗಿ) ಇದನ್ನು ದುರ್ಬುದ್ಧಿ ಎನ್ನಬೇಡ. ಇದು ದುರ್ಬುದ್ಧಿಯಲ್ಲ. ಕರ್ತವ್ಯ ಬುದ್ಧಿ. ಅಮ್ಮಾ ಲೋಕದಲ್ಲಿ ಕೃತಘ್ನನಿಗೆ ಗತಿ ಇಲ್ಲ. ಕೃತಘ್ನನಿಗೆ ಇಹವಿಲ್ಲ ಪರವಿಲ್ಲ. ಅಮ್ಮಾ ನಾನು ಪಾಂಡವರನ್ನು ಬಂದು ಸೇರುವ ಸಮಯ ಎಂದೋ ಕಳೆಯಿತು. ಅದು ದ್ರೌಪದಿಯ ಸ್ವಯಂವರದ ಸಮಯವಾಗಿತ್ತು. ಅದಕ್ಕೂ ಹಿಂದೆ ಧನುರ್ವಿದ್ಯೆಯ ಪರೀಕ್ಷೆಯ ಸಮಯವಾಗಿತ್ತು. ಆಗ ನೀನು ಮಂಕಾಗಿಬಿಟ್ಟೆ. ಇಂದು ನಾವು ಬಲುದೂರ ಬಂದು ಬಿಟ್ಟಿದ್ದೇವೆ. ನಾಳೆ ಯುದ್ಧ ಬಾಗಿಲಲ್ಲಿ ಕಾಯುತ್ತಿದೆ. ಈಗ ನಾನು ಪಾಂಡವರು ನನ್ನ ಸೋದರರೆಂದು, ತಮ್ಮಂದಿರೆಂದು ಬಂದು ಸೇರಿದರೆ ಜೀವಗಳ್ಳನಾಗಿ ಹಾಗೆ ಮಾಡಿದೆನೆಂದು ಆಗುತ್ತದೆ. ನನ್ನ ಸತ್ಯವನ್ನು ಲೋಕ ನಂಬಲಾರದು.

**ಕುಂತಿ** : ಮಗು, ಏನೇ ಆದರೂ ಇದು ನೆತ್ತರದ ನಂಟು

**ಕರ್ಣ** : ಅಮ್ಮಾ ಕ್ಷತ್ರಿಯನಿಗೆ ನೆತ್ತರದ ನಂಟು, ರಣಕಣದಲ್ಲಿ ಇದು ಗಾಳಿಯ ಗಂಟಲಿಗೆ ಗಂಟು. ಪಾಂಡವರು ನನ್ನ ಸ್ವಾಮಿ, ಸಖ, ಸರ್ವಸ್ವನಾದ ಸುಯೋಧನನ ಶತ್ರುಗಳು. ಅವನ ಹಗೆ ನನಗೆ ಹಗೆ. ಅವರ ನಾಶಕ್ಕಾಗಿಯೇ ನಾನು ಬದುಕ್ಕಿದ್ದೇನೆ!

**ಕುಂತಿ** : ಹಾಗಾದರೆ ನನ್ನ ಮಕ್ಕಳು? (ಬಿಕ್ಕಿ ಬಿಕ್ಕಿ ಅಳುವಳು)

**ಕರ್ಣ** : ಅಳಬೇಡ, ತಾಯಿ, ಅಳಬೇಡ. ಎಂದೆಂದೂ ಹಿಂದೆ ಬಾರದಿರುವಳು ಇಂದು ಬಂದಿರುವಿ. ನೀನು ಬಂದ ಕಾರ್ಯ ವ್ಯರ್ಥವಾಗಬಾರದು. ಆದ್ದರಿಂದ ಅಮ್ಮಾ ನಿನಗೆ ವಚನ ಕೊಡುತ್ತೇನೆ. ಇದೇ ವಚನ ನಿನ್ನೆ ಶ್ರೀಕೃಷ್ಣನಿಗೂ ನೀಡಿದ್ದೆ. ನಿನ್ನ ಮಕ್ಕಳನ್ನು ಆ ಧೀರ ವೀರ (ವ್ಯಂಗ್ಯ) ಪಾಂಡವರನ್ನು ನೋಯಿಸುವದಿಲ್ಲ. ನಾಳಿನ ಯುದ್ಧದಲ್ಲಿ ನಿನ್ನವರ ಪ್ರಾಣಭಿಕ್ಷೆ ನೀಡಿದ್ದೇನೆ-ಅವರಿಗೆ ವೀರ ಸ್ವರ್ಗವಿಲ್ಲ-ಆದರೆ

**ಕುಂತಿ** : ಆದರೇನು?

**ಕರ್ಣ** : ಅರ್ಜುನನೊಬ್ಬನನ್ನು ಬಿಟ್ಟು (ಒಮ್ಮೆಲೆ ದನಿ ಏರಿಸಿ) ಆತ ನನ್ನ ಪ್ರಥಮ ಶತ್ರು. ಪರಮಶತ್ರು, ಅವನನ್ನು ಕೊಲ್ಲದೆ ಬಿಡುವದಿಲ್ಲ. ನಿನಗೆ ಅವನೇನು? ನಾನೇನು? ಕೊನೆಗೆ ಪಂಚಪಾಂಡವರೆಂದೇ ಲೋಕಪ್ರಸಿದ್ಧಿ. ನಿನಗೂ ನಿನ್ನ ಐವರು ಮಕ್ಕಳು ಉಳಿಯುವರು. ಆದರೆ, ಅಮ್ಮಾ ಪ್ರಪಂಚದಲ್ಲಿ ಕರ್ಣಾರ್ಜುನರಿಬ್ಬರಿಗೂ ಸ್ಥಾನವಿಲ್ಲ,

ಅರ್ಜುನನನ್ನು ನಾನು ಕೊಲ್ಲುವವನೆ, ಅದೇ ನನ್ನ ಬಾಳಿನ ಗುರಿ, ಬಾಣದ ಗುರಿ.

**ಕುಂತಿ :** ಕಂದಾ, ಇಷ್ಟು ದ್ವೇಷವೇಕೆ?

**ಕರ್ಣ :** ಏಕೋ ನಾನರಿಯೆ. ನಮ್ಮಿಬ್ಬರಲ್ಲಿ ಸ್ಥಿರಬದ್ಧ ಮತ್ಸರ ಕಟ್ಟಿಕೊಂಡು ಬಂದಿದೆ. ಇದು ನಿನಗೂ ಗೊತ್ತು ಅಮ್ಮಾ. ಈ ಒಂದು ಅಂಶದಲ್ಲಿ ನಾನು ನಿರುಪಾಯ; ಅಸಹಾಯ. ಕ್ಷಮಿಸು, ಅರ್ಜುನನಿದ್ದರೇನು? ನಾನಿದ್ದರೇನು? ನಾನು ಅವನಿಗೇನು ಕಡಿಮೆ? ಅಲ್ಲದೆ ನಾನೇ ನಿನ್ನ ಹಿರಿಯ ಮಗ. (ವ್ಯಂಗ ನಗು)

**ಕುಂತಿ :** ನಿನ್ನ ಇಷ್ಟ, ಆದರೂ ನನ್ನದೊಂದು ಮಾತು ಸಲ್ಲಿಸಿಕೊಡು.

**ಕರ್ಣ :** ಇನ್ನೂ, ಇನ್ನೂ ಒಂದು ಮಾತಿದೆಯೆ? ಹೇಳು, ಅಮ್ಮಾ ಸಂಕೋಚಬೇಡ.

(ವಾದ್ಯ ಸಂಗೀತ)

೭

(ನದಿಯಿಂದ ಎದ್ದು ಬಂದು ಭಾಗೀರಥಿ ಕಾಣಿಸಿಕೊಳ್ಳುವಳು)

**ಭಾಗೀರಥಿ :** ಕರ್ಣಾ, ಕರ್ಣಾ, ಅವಳ ಮಾತಿಗೆ ಕಿವಿಗೊಡಬೇಡ. ಅವಿವೇಕಿ ಆಗಬೇಡ.

**ಕರ್ಣ :** ಅದಾರು? ಭಗವತಿದೇವಿ ಭಾಗೀರಥಿ ನಮಸ್ತೆ. ಇದೇನು ಅಕಸ್ಮಾತ್ ಕಂದನ ಕಾಣಲು ಬಂದೆ?

**ಭಾಗೀರಥಿ :** ನಿನ್ನನ್ನು ತೇಲಿಸಿದವಳು ನಾನು, ಈಗಲೂ ಉಳಿಸಲು ಬಂದೆ. ಈ ಕುಂತಿ ನಿನ್ನಿಂದ ಅರ್ಜುನನ ಪ್ರಾಣಭಿಕ್ಷೆಗೆ ಇನ್ನೇನೋ ಬೇಡಲಿದ್ದಾಳೆ. ಈಗಾಗಲೇ ನೀನು ಪಾಂಡವರಿಗೆ ಅಭಯವಿತ್ತೆ. ಆದರೆ ಅವರಿಂದ ನಿನಗೆ ಅಭಯದ ಅಭಿವಚನ ಈ ಮಹಾ ತಾಯಿ ಕೊಡಿಸುವ ಮಾತೇ ಎತ್ತಿಲ್ಲ.

**ಕರ್ಣ :** ಭಗವತಿ, ಅದು ಗೊತ್ತು, ತಾಯಿ. ಆದರೆ ನನ್ನದು ದಯಾದಾನ. ಸಂಧಾನವಲ್ಲ, ಇಲ್ಲಿ ನನಗೆ ಪ್ರತಿಫಲದ ಅಪೇಕ್ಷೆ ಇಲ್ಲ.

ಭಾಗೀರಥಿ : ನೀನೊಬ್ಬ ಹುಚ್ಚ. ನಿನ್ನ ದಾನಶೂರತ್ವಕ್ಕೆ ನೀನೇ ಮರುಳಾಗಿದ್ದೀಯೇ? ಅತಿದಾನದಿಂದ ಬಲಿರಾಜನೇನಾದ ನೆನೆದುಕೊ.

ಕರ್ಣ : ಆದರೆ ನಾನು ಯಾರಿಗೂ ಬಲಿಯಾಗುವವನಲ್ಲ, ನನ್ನ ರಕ್ಷಣೆ ನಾನು ಮಾಡಿಕೊಳ್ಳಬಲ್ಲೆ. ತಾಯೀ, ಆದ್ದರಿಂದ ನಾನು ದಾನದ ದಾರಿಯಲ್ಲಿ ಇಷ್ಟು ಮುಂದೆ ಬಂದೆ. ಈಗ ಇನ್ನೊಂದು ಹೆಜ್ಜೆ ದೊಡ್ಡದಲ್ಲ.

ಭಾಗೀರಥಿ : ತಥಾಸ್ತು, ನೀನಾದರೂ ಏನು ಮಾಡಬಲ್ಲೆ. ನಿನ್ನ ದೈವ ನಿನ್ನ ನಾಲಿಗೆಯಲ್ಲಿ ಆಡುತ್ತದೆ. ನಿನಗೆ ಶುಭವಾಗಲಿ.

(ಅಂತರ್ಧಾನವಾಗುವಳು)

ಕರ್ಣ : ಅಮ್ಮಾ ಕೇಳಿದಿಯಾ ಭಾಗೀರಥಿದೇವಿಯ ಎಚ್ಚರಿಕೆ,

ಕುಂತಿ : ಕೇಳಿದೆ, ನಿನ್ನ ಧೀರ ಪ್ರತ್ಯುತ್ತರವನ್ನೂ ಕೇಳಿದೆ, ನನ್ನ ಮಾತು ಇಷ್ಟೇ, ಅರ್ಜುನನೊಂದಿಗೆ ಹೋರಾಡುವಾಗ ಒಮ್ಮೆ ತೊಟ್ಟ ಬಾಣವನ್ನು ಮತ್ತೆ ತೊಡಬೇಡ.

ಕರ್ಣ : (ನಕ್ಕು) ಅದು ಸಾಧ್ಯವಿಲ್ಲ ತಾಯೀ-

ಕುಂತಿ : (ಗಾಬರಿ) ಅಂದರೆ? ಇದೊಂದು ಮಾತೂ ನಡೆಯಿಸಿ ಕೊಡಲಾರೆಯಾ?

ಕರ್ಣ : ಹಾಗಲ್ಲಾ ಅಮ್ಮಾ ನೀನು ಬೇಡಿದ ಸಂಗತಿ ನನ್ನ ಎಂದಿನ ವ್ರತ. ನಾನು ಒಮ್ಮೆ ತೊಟ್ಟ ಬಾಣ ಮರಳಿ ತೊಟ್ಟವನೇ ಅಲ್ಲ. ನನ್ನದು ಒಂದೇ ಮಾತು, ಒಂದೇ ಬಾಣ.

ಕುಂತಿ : ಸರಿ, ನನ್ನ ಈ ಒಂದು ಆಸೆ ಫಲಿಸಿತು. ಈ ಮೂಲಕವಾದರೂ ನನ್ನ ಅರ್ಜುನ ಬದುಕಲಿ.

ಕರ್ಣ : ಅಂದರೆ ಈ ಕರ್ಣ ಸಾಯಲಿ! ಸರಿ ಇದು ಅನಿವಾರ್ಯ. ಇಬ್ಬರಲ್ಲಿ ಒಬ್ಬ ಸಾಯಲೇಬೇಕು. 'ನನ್ನ ಅರ್ಜುನ'! ನಾನೂ ನಿನ್ನವನೇ ಅಂದಿದ್ದಿಯಲ್ಲ. ಅದು ಇಷ್ಟು ಬೇಗ ಮರೆಯಿತೇ?

ಕುಂತಿ : ಹಾಗಲ್ಲ ಮಗೂ (ಅಳುವಳು)

ಕರ್ಣ : ಅಮ್ಮಾ ಅಳಬೇಡ. ನೀನು ವೀರಮಾತೆ. ನಮ್ಮೀರ್ವರ ಯುದ್ಧದಲ್ಲಿ ಯಾರು ಸತ್ತರೂ ಸರಿಯೆ. ಅರ್ಜುನನ ವಧೆ-ನನ್ನ ಏಕಮೇವ ಉದ್ದೇಶ.

ಅದುವೆ ನನ್ನ ದೊರೆಯ ಆದೇಶ. ದೈವದ ನಿರ್ದೇಶ. ಆಯಿತಲ್ಲ? ಇನ್ನೇನು ನಿನ್ನ ಉಪದೇಶ?

**ಕುಂತಿ :** ಇನ್ನು ನಿನ್ನ ಇಷ್ಟ, ಈಶ್ವರೇಚ್ಛೆಯೇ ಬಲಿಷ್ಠ! ಕುರುಕ್ಷೇತ್ರದಲ್ಲಿ ಕುರುಕುಲಕ್ಕೆ ವಿನಾಶ ಕಟ್ಟಿಟ್ಟಿದೆ. ನೀನು ಈ ಕುಲವನ್ನು ತಬ್ಬಿ ಕೊಂಡಿದ್ದೀಯೇ. ಇದು ಕರ್ಮದ ಸೆರೆ, ಕಾಲನ ಕರೆ. ನಾನಿನ್ನು ಬರುವೆ. ನಿನಗೆ ಕಲ್ಯಾಣವಾಗಲಿ. ಈ ಹತಭಾಗ್ಯ ತಾಯಿಯನ್ನು ಮರೆಯಬೇಡ.

**ಕರ್ಣ :** ಅದು ಹೇಗೆ ಸಾಧ್ಯ? ಹುಟ್ಟಿನ ಹೊಸ್ತಿಲಲ್ಲಿ ತಾಯಿಯನ್ನು ಕಳೆದುಕೊಂಡೆ. ಈಗ ಸಾವಿನ ಹೊಸ್ತಿಲಲ್ಲಿ ತಿರುಗಿ ಕಂಡುಕೊಂಡೆ. ನಿನ್ನ ಪಾದ ಧೂಳಿ ನನ್ನ ಹಣೆಗಿರಲಿ ಅಮ್ಮಾ. ಒಮ್ಮೆ ಬಿಗಿದಪ್ಪಿಕೋ ಅಮ್ಮಾ.

(ಇಬ್ಬರೂ ಬಿಕ್ಕು-ಆಲಿಂಗನ)

**ಕರ್ಣ :** ಅಹಹ ! ಇದು ಸ್ವರ್ಗ ! ಆತ್ಮೋತ್ಸರ್ಗ !

# ವಾಸವದತ್ತಾ

**ಪಾತ್ರಗಳು :**

**ಉಪಗುಪ್ತ (ಬೌದ್ಧ ಗುರು)**

**ಅಶೋಕ ಸಮ್ರಾಟ**

**ಲಕ್ಷ್ಮೀಕಾಂತ (ಧನಿಕಶ್ರೇಷ್ಠಿ)**

**ವಾಸವದತ್ತ (ವೇಶ್ಯೆ)**

**ವಾಸಂತಿ (ಸಖಿ)**

**ಡಂಗುರದವ**

ಸಿಂಹಗರ್ಜನೆ, ನದಿ-ನಾವೆ, ಹೆಜ್ಜೆ-ಗೆಜ್ಜೆ ಸದ್ದುಗಳು

( ಈ ರೂಪಕದಲ್ಲಿ ಇತಿಹಾಸದ ಅಂಶ ಕಡಿಮೆ: ಆಖ್ಯಾಯಿಕೆಯದು ಹೆಚ್ಚು. ಆದರೆ ಎಲ್ಲವೂ ಕಾವ್ಯಸತ್ವ-ಕಲಾಸತ್ವ-ಭಾವತತ್ವ )



**ಡಂಗುರದವ :** (ನಗಾರಿಯ ಅಬ್ಬರದ ನಂತರ) ಕೇಳಿರಿ, ಪೌರರೇ. ಇಂದು ಪಾಟಲೀಪುತ್ರ ನಗರದಲ್ಲಿ ಮಹೋತ್ಸವವನ್ನಾಚರಿಸಬೇಕೆಂದು ಸಮ್ರಾಟ ಅಶೋಕ ಚಕ್ರವರ್ತಿಗಳ ಕಟ್ಟಪ್ಪಣೆ. ಕಲಿಂಗ ವಿಜಯದ ನಂತರ ಆ ಯುದ್ಧದಲ್ಲಿ ನಡೆದ ಹಿಂಸೆ ರಕ್ತಪಾತಗಳಿಗೆ ಹೇಸಿ ಸಮ್ರಾಟ ಅಶೋಕರು ಇನ್ನು ಯುದ್ಧವನ್ನೇ ತ್ಯಜಿಸಿ ಖಡ್ಗವನ್ನು ಮುರಿದೊಗೆದು ಧರ್ಮಸಾಮ್ರಾಜ್ಯ ಸ್ಥಾಪನೆ ಕೈಗೊಂಡಿದ್ದಾರೆ. (ನಗಾರೆ) ಅದರ ಸ್ಮಾರಕವಾಗಿ ಈ ದಿನ ಮನೆ ಮನೆಯಲ್ಲಿ ಹಬ್ಬವಾಗಬೇಕು, ಬೀದಿ ಕೇರಿಗಳಲ್ಲಿ ತೋರಣ ಓರಣಗಳಾಗಬೇಕು. (ನಗಾರೆ)

**ವಾಸವದತ್ತಾ :** ಕೇಳಿದೆಯೇನೇ ವಾಸಂತೀ. ಮನೆ ಮನೆಗೆ ಹಬ್ಬವಂತೆ. ರಾಜನಿಗೆ ಯುದ್ಧ ಬೇಡವಾದರೆ ಅವನ ಶತ್ರುಗಳು ಹಬ್ಬ ಮಾಡಲಿ. ನಮಗೇಕೆ ಈ ಉತ್ಸವ-ಸಂಭ್ರಮ?

**ವಾಸಂತಿ :** ಹಾಗಲ್ಲ ದೇವಿ ವಾಸವದತ್ತಾ. ಇದು ಬರೆ ಯುದ್ಧ ಮುಗಿತಾಯವಲ್ಲ. ಅಶೋಕ ಚಕ್ರವರ್ತಿಗೆ ಪುನರ್ಜನ್ಮ

**ವಾಸವದತ್ತಾ :** ಪುನರ್ಜನ್ಮ ? ಅಂದರೆ, ಅವರು ಸಾಯುವ ಮೊದಲೇ?

**ವಾಸಂತಿ :** ಹೂಂ, ಅವರೀಗ ಬೌದ್ಧಧರ್ಮವನ್ನು ಸ್ವೀಕರಿಸುವರಂತೆ ಹಿಂಸೆಗೆ ಹೇಸಿ.

**ವಾಸವದತ್ತಾ :** ಯಾರಿಂದ ಈ ಧರ್ಮದೀಕ್ಷೆ?

(ಕೆಳಗೆ ದೂರದಿಂದ ಸಮೀಪಿಸುವ ಮಧುರ ಗಂಭೀರ ಧ್ವನಿ-'ಓಂ ಮಣಿಪದ್ಮೇ ಓಂsss ನಮೋ ಬುದ್ಧಾಯ ನಮೋ ಬುದ್ಧಾಯ')

**ವಾಸಂತಿ :** ಅಕೋ ಕೇಳಿದಿರಾ, ಅವರೇ, ಅವರೇ ಸಮ್ರಾಟರಿಗೆ ಹೊಸ ಧರ್ಮದ ದೀಕ್ಷೆ ಕೊಡುವರಂತೆ.

**ವಾಸವದತ್ತಾ :** ಯಾರವರು? ಬಾ, ಗವಾಕ್ಷದಿಂದ ನೋಡೋಣ, ಓ ಎಂಥ ರೂಪ! ಎಂಥ ಚರ್ಯೆ! ಎಂಥ ನಿಲುವು! (ಮೆಲು ದನಿಯಲ್ಲಿ ಕಂಪನ) ಇವರಾರೇ ?

**ವಾಸಂತಿ :** ಇವರು ಗೊತ್ತಿಲ್ಲವೇ? ಭಿಕ್ಷು ಉಪಗುಪ್ತರು. ಗುರು ಅಮಿತಾಭರ ಶಿಷ್ಯರು.

(ಗವಾಕ್ಷದ ಕೆಳಗೇ ಸ್ಪಷ್ಟ ದನಿ)

**ಉಪಗುಪ್ತ :** ಓಂ ಮಣೀಪದ್ಮೇ, ಓಂ ನಮೋ ಬುದ್ಧಾಯ.

**ವಾಸವದತ್ತಾ :** ಹೋಗೆ ವಾಸಂತಿ, ಕೆಳಗೆ ಹೋಗಿ ಅವರನ್ನು ಇಲ್ಲಿಗೆ ಕರೆದು ತಾ. ನಾವು ಸತ್ಕರಿಸೋಣ. ಹೂಂ ಹೋಗು. (ವೇಗದ ಉಸಿರಾಟ)

**ವಾಸಂತಿ :** ಸರಿ, ಗೊತ್ತಾಯಿತು. (ನಗುತ್ತ ಕೆಳಗಿಳಿದು ಹೋಗುವಳು.)

**ವಾಸವದತ್ತಾ :** ಓ ಇದೆಂಥ ತೇಜಸ್ಸು. ಎಂಥ ಮಾಧುರ್ಯ, ಏನು ಓಜಸ್ಸು, ಏನು ಗಾಂಭೀರ್ಯ! (ಕೆಳಗಿನಿಂದ) - "ಭವತಿ ಭಿಕ್ಷಾಂ ದೇಹಿ" ದನಿಯೋ ವೀಣೆಯಂತೆ-ಅಲ್ಲ, ಅಲ್ಲ ಶಂಖನಾದದಂತೆ. ಇದೇನು ಅವಸ್ಥೆ ನನ್ನದು? ಅಬ್ಬ, ಅವರ ದನಿಗೆ ಮೈಯೆಲ್ಲಾ ಜುಮ್ಮೆಂದಿತು. ರೋಮ ರೋಮ ಕೆರಳಿದೆ. ಆಂs ಆಂs ಹೇಗೆ ಕುಪ್ಪಸ ಬಿಗಿಯಾಗಿದೆ. ಜಡೆ ಸಡಿಲಾಯಿತು. ಅದೋ ಮುಡಿ ಹೂವೆಲ್ಲ ಚೆಲ್ಲಿ ಉದುರಿತು. ಓ, ಹೂ ಉರುಳಿ ಇಳಿದು ಅವರ ಪಾದಕ್ಕೆ ಬಿದ್ದವು! ಅಯ್ಯೋ! ಇದೇನು, ಅವರ ಭಿಕ್ಷಾಪಾತ್ರೆಯಲ್ಲಿ ಬಿದ್ದವು ! ಅವರು ತಲೆ ಎತ್ತಿ ನೋಡಿಯೇ ಬಿಟ್ಟರು ನನ್ನ. ಎಂಥ ಕಣ್ಣು, ವಜ್ರ ಮಿಂಚಿದಂತೆ ಆs ಹಾs ವಾಸಂತೀ.... ಎಲ್ಲಿ ಸತ್ತೀಯೇ ?

**ವಾಸಂತಿ :** (ಕೆಳಗಿನಿಂದ) ದೇವೀ ಬಂದೆ. (ವಾಸಂತಿ ಏರಿ ಬರುವ ಸದ್ದು ತುಸು ಕರ್ಕಶ ನೇವುರಗಳಿಂದ)

**ವಾಸವದತ್ತಾ :** ಏನೇ? ಅವರೆಲ್ಲಿ?

**ವಾಸಂತಿ :** ಅವರಲ್ಲಿ ಕೆಳಗೆ ಬಾಗಿಲಲ್ಲಿ. ಅವರಿಗೆ ಭಿಕ್ಷೆ ಮಾತ್ರ ಬೇಕಂತೆ. ಅಕಾ.

**ಉಪಗುಪ್ತ :** ಭವತಿ ಭಿಕ್ಷಾಂ ದೇಹಿ,

**ವಾಸವದತ್ತಾ :** ನಾನೇ ಹೋಗಿ ಕರೆದು ತರುತ್ತೇನೆ. ನೋಡು! (ಓಡುತ್ತ ಕೆಳಗಿಳಿದು ಹೋಗುವ ಹೆಜ್ಜೆ ಗೆಜ್ಜೆಗಳ ಸದ್ದು) ಓ ಭಿಕ್ಷು ತಮ್ಮ ಭಿಕ್ಷಾ ಪಾತ್ರೆ ಮುಂದೆ ಮಾಡಿ.

**ಉಪಗುಪ್ತ :** ಆದರೆ ದೇವಿ ನಿಮ್ಮ ಎರಡುಕೈಗಳು ಬರಿದು, ಇವೇನು ಕೊಡಬಲ್ಲವು?

**ವಾಸವದತ್ತಾ :** ಈ ಮುಡಿ ಹೂ ಕೊಡಬಲ್ಲವು, ಕೊಳ್ಳಿ.

**ಉಪಗುಪ್ತ :** ಮುಡಿ ಹೂ? ಈ ಭಿಕ್ಷುಗೇಕೆ ಹೂವು?

ವಾಸವದತ್ತಾ : (ನಕ್ಕು) ಇದು ಪ್ರಸಾದ ಕೊಳ್ಳಿ

ಉಪಗುಪ್ತ : ಪ್ರಸಾದ? ಯಾರದು?

ವಾಸವದತ್ತಾ : ಸೌಂದರ್ಯದೇವತೆಯದು. ಇಕೋ ಇವಳು ನಿಮ್ಮಲ್ಲಿ ಒಲಿದು ಬಂದಿದ್ದಾಳೆ. ನಖಶಿಖಾಂತ ಮೋಹದಲ್ಲಿ ಮೋಹರಿಸಿ ನಿಂತಿದ್ದಾಳೆ.

ಉಪಗುಪ್ತ : ಈ ಉಪಗುಪ್ತನಿಗೇನು ಉಪಯೋಗ ಈ ಬರಿಗೈ ಪ್ರಸಾದ? ನಾನೊಬ್ಬ ಬಡ ಸನ್ಯಾಸಿ, ಹಸಿದಿದ್ದೇನೆ. ಹಿಡಿ ಅನ್ನ ಹಾಕಿ.

ವಾಸವದತ್ತಾ : ಅನ್ನ! ನನ್ನಲಿಗೆ ಬಂದು ಬರೇ ಅನ್ನ ಬೇಡುವದೆ? ಅನ್ನ ಕೊಡಲು ಇದೇನು ಅನ್ನಸತ್ರವೇ? ಓ ಭಾಗ್ಯವಂತ ಭಿಕ್ಷು ಈ ಕೈ ಬರಿದಲ್ಲ.

ಉಪಗುಪ್ತ : ಸರಿ ಗೊತ್ತು. ಇವು ರತ್ನಾಭರಣಗಳಿಂದ ತುಂಬಿವೆ. ಆದರೆ ಭಿಕ್ಷುಕನಿಗೆ ಈ ಆಭರಣಗಳೇಕೆ?

ವಾಸವದತ್ತಾ : ಅಲ್ಲ ಭಗವಾನ, ಈ ಕೈಗಳು ಅನ್ನಕ್ಕಿಂತಲೂ ಹೆಚ್ಚಿನದನ್ನು ರನ್ನಕ್ಕಿಂತಲೂ ಮಿಗಿಲಾದ್ದನ್ನು ಕೊಡಬಲ್ಲವು-ಕೊಡಬಂದಿವೆ. ಈ ಬೊಗಸೆಯಲ್ಲಿ ನನ್ನ ಯೌವನವಿದೆ. ಸೌಂದರ್ಯವಿದೆ, ನನ್ನ ಹೃದಯವಿದೆ, ಜೀವನ ಸರ್ವಸ್ವವೇ ಇದೆ. ಹೂಂ ಸುಮ್ಮನೆ ನಿಂತಿರುವಿರೇಕೆ? ಮುಂದೆ ಮಾಡಿ ಭಿಕ್ಷಾಪಾತ್ರೆ!

ಉಪಗುಪ್ತ : (ದಿಗ್ಭ್ರಾಂತ) ಅಂ...ದ...ರೆ?

ವಾಸವದತ್ತಾ : ಅಂದರೇನು? ಅಯ್ಯೋ ಮುಗ್ಧ ಭಿಕ್ಷು! ನನ್ನನ್ನೇ ತಮಗೆ ಒಪ್ಪಿಸಿಕೊಳ್ಳುತ್ತಿದ್ದೇನೆ. ಪರಿಗ್ರಹಿಸಿರಿ, ಅನುಗ್ರಹಿಸಿರಿ.

ಉಪಗುಪ್ತ : (ನಕ್ಕು ನಿರ್ವಿಕಾರವಾಗಿ) ನಿಮ್ಮನ್ನು ಪಡೆದು ನಾನು ಏನು ಮಾಡಲಿ ದೇವಿ? ನಿಮ್ಮ ಸೌಂದರ್ಯ ಐಶ್ವರ್ಯ ಎಲ್ಲ ಈ ನಗರದ ಶ್ರೀಮಂತರಿಗೆ, ಸಮ್ರಾಟ ಅಶೋಕನಿಗೆ ಯೋಗ್ಯ, ಭೋಗ್ಯ! ನಮ್ಮಂಥ ಭಿಕ್ಷುಕರಿಗೇಕೆ ಈ ಭಾಗ್ಯ? ಈ ಪಾತ್ರೆಗೆ ಭಿಕ್ಷೆನೀಡಿ ಅಮ್ಮಾ

ವಾಸವದತ್ತಾ : ನಿಮ್ಮ ಭಿಕ್ಷೆಗೆ ನಾನು ಪಾತ್ರ. ನನ್ನನ್ನೇ ಅಮ್ಮಾ ಅನಿಸಿಕೊಳ್ಳುವಂತೆ ಮಾಡಿ.

ಉಪಗುಪ್ತ : ನಮೋ ಬುದ್ಧಾಯ. (ಅಸಹ್ಯಪಟ್ಟು)

ವಾಸವದತ್ತಾ : ಅಯ್ಯೋ ಮಂಕೇ. ನಾನು ನಿಮ್ಮವಳಾಗಿ ಬಂದಿದ್ದೇನೆ. ಸರ್ವಸ್ವದೊಂದಿಗೆ, ಸರ್ವಸ್ವ ಬಿಟ್ಟು ನಿಮ್ಮ ಕೈ ಹಿಡಿಯಲು ಕಾಲು

ಹಿಡಿಯಲು ಬಂದಿದ್ದೇನೆ. ಉಪಗುಪ್ತ ನಿಮ್ಮ ಈ ಅಂಗಾಂಗದ
ಕೌಮಾರ್ಯ. ಅನಂಗನ ಸೌಕುಮಾರ್ಯ ಈ ಭಿಕ್ಷುವೃತ್ತಿಗೆ,
ಭಿಕ್ಷಾಪಾತ್ರೆಗೆ ಅಲ್ಲ. ನೀವು ಬರುವದು ನನ್ನಂಥವಳಿಗೆ ಪ್ರೇಮ ಭಿಕ್ಷೆ
ನೀಡಲಿಕ್ಕೆ!

ಉಪಗುಪ್ತ : (ಗಾಬರಿ) ಎಂಥ ಮಾತು! ನಮೋ ಬುದ್ಧಾಯ! ಅಂಥದೇನಿದೆ ನನ್ನಲ್ಲಿ?

ವಾಸವದತ್ತಾ : ಅಯ್ಯೋ ಅಪ್ರಬುದ್ಧರೇ, ನಿಮ್ಮಲ್ಲಿ ಏನಿದೆ? ನಿಮ್ಮನ್ನೇ ನೀವು
ನೋಡಿಕೊಳ್ಳಿ.

ಉಪಗುಪ್ತ : ತಥಾಸ್ತು. ದೇವಿ ನಮ್ಮ ತಥಾಗತನೂ ಇದನ್ನೇ ಹೇಳಿದ್ದು- ನಿಮ್ಮನ್ನೇ
ನೀವು ನೋಡಿಕೊಳ್ಳಿ ಬೋಧಿಸತ್ವರದು ಅದೇ ಸಂದೇಶ, ನನ್ನ ಗುರು
ಅಮಿತಾಭರದೂ ಅದೇ ಆದೇಶ ದೇವಿ. ನಿನ್ನದೂ ಅದೇ ಉಪದೇಶ.
ಧನ್ಯ ತಾಯಿ. " ಆತ್ಮಾನಂ ವಿದ್ಧಿ!"

ವಾಸವದತ್ತಾ : ಇದೇನು ಅನ್ನುತ್ತಿದ್ದೀರಿ. ನನ್ನ ಮಾತೇ ನಿಮ್ಮ ಗುರುಗಳು ಹೇಳಿದ್ದೇ,
ಸರಿ ಹೋಯಿತು ಬಿಡಿ. (ಖಿನ್ನ ನಿಟ್ಟುಸಿರು)

ಉಪಗುಪ್ತ : ಅಹುದು ಸುಂದರಿ, ನನ್ನಲ್ಲಿ ಏನಿದೆ ಎಂಬುದನ್ನು ನೋಡಿ
ಕೊಳ್ಳುತ್ತಿದ್ದೇನೆ. ಅದೇ ಹಟ, ಅದೇ ಹಾದಿ ಹಿಡಿದಿದ್ದೇನೆ.

ವಾಸವದತ್ತಾ : ಹಾಗಾದರೆ ನನ್ನ ಬೇಡಿಕೆ.

ಉಪಗುಪ್ತ : ಅದಕ್ಕ ಇನ್ನೂ ತಡವಿದೆ, ಅದು ನನ್ನಲ್ಲಿ, ನನ್ನನ್ನು ನಾನು ನೋಡಿಕೊಂಡ
ಮೇಲೆ, ನಾನಿನ್ನು ಬರುವೆ.

ವಾಸವದತ್ತಾ : (ಕಳವಳ) ಅಯ್ಯೋ ದೇವರೇ, ನನ್ನನ್ನು ಧಿಃಕ್ಕರಿಸಿ ಹೋಗುವಿರಾ?

ಉಪಗುಪ್ತ : ಛೇ, ಛೇ ಧಿಃಕರಿಸುವವರು ನಾವಲ್ಲ. ಬೋಧಿಸತ್ವನ ತತ್ವದವರು
ನಾವು. ಬಂದುದೆಲ್ಲ ಸ್ವೀಕರಿಸುವವರು. ಆದರೆ ಅದಕ್ಕೂ ಕಾಲ ಕೂಡಿ
ಬರಬೇಕು.

ವಾಸವದತ್ತಾ : ಹಾಗಾದರೆ ಸ್ವಾಮಿ, ಇನ್ನೆಂದು ತಮ್ಮ ಭೆಟ್ಟಿ?

ಉಪಗುಪ್ತ : ಸಮಯ ನಿರೀಕ್ಷಿಸು ದೇವಿ. ಕೂಡಿ ಬಂದಾಗ ಬಂದು ಕೂಡುವೆನು.

ವಾಸವದತ್ತಾ : ಹಾಗಿದ್ದರೆ ಆಶೀರ್ವದಿಸಿರಿ. ವಾಸಂತೀ, ಭಿಕ್ಷುವಿನ ಪಾತ್ರೆ ತುಂಬ
ಧಾನ್ಯ ನೀಡು.

ವಾಸಂತಿ: ಆಗಲಿ. (ಬಂದು ನೀಡಿಹೋದ ಸದ್ದು-ಹೆಜ್ಜೆ ಗೆಜ್ಜೆ ಇತ್ಯಾದಿ)

ಉಪಗುಪ್ತ : ಶುಭಮಸ್ತು, ಓಂ ಮಣೀ ಪದ್ಮೇ, ಓಂ ನಮೋ ಬುದ್ಧಾಯ, (ಶಬ್ದಗಳ ಸದ್ದೂ ಆವಿಗೆಗಳ ಸದ್ದೂ ದೂರ ಹೋಗುವವು. ವಾದ್ಯ ಸಂಗೀತ)

೨

ಉಪಗುಪ್ತ : ಅರೇ ಹೊತ್ತು ಮೀರಿತು. ಕತ್ತಲು ಕವಿಯಿತು. ಈ ಕಟ್ಟಡವಿ ಕಳೆಯುವದು ಎಂತೋ? ಭಿಕ್ಷೆಗಾಗಿ ಈ ದಿನ ಸುತ್ತಾಡಿದ್ದೂ ತುಂಬ ಸುಸ್ತಾಯಿತು. ಸುಸ್ತಾಯಿತು.ಅಬ್ಬ, ಲಗುಬಗೆಯಿಂದ ಇನ್ನೂ ಸಂಘಾರಾಮನನ್ನು ಸೇರಬೇಕು. (ಸಿಂಹ ಗರ್ಜನೆ ಸಮೀಪಿಸುವದು.) ಇದೇನು ಬಂತು ಸಂಕಟ? ಅದೋ ಸಿಂಹ. ಮರದಡಿಗೆ ಎದ್ದು ಕೂತಿದೆ. (ಗರ್ಜನೆ ತೀವ್ರ) ಅಕೋ ನಮ್ಮನ್ನು ನೋಡಿಯೇ ಬಿಟ್ಟಿತು. (ಗರ್ಜನೆ ಇನ್ನೂ ಹತ್ತಿರ) ಎಲೆ ಮೃಗರಾಜನೆ ನಮಸ್ತೆ. ನನಗೆ ಹಾದಿ ಬಿಡು. (ಇನ್ನೂ ದೊಡ್ಡ ಗರ್ಜನೆ) ಏನು ಹಸಿದಿರುವೆಯಾ? ನಿನ್ನ ಹೊಟ್ಟೆಗೆ ನನ್ನ ದೇಹ ಬೇಕೇ? ಏನಿದೆ ಅಂತ ಈ ದೇಹದಲ್ಲಿ? ಈ ಬಡಭಿಕ್ಷುವಿನಿಂದ ನಿನ್ನ ಹೊಟ್ಟೆ ಎಷ್ಟು ತುಂಬೀತು? ಪಾಪ, ತುಂಬ ಹಸಿದಿರುವಿ. (ಇನ್ನೂ ಗರ್ಜನೆ, ಮಂದ್ರ ತೀವ್ರವಾಗಿ ತೀರ ಹತ್ತಿರ) ಇಕೋ, ನಾನು ಸಿದ್ಧ ನನ್ನನ್ನು ಕೊಂದು ಬಿಡು. ಬೇರೆ ಬಡಪ್ರಾಣಿಗಳು ಉಳಿಯಲಿ. (ಸಿಂಹ ಗರ್ಜನೆಯೊಂದಿಗೆ ಉಪಗುಪ್ತನ ಮೇಲೆ ಹಾರುತ್ತಿರುವಾಗ ಮರೆಯಿಂದ ಅದಕ್ಕೆ ಬಾಣ ಪ್ರಯೋಗ.)

ಮರೆಯಿಂದ: ಸ್ವಾಮಿ ಆಚೆ ಸರಿಯಿರಿ. (ಬಾಣಕ್ಕೆ ಸಿಂಹ ಬೀಳುವ ಸದ್ದು. ಅದರ ಭೀಮಗರ್ಜನೆಗೆ ಅಡವಿಯ ಹಕ್ಕಿಪಕ್ಕಿಗಳೆಲ್ಲ ಚಿಲಿಪಿಲಿ ಕೂಗಾಡಿ ಹಾರಿ ಹೋಗುವವು.)

ಉಪಗುಪ್ತ : ಅಯ್ಯೋ ಯಾರದು? ಬಡಸಿಂಹವನ್ನು ಹೊಡೆದುಕೆಡುಹಿದರು?

ಅಶೋಕ : ನಾನು ಭಿಕ್ಷುವರ್ಯರೇ- ಅಶೋಕ ಸಮ್ರಾಟ, ಸಿಂಹ ತಮ್ಮನ್ನ ಕೊಲ್ಲುತ್ತಿತ್ತು. ತಮ್ಮ ಪ್ರಾಣ ಉಳಿಸಿದೆ. ಅಭಿವಂದಿಸುತ್ತೇನೆ.

ಉಪಗುಪ್ತ : ಅಶೋಕ ರಾಜನೇ, ಇದೇನು ಮಾಡಿದಿ? ಶೋಕದ ಕೆಲಸ? ಅನ್ಯಾಯವಾಗಿ ಸಿಂಹವನ್ನು ಹಿಂಸಿಸಿದಿರಿ. ನೋಡಿ ಹೇಗೆ ವಿಲಿವಿಲಿ ಒದ್ದಾಡುತ್ತಿದೆ. ತಾಳು ವನರಾಜಾ, ತಾಳು, ಎಲ್ಲಿ ನಟ್ಟಿದೆ-ಬಾಣ?

ಹಾಂ ಇಲ್ಲಿ ತಡೆ, ಹಾಃ. (ಸಿಂಹದ ಎದೆಯ ಬಾಣ ಕೀಳಲು ಯತ್ನಿಸುತ್ತಾನೆ)

**ಅಶೋಕ** : ಧನ್ಯ, ಉಪಗುಪ್ತರೇ ಧನ್ಯ. ತಮ್ಮನ್ನು ಕೊಲ್ಲಲು ಬಂದ ಹಿಂಸ್ರ ಪಶುವಿನ ಪ್ರಾಣ ಉಳಿಸಲು ಹೋಗುತ್ತಿರುವಿರಿ. ಅದರ ಎದೆಯ ಬಾಣ ಕಿತ್ತಿರಿ.

**ಉಪಗುಪ್ತ** : ಹಿಂಸ್ರಪಶು? (ನಕ್ಕು) ಪಾಪ, ಅದು ಹೇಳಿಕೇಳಿ ಪಶು, ಬುದ್ಧಿಗೇಡಿ. ಹಸಿವೆ ಹಿಂಗಿಸಲು ಹೊಡೆದು ಕೊಲ್ಲುತ್ತದೆ ಆದರೆ ಬುದ್ಧಿಬಲ್ಲ ಮನುಷ್ಯ? ಪಶುವಿಗಿಂತ ಕಡೆ.

**ಅಶೋಕ** : ಅಂದರೇನು ಸ್ವಾಮೀ?

**ಉಪಗುಪ್ತ** : ಸಿಂಹ ಸಿಂಹವನ್ನು ಕೊಲ್ಲುವುದಿಲ್ಲ. ಆದರೆ ಮನುಷ್ಯ ಮನುಷ್ಯರನ್ನು ಯಾವ ಹೇಸಿಗೆ-ನಾಚಿಕೆ ಇಲ್ಲದೆ ಕೊಲ್ಲುತ್ತಿರುತ್ತಾನೆ.

**ಅಶೋಕ** : ಕ್ಷಮಿಸಿ ಸ್ವಾಮಿ, ತಪ್ಪಾಯಿತು, ತಮ್ಮ ಮಾತು ಮರ್ಮಕ್ಕೆ ನಾಟಿತು, ಈ ಬಾಣ ಸಿಂಹದ ಎದೆ ಸೇರಿದಂತೆ. ಮೊನ್ನೆ ತಾನೇ ಕಳಿಂಗ ಯುದ್ಧ ಭೀಭತ್ಸ ಹಿಂಸೆಯ ಹತ್ಯಾಕಾಂಡದ ಪರಿಣಾಮಗಳಿಗೆ ತಾವು ನನ್ನ ಕಣ್ಣು ತೆರೆಸಿದ್ದೀರಿ. ಯುದ್ಧದ ಭೂಮಿಯಲ್ಲಿ ನನ್ನನ್ನು ಈ ನಡುರಾತ್ರಿ ಸುತ್ತಾಡಿಸಿ ಅಂದು ಆ ನೋವುನರಳಿಕೆಗಳ ನರಕ ಲೋಕವನ್ನೇ ನನಗೆ ಕಾಣಿಸಿ ಕಂಗೆಡುವಂತೆ ಮಾಡಿದಿರಿ.

**ಉಪಗುಪ್ತ** : ಆದರೆ ನೀನು ಇಂದು ಮತ್ತೆ ಹಿಂಸೆಗೆ ಅಣಿಯಾದಿ.

**ಅಶೋಕ** : ಇದು ಅಂಥ ಹಿಂಸೆಯಲ್ಲ, ಸ್ವಾಮಿ. ತಮ್ಮ ಪ್ರಾಣರಕ್ಷಣೆಗಾಗಿ ಹಿಂಸ್ರಸಿಂಹಕ್ಕೆ ತಕ್ಕ ದಂಡನೆ.

**ಉಪಗುಪ್ತ** : ಸಿಂಹಕ್ಕೆ ಹಿಂಸೆಯೇ ಧರ್ಮ. ಆದರೆ ಮನುಷ್ಯನಿಗೆ ಅಹಿಂಸೆಯೇ ಪರಮ ಧರ್ಮ. ದಯೆಗಿಂತಲೂ ಮಿಗಿಲಾಗಿ ದಂಡನೆ ಬೇರೆ ಇಲ್ಲ.

**ಅಶೋಕ** : ಕ್ಷಮಿಸಿ ಸ್ವಾಮಿ, ತಮ್ಮ ಉಪದೇಶ ನನಗೆ ಎಂದೆಂದೂ ಶಿರೋಧಾರ್ಯ, ಹೇ ಭಿಕ್ಷುವರ್ಯ. ಇಂದಿನಿಂದ ತಾವೇ ನನಗೆ, ನನ್ನ ರಾಜ ಕುಲಕ್ಕೆ ರಾಜ್ಯಕ್ಕೆ ಗುರು-ದೀಕ್ಷಾಚಾರ್ಯ. ಇಂದು ನಾನು ಎಲ್ಲರನ್ನೂ ಪ್ರಿಯವಾಗಿ ಕಾಣುವ ದೃಷ್ಟಿ ಪಡೆದೆನು.

**ಉಪಗುಪ್ತ** : ಧನ್ಯ, ಧನ್ಯ, ನೀನು ಇಂದಿನಿಂದ ಪ್ರಿಯದರ್ಶಿ. ದೇವತೆಗಳಿಗೂ ಪ್ರಿಯನಾಗುವಿ. ದೇವನಾಂಪ್ರಿಯ: ಪ್ರಿಯದರ್ಶಿ, ಧರ್ಮಸಾಮ್ರಾಜ್ಯ ಚಕ್ರವರ್ತಿ।

ಅಶೋಕ : ಧನ್ಯೋಽಸ್ಮಿ ಧನ್ಯೋಽಸ್ಮಿ ಸ್ವಾಮಿ ತಮಗೆ ನಾನು ಶರಣಾರ್ತಿ.

(ವಾದ್ಯ ಸಂಗೀತ)

೩

(ಹೊಳೆಯ ತಡಿಯಲ್ಲಿ ಉಪಗುಪ್ತ ಸಿಂಹವನ್ನು ಉಪಚರಿಸುತ್ತಿದ್ದಾನೆ)

ಉಪಗುಪ್ತ : ಮರಿ, ಮರಿ, ಮರುಗಬೇಡ. ಮರಿ ನಿನ್ನ ಗಾಯಕ್ಕೆ ಮದ್ದು ಮಾಡುತ್ತೇನೆ. ಛೇ ಹಾಗೆ ಕೂಗಬೇಡ, ಇದು ಹೊಳೆಯ ದಂಡೆ. ಆಚೆ ಈಚೆ ದನ ನೀರಿಗೆ ಬಂದಿವೆ. ನಿನ್ನ ಕೂಗಿಗೆ ಹೆದರಿ ಹೌಹಾರುವವರು. ಸುಮ್ಮನಿರು. ಒಳ್ಳೇಮರಿ. (ನಗು ಮತ್ತು ಸಂಗೀತ ಈ ನೀರಿಗುಂಟ ಹರಿದು ಬರುತ್ತದೆ) ಓ ಇದು ವಾಸವದತ್ತೆಯ ದನಿ. ಅವಳ ನೌಕೆ ಇಲ್ಲಿಗೇ ಬಂತಲ್ಲ!

ವಾಸವದತ್ತಾ : ಹಾಂ ಹಾಂ ಅದೇ ನಾನು. ಅದೇ ತಾವು ! ಆದರೆ ಇಲ್ಲಿ ಹೇಗೆ? ಅಯ್ಯಯ್ಯೋ ಇದೇನು? ಸಿಂಹ ಹಿಡಿದು ತಂದಿರಿ! ಸಿಂಹಕ್ಕೆ ಚಿಕಿತ್ಸೆ!

ಉಪಗುಪ್ತ : (ನಗುತ್ತ) ಸಿಂಹದ ಎದೆಗೆ ಗಾಯವಾಗಿದೆ. ಅದಕ್ಕೆ ಮದ್ದು

ವಾಸವದತ್ತಾ : ಯಾರ ಎದೆಗೂ ಮದ್ದು ಮಾಡುವ ಮಂತ್ರ ನಿಮ್ಮ ಕೈಗುಣ ಸ್ವಾಮಿ. ಅದೃಷ್ಟವಂತ ಈ ಸಿಂಹ, ಈ ಸಿಂಹದ ಕತೆ ನಮಗೆಲ್ಲ ಗೊತ್ತು. ತಮ್ಮದು ಸಿಂಹದ ಎದೆ. ಈ ಸಿಂಹದ ಹೊಟ್ಟೆ ತುಂಬಲು ಹೊರಟಿರಿ. ಆದರೆ ಉಪಗುಪ್ತ, ಈ ಬಡಸಿಂಹ ಕಟಿಗೆ ಈ ಕೈ ಕೊಡಲಾರಿರಾ?

ಉಪಗುಪ್ತ : (ನಕ್ಕು) ನಮೋ ಬುದ್ಧಾಯ.

ವಾಸವದತ್ತಾ : (ಅಣಕಿಸಿ) ನಮೋ ಅಪ್ರಬುದ್ಧಾಯ, ಸಾಕುಬಿಡಿ ಸಿಂಹದೊಡನೆ ಸಲಿಗೆ. ಬನ್ನಿ ಈ ನನ್ನ ನಾವೆಗೆ. ಇಂದಾದರೂ ಕೂಡಿ ಬನ್ನಿ.

ಉಪಗುಪ್ತ : ಕ್ಷಮಿಸಿ ದೇವಿ. ಇನ್ನೂ ಕೂಡಿ ಬಂದಿಲ್ಲ ಕಾಲ, ಕಾಯಬೇಕು.

ವಾಸವದತ್ತಾ : (ಖಿನ್ನ) ಇನ್ನೆಷ್ಟು ಜನ್ಮ ಕಾಯಲಿ?

ಉಪಗುಪ್ತ : (ನಕ್ಕು) ಇದೇ ಜನ್ಮ !

ವಾಸವದತ್ತಾ : ಆದರೆ ಎಷ್ಟು ಕಾಲ

ಉಪಗುಪ್ತ : ಸಕಾಲಕ್ಕೆ ಬರುವೆ, ಸಹನೆ ತಾಳು, ಸುಂದರಿ.

**ವಾಸವದತ್ತಾ :** ಸೌಂದರ್ಯಕ್ಕೆ ಸಹನೆ ಕಡಿಮೆ ಸ್ವಾಮಿ. ಈ ಸಿಂಹದ ಎದೆಯ ಬಾಣ ಕಿತ್ತ ಕರುಣಾಳು ನೀವು. ನನ್ನ ಮರ್ಮಕ್ಕೆ ಬಾಣ ನಾಟಿದೆ. ಅದರ ನೋವು ತಣಿಸಿ ಬನ್ನಿ.

**ಉಪಗುಪ್ತ :** ಎಂದು?

**ವಾಸವದತ್ತಾ :** ಇದೇ ಕ್ಷಣ.

**ಉಪಗುಪ್ತ :** ಸಾಧ್ಯವಿಲ್ಲ.

**ವಾಸವದತ್ತಾ :** ಇದೇ ತಿಂಗಳು?

**ಉಪಗುಪ್ತ :** ಶಕ್ಯವಿಲ್ಲ.

**ವಾಸವದತ್ತಾ :** ಹಾಗಾದರೆ ನಾನು ಬದುಕುವದೂ ಶಕ್ಯವಿಲ್ಲ. (ನೀರಿಗೆ ಹಾರಲು ಹವಣಿಸುವಳು).

**ಉಪಗುಪ್ತ :** ಹಾಂ ಹಾಂ ದುಡುಕಬೇಡ ಮೂಢೇ, ನೀರಿಗೆ ಹಾರಬೇಡ. ಸಾಯುವದಕ್ಕೂ ಸಮಯವಿದೆ. ನಿನ್ನ ಕರ್ಮ ಸವೆಯಬೇಕು.

**ವಾಸವದತ್ತಾ :** ಇನ್ನೇಕೆ ಬದುಕಲಿ? ಇನ್ನೆಷ್ಟು ಕಾಲ? ನಿಮಗಾಗಿಯೇ ನಾನು ಬದುಕಿದ್ದು. ನನಗೆ ಹಾರಲು ಬಿಡಿ.

**ಉಪಗುಪ್ತ :** ನೀರಿಗೆ ಹಾರಿ ಸತ್ತರೆ ನಾನು ಸಿಗುವೆನೇ? ಹಃ ಹಃ ಹಃ! ಕೇಳು ಈ ವರ್ಷ ಮುಗಿಯುವದರೊಳಗೆ ನಿನ್ನ ಬಳಿಗೆ ಬರುತ್ತೇನೆ. ಆಯಿತೇ?

**ವಾಸವದತ್ತಾ :** ನಿಜವೇ!? ಮಾತು ಕೊಡಿ.

**ಉಪಗುಪ್ತ :** ಬೇರೆ ಮಾತೇಕೆ? ನನ್ನ ಕೈ ನಿನ್ನ ಕೈಯಲ್ಲಿದೆ ತಾನೇ? ಇದೇ ಮಾತು ಭಗವಾನ ಬುದ್ಧನ ಆಣೆ.

ನಿಮ್ಮಿಷ್ಟ. ನನ್ನ ದುರದೃಷ್ಟ. ನಾನು ಕಾಯುತ್ತಿರುವೆ, ನೋಯುತ್ತಿರುವೆ. ದಿನದಿನವೂ ಸಾಯುತ್ತಿರುವೆ.

೪

**ನಿವೇದಕ:** ಋತು ಬಂದಿತು. ಋತು ತಂದಿತು. ತಿಂಗಳು ಮೂಡಿ ಬೆಳಗಿತು.

ಬಾಡಿತು ಶರತ್-ಶಿಶಿರ-ಹೇಮ-ವಸಂತ-ಆದರೆ ವಾಸವದತ್ತೆಯ ಕಣ್ಣಲ್ಲಿ ನಿರಂತರ ವರ್ಷಾ ಋತು. ಮತ್ತೆ ಬಂತು ಮಧುಮಾಸ-ಶೃಂಗಾರಮಾಸ. ವಾಸವದತ್ತೆ ಕಾಮಾತುರೆಯಾಗಿ ಕಾತರಿಸಿ ಕಾದು ನಿಂತು ಕೊರಗಿದಳು. ಈ ವಿರಹದವ್ಯಥೆಗೆ ತಾಳ್ಮೆಗೆಟ್ಟಳು, ಬಂದ, ಬರುವ ವಲ್ಲಭರನ್ನು ನಿರಾಕರಿಸಿದಳು. ಧಿಃಕರಿಸಿದಳು. ಆದರೂ ಅವರಿಗೆಲ್ಲಿ ತಾಳ್ಮೆ? ಅವರಿಗೆಲ್ಲಿ ಲಜ್ಜೆ? ಭಯ? ಇಂದು ನಗರದಲ್ಲೆಲ್ಲ ಹೋಳಿಯ ಉತ್ಸವ. ಆದರೆ ವಾಸವದತ್ತೆಯ ಅಂತಃಪುರದಲ್ಲಿ ಉತ್ಸಾಹವಿಲ್ಲ, ವಾಸವದತ್ತೆ ಉಪಗುಪ್ತನಿಗಾಗಿ ಹಂಬಲಿಸುತ್ತ ಕೂತಿದ್ದಾಳೆ. (ಬಾಗಿಲು ತಟ್ಟಿದ ಸದ್ದು)

ವಾಸವದತ್ತಾ : ಯಾರು?

ಲಕ್ಷ್ಮೀಕಾಂತ : (ಸೆರೆಯ ಅಮಲಿನಲ್ಲಿ) ನಾನು ಪ್ರಿಯೆ, ನಿನ್ನ ಪ್ರಿಯಕರ ಲಕ್ಷ್ಮೀಕಾಂತ.

ವಾಸವದತ್ತಾ : ಹುಃ ಇದು ಲಕ್ಷ್ಮಿಯ ಮನೆ ಅಲ್ಲ. ಅವಳಿದ್ದಲ್ಲಿಗೆ ಹೋಗಿ. (ಜೋರು ಜೋರಾಗಿ ಕದ ತಟ್ಟಿದ ಸದ್ದು.) ತಡೆಯಿರಿ ಕದ ಒಡೆಯಬೇಡಿ (ಹೋಗಿ ಕದ ತೆರೆದ ಸದ್ದು) ಹುಂ ಏಕೆ ಬಂದಿರಿ? ಏನು ಬೇಕು ?

ಲಕ್ಷ್ಮೀಕಾಂತ : ಹಃ ಹಃ ಹಃ! ಏಕೆ ಬಂದಿ? ಇದೆಂಥ ಪ್ರಶ್ನೆ? ನಾನು ಇಲ್ಲಿಗಲ್ಲದೆ ಇನ್ನೆಲ್ಲಿಗೆ ಹೋಗಬೇಕು? ತುಂಬಿ ಬರುವದು ಹೂವಿಗೇ.

ವಾಸವದತ್ತಾ : ನಿಮಗೆ ತುಂಬಿ ಬಂದದ್ದೇ ನಿಜ. ಹೂಂ ಹೊರಡಿ. ಕಾಲ್ದೆಗೆಯಿರಿ ಇದೇನು ಒಳಗೆ ನುಗ್ಗಿ ಕುಳಿತೇ ಬಿಟ್ಟೀರಿ. ಹೊರಟು ಹೋಗಿ (ಕೆರಳಿ ಕೂಗುವಳು) ಹೋಗಿ ಹೋಗಿ.

ಲಕ್ಷ್ಮೀಕಾಂತ : ಎಲ್ಲಿ ಹೋಗಲಿ ಪ್ರಿಯೇ?.

ವಾಸವದತ್ತಾ : ಮಸಣಕ್ಕೆ ಹೋಗಿ.

ಲಕ್ಷ್ಮೀಕಾಂತ : ಸರಿ, ನಿನ್ನೊಂದಿಗೆ ನಾನು ಮಸಣಕ್ಕೂ ಹೋಗಲು, ನರಕಕ್ಕೂ ಹೋಗಲು ಸಿದ್ಧ. ಬಾ ಸುಂದರಿ ನಡೆ ಹೋಗೋಣ. ಹಃ ಹಃ ಹಃ (ಕೈ ಹಿಡಿದು ಎಳೆಯುವನು)

ವಾಸವದತ್ತಾ : ಛೀ ಹೇಸಿಗೆ! ದೂರ ಸರಿ ನೀಚಾ, ಕುಡಿದು ಬಂದಿದ್ದಾನೆ-ಕಾಮಿ.

ಲಕ್ಷ್ಮೀಕಾಂತ : ಹೌದು, ನೀನೇ ಕುಡಿಸಿದ ಮತ್ತು. ಗುಂಡಿನ ಗಮ್ಮತ್ತು. ವಾಸವದತ್ತೆ ನನಗೆ ಆಸವದತ್ತೆ, ಹೆಂಡಕೊಟ್ಟೆ. ಕಾಮದ ಹೆಂಡ ರೂಪದ ಹೆಂಡ,

ಪಾಪದ ಹೆಂಡ! ಹಃ ಹಃ ಹಃ! (ಆಕೆ ಕಪಾಳಕ್ಕೆ ಬಿಗಿದ ಘಳಿರ್ ಸದ್ದು). ಅಹಃ ಇದೇನು ಮಾಡಿದೆ? ಕೆನ್ನೆಗೆ ಹೊಡೆದೆಯಾ? ಅಯ್ಯೋ ನಿನ್ನ ಕೋಮಲ ಕೈಗೆ ಎಷ್ಟು ನೋವಾಯಿತೋ, ತಾ ನೋಡೋಣ. ಮುದ್ದಾಡುತ್ತೇನೆ ಹಃ ಹಃ

**ವಾಸವದತ್ತಾ :** ಸರಿ ಹಿಂದೆ. ದುಷ್ಟಾ ನನ್ನನ್ನು ಮುಟ್ಟಬೇಡ. (ದನಿ ಏರಿಸಿ)

**ಲಕ್ಷ್ಮೀಕಾಂತ :** ಇರಲಿ ಬಿಡು; ನೀನು ನನ್ನವಳು.

**ವಾಸವದತ್ತಾ :** ಕತೆ ಹಳೆಯದು. ನಾನೀಗ ಆ ವಾಸವದತ್ತೆ ಅಲ್ಲ!

**ಲಕ್ಷ್ಮೀಕಾಂತ :** ಹಃ ಹಃ ಹಃ! ಇನ್ನಾವ ವಾಸವದತ್ತೆ? ಒಳ್ಳೇ ಷೋಕಿ ಮಾತು. ಬಾ ನನ್ನ ತೋಳ ತೆಕ್ಕೆಗೆ.

**ವಾಸವದತ್ತಾ :** (ತೀವ್ರ ಕ್ರೋಧ, ತಿರಸ್ಕಾರ, ಅಸಹಾಯಕತೆ) ಬಿಡು ನನ್ನ, ಬಿಡು, ಸರಿ ಹಿಂದೆ. ಅಯ್ಯೋ ಥೂ, ಪಾಪಿ, ಹೊಲಸು ಬಾಯಿ ಚಾಚಬೇಡ. ಅಯ್ಯೋ ಏನು ಮಾಡಲಿ? ದೂರಾಗು ನೀಚ.

**ಲಕ್ಷ್ಮೀಕಾಂತ :** ಎಲೆಲೆ ಹೆಣ್ಣೆ, ಇದೇನು ಹುಚ್ಚು.

**ವಾಸವದತ್ತಾ :** ಹೌದು ನನಗೆ ಹುಚ್ಚು. ನಾನು ಹುಚ್ಚಿ. ಹಃ ಹಃ ಹಃ! ನೋಡು ಈ ಕಠಾರಿ, ದೂರ ಸರಿ.

**ಲಕ್ಷ್ಮೀಕಾಂತ :** ಹಃ ಹಃ ಹಃ! ನೀನೇ ಮದನನ ಕೈಯ ಕಠಾರಿ. ನನ್ನ ಎದೆಯಲ್ಲಿ

**ವಾಸವದತ್ತಾ :** ಇದೋ ಅಪ್ಪಿಕೋ, ಸಾಯಿ! ಪಾಪಿ ನಾಯಿ! (ಉನ್ಮಾದದ ಆಕ್ರೋಶ)

**ಲಕ್ಷ್ಮೀಕಾಂತ :** ಅಯ್ಯಯ್ಯೋ ಸತ್ತೆ. ವಾಸವದತ್ತೆ! ಸತ್ತೆ ಹಾಯ್! (ಕುಸಿದು ಬಿದ್ದ ಸದ್ದು).

(ವಾಸವದತ್ತೆಯ ದೀರ್ಘ ನಿಟ್ಟುಸಿರು. ಕೆಳಗೆ ಬೀದಿಯಲ್ಲಿ) "ನಮೋ ಬುದ್ಧಾಯ, ನಮೋ ಬುದ್ಧಾಯ" ವಾಸವದತ್ತೆ: (ನಿದ್ದೆಯಿಂದ ಎದ್ದಂತೆ) ಯಾರು? ಸ್ವಾಮಿ,

**ಉಪಗುಪ್ತ:** (ಕೆಳಗಿನಿಂದ) ವಾಸವದತ್ತಾ, ಇನ್ನೂ ಎಚ್ಚರ! ನಿದ್ದೆಯನ್ನೇ ಕೊಂದೆಯಾ?

**ವಾಸವದತ್ತಾ :** ಸ್ವಾಮೀs! ಸ್ವಾಮೀss! (ಪ್ರಜ್ಞೆ ತಪ್ಪಿ ಕುಸಿದ ಸದ್ದು)

("ನಮೋ ಬುದ್ಧಾಯ" ತೇಲಿ ಹೋಗುವ ದನಿ). (ಅಪಸ್ವರ ವಾದ್ಯಸಂಗೀತ)

**ಡಂಗುರದವ:** ಕೇಳಿರಿ ಪೌರರೆ, ಕೇಳಿರಿ. (ನಗಾರೆ) ಈ ಮಹಾನಗರದ ಮಹಾಶ್ರೇಷ್ಠಿ ಲಕ್ಷಾಧೀಶ ಲಕ್ಷ್ಮೀಕಾಂತನನ್ನು ಅವನ ವೇಶ್ಯೆ ಸುಪ್ರಸಿದ್ಧ ನರ್ತಕಿ ವಾಸವದತ್ತೆ ಕೊಲೆ ಮಾಡಿದಳು. (ನಗಾರೆ) ಅವಳಿಗೆ ನ್ಯಾಯಸ್ಥಾನವು ಕೈಕಾಲು ಕಡಿದು, ಕಣ್ಣು ಕೀಳುವ ಘೋರ ದಂಡವನ್ನು ವಿಧಿಸಿ, ಅವಳ ಸಕಲ ಸಂಪತ್ತು ರಾಜಭಂಡಾರಕ್ಕೆ ಒಪ್ಪಿಸಿದೆ.

(ನಗಾರೆ) ಇದೀಗ ವಾಸವದತ್ತೆಯನ್ನು ವಧಾಸ್ಥಾನಕ್ಕೆ ಒಯ್ಯುವಾಗ ಪೌರರೇ, ನೀವೆಲ್ಲರೂ ರಾಜಮಾರ್ಗದ ಬದಿಗೆ ಸಾಲುಗಟ್ಟಿ ನಿಂತು ಅವಳ ಮೋರೆಯ ಮೇಲೆ ಉಗುಳಬೇಕು. ಇದು ರಾಜಾಜ್ಞೆ. (ನಗಾರೆ).

೫

(ವಧ್ಯಸ್ಥಾನದಲ್ಲಿ, ವೇದನಾ ವಿಹ್ವಲೆ ವಾಸವದತ್ತೆ)

**ವಾಸವದತ್ತಾ :** ಅಯ್ಯೋ, ಹಾ. (ಬಿಕ್ಕುವಳು) ಏನಿದು ನನ್ನ ಗತಿ! ಹಾ, ವಿಧಿಯೇ! ಕೈಕಾಲು ಕಣ್ಣು ಕಳೆದುಕೊಂಡ ಕುಲಟೆ ನಾನು. ನನ್ನ ನೆತ್ತರದ ಕೆಸರಿನಲ್ಲಿಯೇ ಬಿದ್ದಿದ್ದೇನೆ. ಬೆಂಕಿ ಬಿತ್ತು ನನ್ನ ಬಾಳಿಗೆ, ಮಣ್ಣು ಬಿತ್ತು ನನ್ನ ಬಾಯಿಗೆ. ಅಯ್ಯೋ ಮಾಡಬಾರದ್ದು ಮಾಡಿದೆ, ಆಗಬಾರದ್ದು ಆಯಿತು. ಎಂಥ ಬಾಳಿಗೆ ಎಂಥ ಕೊನೆ! ಹಾ ದೈವವೇ, (ಬಿಕ್ಕಿ ಬಿಕ್ಕಿ ಅಳು) ಅಯ್ಯೋ ನೋವು, ಉರಿ, ಹಾ ತಾಳಲಾರೆ! (ಸಿಂಹ ಗರ್ಜನೆ ಕೇಳಿಸುತ್ತದೆ), ಇದೇನು ಸಾವು ಸಿಂಹವಾಗಿ ಬಂತೇ? ಹಾ, ನನ್ನ ಮೈಕೈ ಮೂಸುತ್ತಿದೆ. ಅಯ್ಯೋ ಅಯ್ಯೋ...ಹೂಂ.... ಅಹ ಸಿಂಹವೇ ಹರಿದು ತಿನ್ನು ನನ್ನ ಮುಗಿಸಿ ಬಿಡು, ಆಹಾ, ಎಂಥ ಮಿದು ಬೆಚ್ಚನ್ನ ಸ್ಪರ್ಶ, ಸಿಂಹ ನನ್ನ ಗಾಯಗಳನ್ನು ನೆಕ್ಕುತ್ತಿದೆ! ಬಸಿದ ನೆತ್ತರು ನಿಂತಿತು. (ನಿಟ್ಟುಸಿರು) ಆಹಾ, ನೋವು ಕಡಿಮೆ ಆಯಿತು. ದಾಹ ತಣಿಯಿತು. ಏನಿದು ಪವಾಡ! ಯಾರು ನನ್ನ ತಲೆಯ ಮೇಲೆ ಕೈ ಆಡಿಸಿದ್ದು?

**ಉಪಗುಪ್ತ:** (ಮೆಲುದನಿ) ನಮೋ ಬುದ್ಧಾಯ! ವಾಸವದತ್ತಾ!

**ವಾಸವದತ್ತಾ :** ಓ ಸ್ವಾಮಿ, (ಬಿಕ್ಕಿ ಬಿಕ್ಕಿ ಅಳುತ್ತ) ಅಯ್ಯೋ ಈಗೇಕೆ ಬಂದಿರಿ? ಸಿಂಹ ಬಂದಾಗಲೇ ನನಗೇಕೆ ಗುರುತು ಗೊತ್ತಾಗಲಿಲ್ಲ?

**ಉಪಗುಪ್ತ:** ಸೋದರಿ, ಈಗಲಾದರೂ ಗುರುತಾಯಿತೇ ?

**ವಾಸವದತ್ತಾ :** ಅಯ್ಯೋ ಅಯ್ಯೋ! (ಅಳುತ್ತ) ಈಗೇಕೆ ಬಂದಿರಿ. ಹೋಗಿರಿ (ಅಳು) ಬರುವಾಗ ಬಾರದೆ ಈಗೇಕೆ ಬಂದಿರಿ?

**ಉಪಗುಪ್ತ:** ಬರುವಾಗಲೇ ಬಂದಿದ್ದೇನೆ ಸುಂದರಿ.

**ವಾಸವದತ್ತಾ :** (ಅಳು ಉಕ್ಕಿ) ಸುಂದರಿ! ನನ್ನ ಅಣಕಿಸುವಿರಾ? ಕಣ್ಣು ಕಿತ್ತು ಕೈಕಾಲು ಕಡಿದು ಬಿದ್ದ ಈ ಮೋಟು ದೇಹವನ್ನು ಅಣಕಿಸುವಿರಾ? ಸುಂದರಿ ಆಹ್,

(ಅಳುವಳು) ಹೋಗಿ ಹೊರಟುಹೋಗಿ ಈಗ (ಬಿಕ್ಕು) ನಾನೇನು ಕೊಡಬಲ್ಲೆ.

**ಉಪಗುಪ್ತ:** (ಸಾಂತ್ವನೆ) ನಾನೇ ಕೂಡಲು ಬಂದಿದ್ದೇನೆ. ನನ್ನ ಭಿಕ್ಷೆಗೆ ನೀನು ಪಾತ್ರ.

**ವಾಸವದತ್ತಾ :** ಈಗ ನೀವೇನು ಕೊಡುವಿರಿ?

**ಉಪಗುಪ್ತ:** ನಾನು ನಿಮಿತ್ತ ಮಾತ್ರ. ಕೊಡುವಾತ ಆತ. ತಥಾಗತ. ಅವನ ಕರುಣೆಗೆ ಪಾತ್ರಳಾಗು.

**ವಾಸವದತ್ತಾ :** ಸೌಂದರ್ಯ, ಐಶ್ವರ್ಯ ಎಲ್ಲ ಕಳೆದುಕೊಂಡ ಕುಲಟೆ ನಾನು.

**ಉಪಗುಪ್ತ:** ನೀನೀಗ ಪರಿಶುದ್ಧೆ. ಧನಕನಕ ರೂಪವೆಲ್ಲ ಬಿಸಿಲುಗುದುರೆ. ಮುಗಿಲ ನೆಳಲು. ಅದೆಲ್ಲ ನಿನ್ನನ್ನು ಕಾಪಾಡಿತೆ ? ಇಲ್ಲ.

**ವಾಸವದತ್ತಾ :** (ಮೆಲುದನಿ). ಹಮ್ಮುಹೆಮ್ಮೆ ಎಲ್ಲ ಕರಗಿ ಕಣ್ಣೀರಾಯಿತು. ಅಯ್ಯೋ ನನ್ನ ಕಣ್ಣೇ (ಅಳುವಳು)

**ಉಪಗುಪ್ತ:** ತಂಗೀ, ಅಳಬೇಡ. ಇಂದು ನಿನ್ನ ಒಳಗಣ್ಣು ತೆರೆದಿದೆ. ಆತ್ಮಬಿಂಬ ಬೆಳಗಿದೆ, ಬುದ್ಧ ದೇವನ ಮಹಾಕರುಣೆ ನಿನಗಾಗಲಿದೆ.

**ವಾಸವದತ್ತಾ :** ಅದು ಹೇಗೆ ಸ್ವಾಮೀ?

**ಉಪಗುಪ್ತ:** ದುಃಖಗಳಿಗೆಲ್ಲ ಮೂಲ ತೃಷ್ಣೆ, ಕಾಮತೃಷ್ಣೆ, ಭವತೃಷ್ಣೆ, ವಿಭವತೃಷ್ಣೆ

**ವಾಸವದತ್ತಾ :** (ಖಿನ್ನ ದನಿಯಲ್ಲಿ) ಅದೆಲ್ಲ ಇಂದು ಮೃಗತೃಷ್ಣೆ !

**ಉಪಗುಪ್ತ:** ಈ ತೃಷ್ಣಾತ್ರಯಗಳಿಂದ ನಿನಗೆ ಬಿಡುಗಡೆಯಾಗಿದೆ, ಪ್ರಜ್ಞೆಯ ಜ್ಯೋತಿ ಜಾಗೃತವಾಗಿದೆ. ಮೋಹಾಂಧಕಾರ ಮಾಯವಾಗಿದೆ.

**ವಾಸವದತ್ತಾ :** ಇದೆಲ್ಲ ನಿಮ್ಮ ಅನುಗ್ರಹ.

**ಉಪಗುಪ್ತ:** ಅಲ್ಲ, ವಾಸವದತ್ತಾ, ಸುಗತಿ ಕೊಡುವವನು ಆತ ಸುಗತ. ಅಂಗುಲಿಮಾಲಿಯಂಥ ನೀಚನಿಗೂ ಅರ್ಹತ ಪದವಿ ಸಿಗುವಂತೆ ಮಾಡಿದ ಈ ಬುದ್ಧ ಭಗವಾನ, ಅವನ ಅಡಿಗೆ ಒಯ್ಯುತ್ತೇನೆ. ಬಾ.

**ವಾಸವದತ್ತಾ :** ಇದಕ್ಕಾಗಿಯೇ ಇಂದು ಬಂದಿರಾ? ಇಷ್ಟು ದಿನ ನನ್ನೀ ದುರ್ದೆಶೆಗಾಗಿ ಕಾದು ನಿಂತಿದ್ದೀರಾ. ಅಂದೇಕೆ ನನ್ನನ್ನು ಉದ್ಧರಿಸಲಿಲ್ಲ?

**ಉಪಗುಪ್ತ:** ಯಾರೂ ಯಾರನ್ನೂ ಉದ್ಧರಿಸಲಾರರು. ತನ್ನ ಉದ್ಧಾರ ತಾನೇ ಮಾಡಿಕೊಳ್ಳಬೇಕು-ಅಂದಿದ್ದಾರೆ ಬೋಧಿಸತ್ವರು. ನಡೆ-ನಿನ್ನ ಸಿಂಹ ಕಟಿಗೆ ಕೈ ಕೊಡಬೇಕೆಂದಿದ್ದಿಯಷ್ಟೇ. (ನಗುವನು) ಇಕೋ ನನ್ನ ತೋಳಿನ ತೆಕ್ಕೆ! ಸಂಘಾರಾಮಕ್ಕೆ ಹೋಗೋಣ. ಪಡೆ ನನ್ನ ಆಧಾರ.

**ವಾಸವದತ್ತಾ :** ಇದೇ ನನ್ನ ಉದ್ಧಾರ, ಆದರೆ ಇದೇನು, ನನ್ನ ಹೆಗಲ ಮೇಲೆ ಬಿಸಿ ಬಿಸಿ ಹನಿ.

**ಉಪಗುಪ್ತ:** ಇದು ಕರುಣೆಯ ಕಂಬನಿ. ಇನ್ನು ನನ್ನೊಂದಿಗೆ ದನಿಗೂಡಿಸು

ಸಂಘಂ ಶರಣಂ ಗಚ್ಛಾಮಿ
ಧಮ್ಮಂ ಶರಣಂ ಗಚ್ಛಾಮಿ
ಬುದ್ಧಂ ಶರಣಂ ಗಚ್ಛಾಮಿ

# ದೇವಿಕೊಟ್ಟ ಬೆಳಕು

**ಪಾತ್ರಗಳು :**

**ಸೂತ್ರಧಾರ**

**ದೇವಿ** (ಹಸಲರ ಹೆಂಗಸು)

**ನಾಗಪ್ಪ ಹೆಗಡೆ**

**ನಾಗವೇಣಿ**

**ಸುಬ್ಬಣ್ಣ**

**ಸುಬ್ಬಿ** (ಸುಬ್ಬಣ್ಣನ ಹೆಂಡತಿ)

**ಶಂಕರಪ್ಪ**

**ಮಹಾದೇವಮ್ಮ** (ದೇಶಸೇವಿಕೆ)

**ಯಾಕೂಬ** (ಹವಲ್ದಾರ)

**ಸುಬ್ರಾಯ** (ಪೋಲೀಸ)

**ದಾವೂದ** ”

**ಮಂಜಪ್ಪ** (ಪಟೇಲ)

**ಫಕೀರಾ** (ದೇವಿಯ ಮಗ, ಚಿಕ್ಕ ಹುಡುಗ)

ಸ್ವಯಂಸೇವಕರು, ಹಸಲರ ಕೇರಿಯ ಪೋಲೀಸ ಲಾಠಿ ಚಾರ್ಜು,
ಗೋಳಿಬಾರಿನ ಸದ್ದು ಗದ್ದಲ, ಜೈಕಾರ ಕೂಗಾಟ.

(ಉತ್ತರ ಕನ್ನಡ ಜಿಲ್ಲೆಯ ಕರನಿರಾಕರಣೆಯ ವೀರಗಾಥೆಯ ಒಂದು ಚಿನ್ನದ ಪುಟ. ಇಲ್ಲಿ ಸ್ಥಳ ವ್ಯಕ್ತಿ-ನಾಮಾಂಕಿತಗಳನ್ನು ಮರೆಮಾಡಿ ನಾಯಿಕೆಯ ಪಾತ್ರವನ್ನು ಬಿಟ್ಟು-ಯಥಾವತ್ತಾಗಿ ರೂಪಗೊಂಡಿದೆ.)

೧

ಹಿನ್ನೆಲೆಯಲ್ಲಿ ಮಂದ್ರದಲ್ಲಿ : " ದೇವಿ ಕೊಟ್ಟ ಬೆಳಕು" "ದೇವಿಕೊಟ್ಟ ಬೆಳಕು" - ತಡೆ ತಡೆದು ಘೋಷ ನಡೆಯಬೇಕು.

ಮುನ್ನೆಲೆಯಲ್ಲಿ : ಬೌದ್ಧ ಪ್ರಾರ್ಥನೆ - ಜಾಗಟೆಯೊಂದಿಗೆ.
ಕ್ರೈಸ್ತ ಪ್ರಾರ್ಥನೆ - ಗಂಟೆಗಳೊಂದಿಗೆ.
ಇಸ್ಲಾಂ ಪ್ರಾರ್ಥನೆ - ನಗಾರೆಯೊಂದಿಗೆ.
ವೈದಿಕ ಪ್ರಾರ್ಥನೆ - ಶಂಖದೊಂದಿಗೆ.

ತಮಸೋಮಾ ಜ್ಯೋತಿರ್ಗಮಯ...... ಓಂ ಶಾಂತಿಃ ಶಾಂತಿಃ ಶಾಂತಿಃ

ಸೂತ್ರಧಾರ : ಶಾಂತಿ, ಶಾಂತಿ, ಶಾಂತಿ, ಶಾಂತಿ...ಎಲ್ಲಿದೆ ಶಾಂತಿ? ಬರೇ ಭ್ರಾಂತಿ. ಅದಕ್ಕೆ ಹೆಸರು ಕ್ರಾಂತಿ.

ನಟಿ: "ಕರುಣಾಳು ಬಾ ಬೆಳಕೆ ಮುಸುಕಿದೀ ಮಬ್ಬಿನಲಿ

ಕೈ ಹಿಡಿದು ನಡೆಸೆನ್ನನು.....ಕರುಣಾಳು ಬಾ ಬೆಳಕೇsss.

ಸೂತ್ರಧಾರ : ಲೇಲೇಲೇ ನಟೀ ನಾಟೀರಾಗ ಬಿಟ್ಟು ಇದೇನು ಹೊಸ ಧಾಟಿ ಹಾಡ್ತಾ ಇದ್ದೀಯಾ? ಬೆಳಕಂತೆ ಬೆಳಕು. ಎಲ್ಲಿದೆ ಬೆಳಕು? ಎಲ್ಲಾ ಕೊಳಕು. ಒಳಗೆ ಹುಳುಕು. ಮೇಲೆ ಥಳಕು. ಅಲ್ಲ ಎಲ್ಲೆಲ್ಲೂ ಕತ್ತಲೆ, ಕಾರ್ಗತ್ತಲೆ, ಕಗ್ಗತ್ತಲೆ, ಘನ ಘೋರ ಕತ್ತಲೆ. ಅಂಧಕಾಸುರನ ಸಾಮ್ರಾಜ್ಯಶಾಹಿ, ಕುರುಡು ದಬ್ಬಾಳಿಕೆ.

ನಟಿ : ಇಲ್ಲ ನಾಥಾ ಇಲ್ಲ, ಕತ್ತಲೆಯೆದೆಯೊಳಗೇ ಬೆಳಕಿನ ಕಿರಣ ಕಾರಾಗೃಹದಲ್ಲಿಯೇ ಕೃಷ್ಣನ ಜನನ.

``In the midst of darkness Light persists
In the midst of death Life persists.

(ಗಾಂಧೀಜಿಯ ಕೋಲಂಬಿಯ ರಿಕಾರ್ಡಿನ ಈ ಮೇಲಿನ ವಾಕ್ಯಗಳು ಕೇಳಿಸುತ್ತಿರುವಾಗಲೇ ಜನ ಕೋಲಾಹಲದ ದೂರದ ಸದ್ದು ಲಾಠಿ ಚಾರ್ಜು, ಕೂಗಾಟ, ಚೀರಾಟ, ಹುಸಿಗುಂಡುಗಳ ಅಬ್ಬರ ಕ್ರಮೇಣ ಸ್ಪಷ್ಟವಾಗುವದು).

ಸೂತ್ರಧಾರ : ಇದೋ ಬೆಳಕು ಕೊಲ್ಲುವ ಕತ್ತಲೆ! ದೆವ್ವ ಕುಣಿದಿದೆ ಬತ್ತಲೆ! ಪ್ರಿಯೇ,

ಅಯ್ಯೋ ನನ್ನ ನಟಿ ಎಲ್ಲಿ? ಅದೋ, ಅದೋ ಆ ಜನರ ಗಲಭೆಯಲ್ಲಿ ನುಗ್ಗಿ ಬಿಟ್ಟಳಲ್ಲ. ಸಿದ್ದಾಪುರದಲ್ಲಿ ಶಿವರಾತ್ರಿ, ೧೯೩೨ ಫೆಬ್ರುವರಿ ೨೮, ಉತ್ತರ ಕನ್ನಡದ ಜಲಿಯನವಾಲಾ ದುರಂತ..........

(ಜನಸ್ತೋಮ, ಬೇರೆ ಬೇರೆ ದನಿಗಳು, ಪೋಲಿಸರ ಕೂಗು : "ಅಯ್ಯೋ ಅಯ್ಯಯ್ಯೋ ಹೊಡಿಬೇಡ್ರೋ" "ಕಳ್ಳ ಮುಂಡೆ ಮಕ್ಕಳು, ಕಚೇರಿಗೆ ಮುತ್ತಿಗೆ ಹಾಕೋಕೆ ಬಂದಾರೆ" "ತಿಜೋರಿ ಒಡೆಯೋಕೆ ಬಂದಾರೆ, ಸಭೆ ಮಾಡ್ತಾರೆ ಸಭೆ...")

ಜನ : ಅಲ್ರಿ, ಅಲ್ರೇಪೊ! ನಾವು ಸಂತೆಗೆ ಬಂದವ್ರು. ಸಭೆಗಲ್ಲ, ಹಬ್ಬದ ಸಂತೆ. ಶಿವರಾತ್ರಿ ಸಂತೆ. ಅಯ್ಯೋ, ಹಾಯ್! ಈ ಸರಕಾರ ಹಾಳಾಗ, ಹಾ ಸತ್ತೆ, ಸತ್ತೆ! ಶಿವರಾತ್ರಿ ಯಮಯಾತ್ರೆ ಆಯ್ತಲ್ಲ. ಅಯ್ಯಯ್ಯೋ (ಬೇರೆ ಬೇರೆ ದನಿಗಳು)

ಪೋಲಿಸ : ಏ ಬದ್ಮಾಷ ಕೂಗಬೇಡ್ರಿ.

ಜನ : ನೀವು ಹೊಡೀಬೇಡ್ರಿ.

ಪೋಲಿಸ : ನಿಮಗೆಲ್ಲಿ ನಾವು ಹೊಡ್ದೀವಿ? ನೀವೇಕೆ ಕೂಗ್ತೀರಿ?

ಜನ : ಆ ಕಾಂಗ್ರೆಸ ಮಂದಿಗೆ ನೀವ್ ಹೊಡಿಯೋದು ನಮ್ಮಿಂದ ನೋಡೋಕೆ ಆಗೊದಿಲ್ಲ,

ಪೋಲಿಸ : ಹಾಗಾದರೆ ನಡೀರಿ, ಇಲ್ಲಿಂದ ಕಾಲ ಕೀಳ್ರಿ.

ಜನ: ಓಡಲಿಕ್ಕೆ ಆಗೋದಿಲ್ಲ. ನಿಮ್ಮ ಆರ್ಭಾಟಕ್ಕೆ ಕೈ ಕಾಲೇ ಹೋಯ್ತು.

ಪೋಲಿಸ : ಥೂ ರಣಹೇಡಿ ಮುಂಡೇಮಕ್ಕಳು.

ಜನ: ಆ ಹೇಡಿಗಳ ಮೇಲೆ ಪೌರುಷ ತೋರಿಸೋರು ನೀವ್ ಎಂಥೋರು. (ಲಾಠೀ ಚಾರ್ಜು, ಹುಸಿಗುಂಡು ಸದ್ದು ಗದ್ದಲ ಬಲವಾಗುತ್ತ ಬರುತ್ತದೆ. ಆ ಹಿನ್ನೆಲೆಗೆ ಜನರ ಗುಂಪು ಹಾಡುತ್ತ ಬರುತ್ತದೆ ಬರುವಾಗ)

ಪೋಲಿಸ : ಸರೀರಿ, ಹಿಂದೆ ಸರೀರಿ ಹೂ.

ಗುಂಪು : "ಪ್ರಾಣ ಹೋದರೂ-

" ೨: ಹಿಂದೆ ಸರಿಯೆವು

" ೧: ಮುಂದೆ ಮುಂದಕೆ-

" ೨: ಸಾಗಿ ನಡೆವೆವು.

" ೧: ತೋಪು ತುಬಾಕಿಯ ಮದ್ದು ಗುಂಡುಗಳ

" ೨: ಒಂದಿಷ್ಟನ್ನೂ ಲೆಕ್ಕಿಸದೆ

" ೧: ಮುಂದು ಮುಂದಕೆ-

" ೨: ಸಾಗಿ ನಡೆವೆವು.

" ೧: ಪ್ರಾಣ ಹೋದರೂ-

" ೨: ಹಿಂದೆ ಸರಿಯೆವು.

(ಹಾಡುತ್ತ ಹೋಗುತ್ತಿದ್ದಂತೆ ಗದ್ದಲ ಮಂದವಾಗುವದು)

ಫಕೀರ: ಅಮ್ಮಾ ಅಮ್ಮಾ ............ (ಹೆದರಿ ಅಳು ದನಿ)

ದೇವಿ: ಮಗೂ ಫಕೀರ ಹೆದರಬ್ಯಾಡ, ಮರಿ ಸುಮ್ನಿರು

ಫಕೀರ: ಕೋ ಕೋ ಕೋವಿಗುಂಡು (ಅಳು)

ದೇವಿ: ಮಗು ಅದು ಹುಸಿಗುಂಡು ಬರೀ ಹೆದ್ರಸಲಿಕ್ಕ ಸುಮ್ನಿರು. ತೀಡೂದು ನೋಡಿದ್ರ ಪೋಲಿಸರು ಹೊಡೀತಾರೆ.

ಫಕೀರ: (ಇನ್ನೂ ಜೋರಾಗಿ ಅಳು) ಯಾಕೆ? ಯಾರ್ಗ?

ದೇವಿ: ನಿಂಗಲ್ಲ ಮಗೂ, ನಿಂಗಲ್ಲ. ನೀ ಸುಮ್ನಿರು.

ಫಕೀರ: ಯಾರಿಗೆ ಹೊಡಿದ್ರು?

ದೇವಿ: ಈಗ ಮನೆಗೆ ನಡೆ; ಮನೇಲಿ ಹೇಳ್ತೇನೆ, ಇಲ್ಲಿ ಬ್ಯಾಡ

ಜನ: (ಬೇರೆ ಬೇರೆ ಕಂಠಗಳು) ನೋಡಿ, ನೋಡಿ ಆ ಮೂರು ಮಹಿಳೆಯರು! ಶೂರ ಮಹಿಳೆಯರು! ಏನು ಚಮತ್ಕಾರ! ಲಾಠೀ ಚಾರ್ಜು ತಂತಾನೇ ಬಂದಾಯ್ತು! ಹೇಗೆ ಮುಂದೆ ಮುಂದೆ ಬರ್ತಾ ಇದ್ದಾರೆ ಆ ಹೆಂಗಸರು-ಪೋಲಿಸರು ಕೋವಿ ಕೆಳಗಿಳಿಸಿದ್ರೂ,

೧ ದನಿ: ಮಹಾದೇವಿ ಅಕ್ಕನವರಿಗೆ

ಸಾಮೂಹಿಕ: ಜಯವಾಗಲಿ,

೧ ದನಿ: ಕಾವೇರಮ್ಮನವರಿಗೆ

ಸಾಮೂಹಿಕ: ಜಯವಾಗಲಿ.

೧ ದನಿ: ಲಕ್ಷ್ಮಮ್ಮನವರಿಗೆ-(ಸಾಮೂಹಿಕ) : ಜಯವಾಗಲಿ.

(ಜಯ ಜಯಕಾರದಲ್ಲಿ ಫಕೀರನ ಕಿರುದನಿ ಎಲ್ಲಕ್ಕೂ ಎತ್ತರ ಕೇ ಬರುತ್ತದೆ)

ಮಹಾದೇವಮ್ಮ : ಏನೇ ದೇವಿ? ಇಲ್ಲೆಲ್ಲಿ ಬಂದೆ? ಪೋಲಿಸರ ಪೆಟ್ಟು ತಿನ್ನೂಕೆ .....

ದೇವಿ: ಕೈ ಮುಗಿದೆ ಮಾದೇಮ್ಮನೋರೆ, ನಾವು ಸಣ್ಣ ಜನ. ಪೋಲಿಸ ಕಣ್ಣು ತುಂಬೂವರಲ್ಲ ನಾವು!

ಮಹಾದೇವಮ್ಮ : ಫಕೀರನೂ ಬಂದಾನಾ? ಏ ಪೋರಾ ಏನ ಕೂಗ್ತೀಯೋ?

ದೇವಿ: ಮಗೂ ಅಮ್ಮನೋರಿಗೆ ಕೈ ಮುಗಿ. ಹಬ್ಬದ ಸಂತೆಗೆ ಬಂದ್ವಿ. ಅಮ್ಮನೋರಿಗೂ ಕೈ ಮುಗಿ.

ಮಹಾದೇವಮ್ಮ: ತಕೋ ದುಡ್ಡು, ಮಿಠಾಯಿ ತಿನ್ನು.

ದೇವಿ: ಆಗ ತೀಡತ್ತಿದ್ದ.

ಫಕೀರಾ : ನಂಗೆ ತೀಡಿದ್ರಿಂದ್ಲೆ ಮಿಠಾಯಿ ಸಿಕ್ತು ( ಎಲ್ಲರೂ ನಗುವರು, ದೂ ಹೋಗುವರು.)

ದೇವಿ: ಫಕೀರಾ ನೀ ಭಾಳ ಶಾಣ್ಯಾ, ಮನೆಗೆ ಹೋಗು.

ಫಕೀರಾ : ಮತ್ತೆ ನೀನು?

ದೇವಿ: ನಾ ಲಗೂ ಬರ್ತೇನಿ, ಬೆಟ್ಟಕ್ಕೆ ಹೋಗಿ ಬರ್ತೇನಿ.

ಫಕೀರಾ : ಅಲ್ಲೇನು ಕೆಲಸ? ನಾನೂ ಬರ್ತೆ.

ದೇವಿ: ಛೇ ಬ್ಯಾಡಾ ಮರಿ. ಅಲ್ಲಿಗೆ ಪೋಲಿಸ್ರು ಬಂದ್ರೂ ಬಂದ್ರು. ನೀ ಮನೆ ಹೋಗಿ ಅಂಬ್ಲಿ ಉಣ್ಣು. ಬೆಟ್ಟದಲ್ಲಿ ಆ ಗಾಂಧಿ ಮಂದಿ ಈವ್ರು. ಅವ್ರಿ ಸಂತೆ ಗಲಾಟೆ ಸುದ್ದಿ ಹೇಳಿ ಬರ್ತೇನೆ. ಪೋಲಿಸ್ರ ಲಾಠಿ ಸುದ್ದಿ ಅವ ಊರ್ ಊರ್ಗೆಲ್ಲಾ ಹಂಚಬೇಕು. ತಿಳೀತಾ.

ಫಕೀರಾ: ಮತ್ತೆ ನಮ್ಮಪ್ಪ ಕೇಳಿದ್ರೆ ಏನ ಹೇಳ್ಲಿ?

ದೇವಿ: ಸೊಪ್ಪಿಗೆ ಹೋದೆಂತ ಹೇಳು.

ಫಕೀರಾ: ಗಾಂಧೀ ಕೇಲಸದಲ್ಲಿ ಯಾಕೆ ಸುಳ್ಳು ಹೇಳ್ತಿ?

ದೇವಿ: ಗಾಂಧಿ ಮೊಮ್ಮಗ ನೀನು, (ನಕ್ಕು) ಅಲ್ಲ ಮರಿ, ಬರುವಾಗ ಸೊಪ್ಪಿನ ಹೊರೆ ತರೋದೇ ಉಂಟು. ("ಗಾಂಧಿಮೊಮ್ಮಗ ನಾಽಽನು!" ಎಂದು ರಾಗ ಎಳೆಯುತ್ತ ಫಕೀರ ದೂರ ಹೋಗುತ್ತಾನೆ.)

೨

ಯಾಕೂಬ: ಹೋಗೋ ಹೋಗೋ, ಯೇ ಯೇ, ಚಲ್ ಬೇ, ನಾನು ಯಾರು ಎಂತ ಸಮಜಾ? ಏ ಸುಬ್ರಾಯ?

ಸುಬ್ರಾಯ: ನೀವು ಯಾಕೂಬ ಖಾನ ಹವಲದಾರ, ಈಗ ಅಮಲದಾರ.

ಯಾಕೂಬ: ಅಲ್ಲ ಬೇಕೂಫ, ನಾ ವೈಸರಾಯ.

ಸುಬ್ರಾಯ: ಮತ್ತೆ ನಾನು?

ಯಾಕೂಬ: ಅರೇ ಯೇ ಕ್ಯಾ ಪೂಛತೇ? ನೀನು ಗವರ್ನರ ಜರ್ನಲ್ ಭಂಡಾರಿ, ಅಲ್ಲಾ ಯಾ ಅಲ್ಲಾ ......

ಸುಬ್ರಾಯ: ಅಂದ್ರೆ ನೀವೇ ನಾನು, ನಾನೇ ನೀವು.

ಯಾಕೂಬ: ಹಾಗಲ್ಲ, ಹಾಗಲ್ಲ: ನಾವಿಬ್ರೂ ವೈಸರಾಯ, ನಾವಿಬ್ರೂ ಗವರ್ನರ ಜನರಲ್.

ಸುಬ್ರಾಯ: ಅದು ಹೇಗೆ ಹವಲದಾರ್ರ?

ಯಾಕೂಬ: ಅರೇ ಯಾರ, ಮೈ ಬೋಲಾ ತುಮ್ ಸುನೋ. ದಿಲ್ಲೀಲಿ ವೈಸರಾಯ್ರು ಇದೇ ಜನವರಿ ನಾಲ್ಕಕ್ಕೆ ಏನ್ಮಾಡಿದ್ರೂ?

ಸುಬ್ರಾಯ: ಏನ್ಮಾಡಿದ್ರೊ ಯಾರಿಗೆ ಗೊತ್ತು? ನಾನೆಲ್ಲಿ ದಿಲ್ಲೀಲಿ ಇದ್ದೆ? ನಾನೀ ಹಳ್ಳೀಲಿ!

ಯಾಕೂಬ: ಅದೇ ಬೇಕೂಫ. ಆ ದಿನ ವೈಸರಾಯ್ರು ಆರ್ಡಿನನ್ಸ ಹೊರಡಿಸಿ ನಮಗೆಲ್ಲ ತನ್ನ ಅಧಿಕಾರ ಕೊಟ್ಬೇ ಬಿಟ್ರು.-ಎಲ್ಲ ಕೊಟ್ಬೇ ಬಿಟ್ರು.

ಸುಬ್ರಾಯ: ಅಂದ್ರ ಬಿಟ್ಟು ಕೊಟ್ಟರು?

ಯಾಕೂಬ: ಭಲೆ ಸುಬ್ರಾವ, ಅಚ್ಛಾ ಬೋಲಾ ನಾನೀಗ ವಾರಂಟೇ ಇಲ್ದೆ ಯಾರನ್ನ ಬೇಕೋ ಅವರನ್ನು ಅರೆಸ್ಟ್ ಮಾಡೂಬೋದು! ಖುದ್ ವೈಸರಾಯರನ್ನೇ!

ಸುಬ್ರಾಯ: ನೀವೇ ಅಲ್ರಿ ವೈಸರಾಯ್ರು!

ಯಾಕೂಬ: ಸರಿ ಮತ್ತೆ ನಮ್ಮನ್ನೇ. ಯಾರದೇನು ಬಿಸಾತು ಅಂದೆ.

ಸುಬ್ರಾಯ: ಆದರೆ ಸಾಹೇಬ್ರೆ, ಈ ಅಧಿಕಾರ ನಮಗಲ್ಲ. ಮ್ಯಾಜಿಸ್ಟ್ರೇಟರಿಗೆ, ಇನ್‌ಸ್ಪೆಕ್ಟ್ರಿಗೆ!

ಯಾಕೂಬ: ಇಕಾ ಮೂಳಾ, ಇನ್ನೊಂದು ಗ್ಲಾಸು ಕುಡಿ, ನಿನ್ನ ತಲೆ ಸರಿ ಚಲಾಯಿಸ್ತಾ ಇಲ್ಲಾ. ಹೂಂ ಕುಡಿ.

ಸುಬ್ರಾಯ: ಕುಡ್ದೆ ಹಾಂ. ತಿಳೀತು ಈಗ, ಅವರೇನು ನಾವೇನು? ನಾವ ಅವರ ಕೈ ಕಾಲು, ನಾವೇ ಸರಕಾರ.

ಯಾಕೂಬ: ನಮಗ್ಯಾರ ದರಕಾರ? ಹೂಂ ಕುಡಿ 'ಹೆಂಡಾ ಊಂಚಾ ರಹೇ ಹಮಾರಾ,'

(ಮದ್ಯಪಾನ ಪಿಕೆಟಿಂಗಿನ ದೂರದ ಪ್ರಭಾತಫೇರಿ ಸಮೀಪಿಸುತ್ತದೆ)

ಸುಬ್ರಾಯ: ಅರೆರೇ, ಯಾಕೂಬ ಸಾಹೆಬ್ರೆ ಕಾಲು ಕೀಳ್ರಿ, ಗಾಂಧೀ ಮಂದಿ ಬಂದ್ರು. ಅವರ ಕೈಗೆ ಈ ಅವಸ್ಥೇಲಿ ಬಿದ್ದು ಬಿಟ್ರೆ ನಮ್ಮ ಗತಿ ಗಂಗವ್ವಗೇ ಸೇರೋದು.

(ಜನ ಪಾನಪ್ರತಿಬಂಧದ ಪದ್ಯ ಹಾಡುತ್ತ ಬಂದು ಮುತ್ತಿಗೆ ಹಾಕುತ್ತಾರೆ)

ಜನ: ಇದ್ನೋಡಿ ಈ ಪೋಲಿಸರು. ಅರೇ, ಯಾಕೂಬ ಹವಲ್ದಾರ ಮತ್ತೆ ಈ ಸುಬ್ರಾಯ ಭಂಡಾರಿ ಕುಡಿದು ಲಕ್ಕಾಗಿ ಇದ್ದಾರೆ. ಅದೂ ಯೂನಿಫಾರ್ಮಿನಲ್ಲಿ, ಇವರೀಗ ನಿಜವಾದ ಅಮಲದಾರ್ರು!

ಯಾಕೂಬ: ಸರಿ ಸರಿ, ನಾವೇ ಗವರ್ನರ ಜನರಲ್ (ಸುಬ್ರಾಯನೂ ದನಿಗೂಡಿಸುವನು)

ಜನ: ನಾಗಪ್ಪ ಹೆಗಡೆರೇ ಇವರಿಗೇನು ಮಾಡೋದು?

ನಾಗಪ್ಪ ಹೆಗಡೆ: ಎರಡು ಕೊಡ ನೀರು ತಂದು ಅವರ ನೆತ್ತಿಗೆ ಚೆಲ್ಲಿರಿ. ಅವರ ಯುನಿಫಾರ್ಮು ಬೆಲ್ಟು ಟೊಪ್ಪಿಗೆ ಕಿತ್ಕೊಳ್ಳಿ. ಒಳವಸ್ತ್ರದಲ್ಲೆ ಆ ಎರಡು ಮರಕ್ಕೆ ಬಿಗಿದು ಕಟ್ಟಿ ಹಾಕಿ ಬಿಡಿ. ಒಂದು ಮಾರು ಮೇಲೆ.

ಸುಬ್ರಾಯ: ಅಯ್ಯೋ ಚಳಿ ಚಳಿ; ಅದೊಂದು ಮಾಡ್ಬೇಡಿ.

ಯಾಕೂಬ: ಯಾ ಅಲ್ಲಾ! ಹೆಗಡೆ ಸಾಬ, ಹೊಟ್ಟೆ ಮೇಲೆ ಹೊಡೀಬೇಡಿ. ಬೆನ್ನ

ಮೇಲೆ ಹೊಡೀರಿ. ಈ ಸಲ ಹಮಕೊ ಛೋಡದೊ. ಮಾಫ ಮಾಡಿ,

ನಾಗಪ್ಪ ಹೆಗಡೆ: ಸುಮ್ಮನಿರಿ ಮುಟ್ಠಾಳರೇ, ಗಲಾಟೆ ಮಾಡಿದರೆ ಬಾಯಿಗೆ ಬೊಂತೆ! ಕಟ್ಟಿ ಅವರನ್ನ, ಹಾಂಽಗೆ! ಎಷ್ಟು ಮನೆ ಹಾಳು ಮಾಡಿದ್ರೋ ಪಾಪಿಗಳು. ಅಲ್ಲೇ ನೇತಾಡಿ, ಯಾರಾದರೂ ಪುಣ್ಯಾತ್ಮರು ಬಂದುಬಿಡಿಸೂ ತನಕ.

(ಜೈ ಜೈಕಾರ ಹಾಕುತ್ತ, ಹಾಡುತ್ತ ಹೋಗುವರು)

ಸುಬ್ರಾಯ: ಯಾಕೂಬ ಸಾಬ, ಇನ್ನೇನು ಮಾಡೋದ್ರಿ? ಯೂನಿಫಾರ್ಮಿನ ಮೇಲೆ ಪೊಝಿಶನ್ ಡ್ಯಾಂ ಆಯ್ತಲ್ರೀ?

ಯಾಕೂಬ: ಯೂನಿಫಾರ್ಮೆ ಹೋಯ್ತಲ್ಲೋ ಬೇಕೂಫಾ. ಪೊಝಿಶನ್ ಏನ ಮಣ್ಣು ಬಂತು? ಕ್ಯಾಕರ್ನಾ ಬೇ? ನಾಳೆ ನೌಕರಿ ಗತಿ ಏನು?

ಸುಬ್ರಾಯ: ನಾಳೆ ಗತಿ ನಾಳೆ, ಈಗ ಕೈಕಾಲ ಬಿಡಿಸಿಕೊಳ್ಳೋದು ಹೇಗೆ ಅಂತ! ಅದಾರೊ ಆ ಕಡಿಂದ ಬರ್ತಾ ಇದ್ದಾರೆ. ಮತ್ತೇನು ಬಂತ್ರೋ ಪೀಕಲಾಟಪ್ಪಾ, ಇದ್ಯಾವ ದೆವ್ವಾ?

ಯಾಕೂಬ: ಯೋಯ್, ಪೀಕಲಾಟಪ್ಪ ಅಲ್ಲೋ ಸುಬ್ರಾಯ, ಇವನು ಪಟೇಲ ಮಂಜಪ್ಪ. ನಮ್ಮ ಪಟೇಲ ಸಾಬ. ಎಲ್ಲಾ ಅಲ್ಲಾನ ಖುಷಿ. ಇವನೂ ನಾಗಪ್ಪ ಹೆಗಡೇನ ದಾಯಾದಿ. ಹೋಯ್ ಪಟೇಲ ಸಾಬ ಇತ್ಲಾಗ ಬನ್ನಿ. ಹೆದರಬೇಡಿ. ಡರೋಮತ ಸುಬ್ರಾಯರೇ, ಇವರೂ ದೆವ್ವಾ ಅಲ್ಲ, ನಮದೂ ನಿಮದೂ ದೇವ್ರು.

ಪಟೇಲ: ಅಯ್ಯೋ, ಇದೇನು ಯೂಕೂಬ ಸಾಬ್ರೆ ಈ ಅವಸ್ಥೆ!

ಯಾಕೂಬ: ಇದು ನಿಮ್ಮ ಆ ದಾಯಾದಿ ಮಾಡಿದ ಕಿತಾಪತಿ. ಎಲ್ಲಾ ಹೇಳ್ತೆ, ಮೊದಲು ಈ ಬಳ್ಳಿ ಬಿಡ್ಸಿ. ನೀವೇ ನಮ್ಮ ಸರದಾರ ಪಟೇಲ್ರು.

ಪಟೇಲ: ಇರ್ಲಿ ಬಿಡಿ, ಇದಾರು? ಅಯ್ಯೋ ಸುಬ್ರಾಯ ಕಾನಸ್ಟೇಬ್ಲು.

ಸುಬ್ರಾಯ: ಹೌದು ಪಟೇಲ್ರೇ. ನೀವು ದೊಡ್ಡ ದೆವ್ವಾ ಎಂದ್ಕೊಂಡಿದ್ದೆ-ಈ ಮಬ್ಬುಗತ್ತಲಲ್ಲಿ ಆ ಪೊದೆಯಿಂದ ಲಕ್ಕಾಗಿ ಕಪ್ಪಾಗಿ ಎದ್ದು ಬಂದುಬಿಟ್ರೆ?

ಪಟೇಲ: ಇರ್ಲಿ ಬಿಡಿ. ಇದು ಆ ನಾಗಪ್ಪ ಹೆಗಡೆ ಉದ್ರಾಟವೋ?

ಯಾಕೂಬ: ದೇಖೋ ಪಟೇಲ ಸಾಬ, ಆ ತೆಗ್ಗಿನ ಮನೆ ದಾಯಾದಿಗೆ ಏನಾದ್ರೂ ಮದ್ದ ಅರೇಲೇ ಬೇಕು, ಏನ್ರಿ ಸುಬ್ರಾಯ?

ಸುಬ್ರಾಯ: ನಮ್ಮ ಪಟೇಲರ್‍ರ್‍ರ್‍ರೋ, ಹಾರೂ ಹಕ್ಕಿಗೆ ಮಸಾಲೆ ಅರೆಯೋ ಕದೀಮರು-ಹೌದ್ರೋ ಅಲ್ಲ್ರೋ?

ಪಟೇಲ: ಇರ್ಲಿ ಬಿಡಿ, ಇರ್ಲಿ ಬಿಡಿ. ಅದೇನ ಕೇಳ್ತಿ? ನಮ್ಮ ಬಲೆಗೆ ಬೀಳ್ದೆ ಇದ್ದ ಹಕ್ಕೀನೆ ಇಲ್ಲ.

ಸುಬ್ರಾಯ: ನಮಗ್ಗೊತ್ತಿಲ್ವೆ? ಆ ಕಾಂಗ್ರೆಸ ಸ್ವಯಂಸೇವಿಕೆ ಮಂಜೀನ ನಮ್ಮ ಫೌಜದಾರ ಸಾಹೇಬ್ರಿಗೆ ಗಂಟ ಹಾಕ್ಸಿದ್ದು ಯಾರೆಂದ್ಕೊಂಡ್ರಿ ಹವಾಲ್ದಾರರೇ? ಈ ನಮ್ಮ ಮಂಜಪ್ಪನೊರೆ !

ಯಾಕೂಬ: ನಮಗೆ ಅದೆಲ್ಲಾ ಮಾಮೂಲ, ಪಟೇಲಭಾಯ್ ನೀವು ರುಸ್ತುಂ ಆದ್ಮಿ ಮಂಜೀನೋ ಮಚ್ವೆನೋ! ನಮಗೆ ನೀವೇ ಪಾರ ಮಾಡ್ಬೇಕು. ಈ ಚಳವಳಿ ಸಮುಂದರದೊಳಗೇ ನೀವೇ ನಮದು ಕಫ್ತಾನ.

ಪಟೇಲ: ಇರ್ಲಿ ಬಿಡಿ, ಇರ್ಲಿ ಬಿಡಿ, ಅದೇನ ದೊಡ್ಡ ಮಾತು? ಈ ಪಟೇಲ ಮಂಜಪ್ಪನ ಕೈಯಾದ್ರೂ ನೋಡ್ರಿ. ಎಂಥೆಂಥವರನ್ನು ಮಣ್ಣು ಮುಕ್ಸಿ ಚಚ್ಚಿದ್ದೇನೆ. ಜೇಲಿಗೆ ಅಟ್ಟಿದ್ದೇನೆ. ಮನೆ ಮಾರು-ದನಕರು ಜಪ್ತ ಮಾಡಿಸಿದ್ದೇನೆ, ಇದಂತೂ ನಮ್ಮ ದಾಯಾದಿಗೆ ಮೆಟ್ಟುವ ಸವಾಲು. ಆ ತೆಗ್ಗಿನಮನೆ ನಾಗಪ್ಪನ ತಗ್ಗು ತೋಡಿ ಹುಗಿದು ಹಾಕದಿದ್ದರೆ ಹವಾಲ್ದಾರರೇ ನೋಡಿ, ನಾ ಉಚ್ಚಿಲೇ ಈ ಮೀಸೆ ಬೋಳ್ಸ್ತೆ!

ಯಾಕೂಬ: ಭೇಷ ಭೇಷ ಹಾಗಾದ್ರೆ ಈ ವರ್ಷ ಜಮಾಬಂದಿಗೆ ಕಲೆಕ್ಟರ ಸಾಬ ಬಂದಾಗ ಅವರ ಕೈಯಿಂದ ನಿಮಗೆ ಶೇಕ ಹ್ಯಾಂಡ ಕೊಡಸ್ತೇ. ಆ ಜವಾಬದಾರಿ ನಮ್ಮದು, ಈ ಯಾಕೂಬ ಖಾನಂದು,

ಪಟೇಲ: ಇರ್ಲಿ ಬಿಡಿ. ಈ ಚರ್ಚೆ ಈ ನಡುಕಾಡಲ್ಲಿ ಬ್ಯಾಡ್ರಾ. ನಮ್ಮನೇಗೆ ಹೋಪ್ಪಾ, ಅಲ್ಲಿ ಯೋಚ್ನೆ ಮಾಡವಾ. ನಾಗಪ್ಪ ಹೆಗಡೆ ನಾಗರ ಪಂಚಮಿದು, ಬನ್ನಿ. (ನಗುತ್ತ ನಿಷ್ಕ್ರಮಣ)

೩

ನಿವೇದಕ: (ನಾಗಪ್ಪ ಹೆಗಡೆಯವರಲ್ಲಿ ಒಂದು ರಾತ್ರೆ. ಆಪ್ತಾಲೋಚನೆ ಹೆಗಡೆಯವರು ಅವರ ಹೆಂಡತಿ ನಾಗವೇಣಿ ತಮ್ಮ ಸುಬ್ಬಣ್ಣ ಅವನ ಹೊಸ ಹೆಂಡತಿ ಸುಬ್ಬಿ ಎಲ್ಲ ಚರ್ಚೆ ನಡೆಸಿದ್ದಾರೆ, ಜೇಲಿಗೆ ಹೋಗುವ ಮೊದಲು ಏನು ಮಾಡಬೇಕು-ಎಂದು)

ಸುಬ್ಬಣ್ಣ: ನಾಗಪ್ಪಣ್ಣ, ಇನ್ನೂ ಮೀನವೇಷ ಮಾಡ್ತಾ ಕೂತ್ರೆ ಆಗ್ದಾ. ಬೆಳಗುಂಝಾವಕ್ಕೆ ಪೋಲಿಸ್ರು ಬತ್ತೊ ಎರೆಸ್ಟ ಮಾಡೂಲೆ. ಜಪ್ತ ಮಾಡೂಲೆ ಅಲ್ವೇನೆ ಸುಬ್ಬಿ?

ಸುಬ್ಬಿ: ಹೌದೆ ಸೈ, ನೀರಿಗೆ ಹೋದಾಗ ದೇವಿ ಸಿಕ್ಕಿದ್ಲು. ಅವಳು ಅಂದ್ಲು ಅವಳಿಗೆ ಇದೆಲ್ಲಾ ಹೇಂಗೆ ಗೊತ್ತಾಗ್ತೋ ಏನೋ?

ನಾಗಪ್ಪ: ಅವಳು ಒಳ್ಳೇ ಮನಸ್ಸಿ, ಹೆಸರಿಗೆ ತಕ್ಕ ದೇವಿ. ಹಸಲ್ರ ಜಾತೀಲೆ ತಪ್ಪಿ ಹುಟ್ಟಿದ್ದು.

ನಾಗವೇಣಿ: ಹೌದು ಸುಬ್ಬಿ, ದಿನಾ ಸ್ನಾನಮಾಡಿ, ತುಳಸೀ ಪೂಜೆ ಮಾಡ್ತು. ಮಾದೇವಿಯೇ ಆಕಿ!

ಸುಬ್ಬಣ್ಣ: ಅದ್ಬಿಡು ಅತ್ತಿಗೆ, ಆ ದೇವಿ ಕಾಂಗ್ರೇಸ ಕರಪತ್ರಾ ಊರ ಊರು ಹಂಚೂಲೆ ಹೋಗ್ತಂತೆ.

ಸುಬ್ಬಿ: ಅದ್ಹೇಂಗೆ ಸಿಕ್ ಬೀಳ್ತಿಲ್ಲೆ?

ಸುಬ್ಬಣ್ಣ: ಹೆಡ್ ಹೆಣ್ಣೆ, ದೇವಿ ನಿನಗಿಂತ ಜಾಣೆ, ವಾಲೆ ಕೊಡೇಲಿ ಗರಿ ಒಳಾಗೆ ಸಿಕ್ಸಿಕೊಂಡು ಕರಪತ್ರ ತಕ್ಕೊಂಡು ಹೋಗ್ತು, ನಾ ಪ್ರತ್ಯಕ್ಷ ಕಂಡಿದ್ನೇ.

ನಾಗಪ್ಪ: ಅದಿರ್ಲಿ ತಮ್ಮಾ, ಈ ದೇವಿ ಮಹಾತ್ಮೆ ಈಗ ಬೇಡ,

ಸುಬ್ಬಣ್ಣ: ಅಣ್ಣಾ, ಆ ಪಟೇಲ ಮಂಜಪ್ಪ ಹೊಲೆಯ....

ನಾಗಪ್ಪ: ಹಾಂಗೆಲ್ಲ ಬಯ್ಯ್ಬ್ಯಾಲೆ ಆಗ, ಸುಬ್ಬಣ್ಣ, ಅವನ ಡ್ಯೂಟಿ ಅಂವ ಮಾಡ್ತಾ. ಪಾಪ ಮಕ್ಕಳೊಂದಿಗ. ಸರಕಾರ್ದ ಮರ್ಜಿ ಸಂಭಾಳಿಸಿ ನಾಕ್ಕಾಸು ಸಂಪಾದ್ಸಲಿಕ್ಕೆ ಇದೇ ವೇಳೆ, ಅಲ್ವೇನೇ ನಾಗವೇಣಿ?

ನಾಗವೇಣಿ: ಹೌದು ಮತ್ತೇ ಮೂರು ಮಂದಿ ಹೆಣ್ಣು ಮಕ್ಕಳು ಬ್ಯಾರೆ ಲಗ್ನಕ್ಕ ಬೆಳೆದು ನಿಂತೂ: ಅಂದ ಮ್ಯಾಲೆ ಮತ್ತೇನ ಮಾಡ್ತಾನ ಪಾಪ!

ಸುಬ್ಬಣ್ಣ: ಸರಿ ಸೆಗಣೆನೇ ತಿಂತ್ಸಾ ತಿನ್ಕೊಳ್ಳಿ, ಪಾಪ.

ಸುಬ್ಬಿ: ಇದೇನೂ ಅಂದೆ, ಮಾಡ್ದೋರಾ ಪಾಪ ಆಡ್ದೋರ ಬಾಯಲ್ಲಂಬಂಗೆ, ನಮಗೇಕೆ ಬೇಕು. ಅವರವರ ಪಾಪಕ್ಕೆ ಅವರವರೇ ಗುರಿ ಅಲ್ದಾ? ಪಟೇಲ್ರಿಗೆ ಹೊಲೆಯ ಅಂದ್ರೆ ಆ ಬಡ ಹೊಲೆಯರಿಗೆ ಅಸಮಧಾನ.

ಸುಬ್ಬಣ್ಣ: ಭಪ್ಪರೆ ಹೆಣ್ಣು, ಮುತ್ತಿನಂಥ ಮಾತಾಡ್ದೆ, ನನ್ನ ಸುಬ್ಬಿ. ಅದಿರಲಿ

ಮುಂದೇನು ಅಣ್ಣಾ?

ನಾಗಪ್ಪ: ಮುಂದೇನೂ ಇಲ್ಲ. ಆ ಪಟೇಲ ನಾವೇ ತೀರ್ವೆ ಕೊಡ್ಲಿಲ್ಲ ಎಂದು ಜಪ್ತಿ ವಾರಂಟ ತರೂಲೆ ಹೋಜ್ಯಾ ಅಂದಾಯ್ತು. ನಮಗೂ ಹಾಕೋ ತಜವೀಜು ಅವಂದು, ಅದಕ್ಕೂ ಮುಂಚೆ ನಮ್ಮ ಚಿನ್ನ ಬೆಳ್ಳಿ ನಗ ನಾಣ್ಯ ಎಲ್ಲ ಈ ಚರಿಗೇಲಿ ತುಂಬಿಟ್ಟಿದ್ದೇನೆ. ಅದನ್ನು ಎಲ್ಲಾದರೂ ಭದ್ರವಾಗಿ ಇಡೊ!

ಸುಬ್ಬಿ: ಅದನ್ನು ಯಾರು ಕಾಯೋ? ಅತ್ತಿಗೆ ನಾವೆಲ್ಲ ಜೇಲಿಗೆ ಹೋಪೋರು

ನಾಗಪ್ಪ: ನಾವೆಲ್ಲ ಹೋಪೂದಲ್ಲ, ಈ ನಿನ್ನ ಗಂಡ ಹೊರಗೆ ಉಳಿಯೋಂವ

ಸುಬ್ಬಣ್ಣ: ಊಹೂಂ, ನಾನೂ ಜೇಲಿಗೇ ಬರೋವನೇ.,

ನಾಗಪ್ಪ: ಹಾಗಲ್ಲ ತಮ್ಮಾ ನೀನು ಬರೋ, ಆದರೆ ಸದ್ಯ ಹೊರಗೇ ಇರೋ ಆ ಚಿನ್ನದ ಚರಿಗೇನ ಕಾಪಾಡೋ, ಇದೆಲ್ಲ ಚಿನ್ನ ನಮದೇ ಅಲ್ಲ ಆಚೆ ಈಚೆ ಮನೆಯವರೂ ನಮ್ಮಲ್ಲಿ ಇಟ್ಟದ್ದುಂಟು. ಅವರೆಲ್ಲ ಜೇಲಲ್ಲಿ ಇದ್ದಾರೆ. ಅವರು ಬಂದ ಮೇಲೆ ಅವರ ಚಿನ್ನ ಅವರಿಗೆ ಒಪ್ಪಿಸೋ ಆ ಕರ್ತವ್ಯ ದೊಡ್ಡದು.

ನಾಗವೇಣಿ: ಅಣ್ಣ ಹೇಳಿದ್ದು ಕೇಳು ಸುಬ್ಬ. ಈ ಬಂಗಾರ ಕಾಯೋದೂ ಜೇಲಿಗೆ ಹೋದಷ್ಟೇ ದೊಡ್ಡ ಕೆಲಸ, ದೊಡ್ಡ ಸೇವೆ.

ಸುಬ್ಬಣ್ಣ: ಸರಿ ಒಪ್ದೆ. ನಿಮ್ಮಂತೆ ಒಪ್ದೆ. ಆದರೆ ನಾನೊಬ್ಬನೇ ಹೊರಗೆ ಇರೋದು ಹೇಗೆ?

ನಾಗಪ್ಪ: ಹಾಗೆಂದ್ರೇನೋ ಸುಬ್ಬು?

ಸುಬ್ಬಿ: ಹಾಗಂದ್ರೆ ನಂಗೊತ್ತು, ನಾನೂ ಅವ್ರ ಸಂಗ್ಡ ಹೊರಗೆ ಇರೋ ಎಂತ ಆದ್ರೆ ಅದೇನೂ ಸಾಧ್ಯ ಇಲ್ಲೆ. ಅತ್ತಿಗೆ ಇದ್ದಲ್ಲಿ ನಾನು. ಆ ಚಿನ್ನ ಕಾಯೋ ಕೆಲಸ ಗಂಡ್ಸಿಂದು. ನಾ ಹೊರಗಿದ್ದರೆ ನೀಂವ ಹೆಣ್ತೀನ ಕಾಯೋರೋ ಈ ಚಿನ್ನ ಕಾಯೋರೋ?

ನಾಗಪ್ಪ: ಶಾಭಾಸ ಸುಬ್ಬಿ, ಚಿನ್ನದಂಥ ಮಾತ ಆಡ್ದಿಯಲ್ಲೆ. ಸುಬ್ಬಣ್ಣ ನಿನ್ನ ಹೆಂಡತಿ ಹೇಳಿದ್ದು ಹೌದೆನ್ನು. ಕೆಲಸಕ್ಕೆ ಬೇಕಾದಷ್ಟೇ ಜನ ಹೊರಗಿರೋದು, ಅದೂ ಕೆಲಸ ಮುಗ್ಯೂತನಕ. ಇದು ಮಹಾತ್ಮರ ಆಜ್ಞೆ. ನಿನ್ನ ಕೆಲ್ಸ ಈ ನಿಧಿ ಕಾಯೋದು. ಎಂಥ ಪ್ರಸಂಗ ಬಂದ್ರೂ ಇದನ್ನು ಕಾಪಾಡೋದು

ನಾವು ತಿರುಗಿ ಬರೊತನಕ ತಿರುಗಿ ಬಂದರೆ,

ಸುಬ್ಬಣ್ಣ: ಅಣ್ಣಾ, (ಗದ್ಗದ) ಹಾಗನ್ನಬೇಡ, ಹಾಂ ಹಾಂಗ, ಅನ-ಅನ-ಬ್ಯಾಡಾ, ನೋಡ ಅತ್ತಿಗೆ....

ನಾಗವೇಣಿ: ಛೇ ಛೇ ಕಣ್ಣ ಒರಸ್ಕೋ. ಕಣ್ಣೀರ ಬಿಡೂ ಕಾಲ ಅಲ್ಲಿದು. ಅಲ್ಲಾಂದ್ರೆ ಸುಬ್ಬಣ್ಣಂಗೆ ತುಸು ಧೈರ್ಯ ಕೊಡಿ.

ನಾಗಪ್ಪ: ಅಂವ ನನ್ನ ತಮ್ಮ ನನಗಿಂತ ಅವನೆದೆ ಗಟ್ಟಿ. ಸುಬ್ಬು, ಮಧ್ಯ ರಾತ್ರಿ ಮೀರ್ತು, ಈ ಚರ್ಗ ಎತ್ಕೊಂಡು ಹಿತ್ತಲದಣಪೆ ದಾಟಿ ಬೆಟ್ಟದ ಹಾದಿ ಹಿಡಿ. ಮೈಸೂರ ಗಡಿಸೇರು. ತಡಗಣೀಲಿ ನಮ್ ಸತ್ಯಾಗ್ರಹ ಶಿಬಿರ ಇದ್ದು. ಅಲ್ಲಿಗೆ ಹೋಗು. ಹೂಂ ಹೊರಡು ತಮ್ಮ

ಸುಬ್ಬಣ್ಣ: ಅಣ್ಣ.. ಅತ್ತಿಗೆ ನಮಸ್ಕಾರ

ನಾಗಪ್ಪ: ನಾಗವೇಣಿ: ದೇವರು ನಿನ್ನ ಕಾಪಾಡಲಿ.

ಸುಬ್ಬ: ನಿಲ್ಲಿ ನಂಗೂ ಆಶೀರ್ವಾದ ಕೊಡಿ....ಆರೋಗ್ಯ, ನೋಡಿಕೊಳ್ಳಿ, (ಹೋಗುವನು, ಕ್ಷಣ ಸ್ತಬ್ದ, ಕದ ತಟ್ಟುವ ಸದ್ದು)

ನಾಗವೇಣಿ: ಅದೊ ಫೌಜದಾರರ್ರು ಬಂದ್ರಕ್ಕ.

ನಾಗಪ್ಪ: ಹೋಗು ಸುಬ್ಬಿ, ಕದ ತೆಗಿ.

ನಾಗವೇಣಿ: ಬೇಡ್ದೆ, ನಾನೇ ತೆಗೆತೆ (ಕದ ತೆರೆದ ಸದ್ದು, ಫೌಜದಾರ ಪೋಲಿಸರ ಬರುವ ಬೂಟಿನ ಸದ್ಧು)

ಫೌಜದಾರ: ಸಲಾಂ ನಾಗಪ್ಪ ಹೆಗಡೇರೆ,

ನಾಗಪ್ಪ: ಯಾರು? ಎಲಾ ದಾವೂದ ಸಾಬ್ರೇ? ತಾವಿಲ್ಲಿ!

ದಾವೂದ: ನಂಗೇ ತಾವು ನೀವು ಅನ್ನ ಬ್ಯಾಡಿ. ಎಲ್ಲ ತಮ್ಮದಯೆ ಉಪ್ಪುಂಡ ಜವಾನ ನಾನು. ಆಜದರೆ ಈಗ ಉಂಡ ಮನೆಗಳ ಎಣಿಸಲಿಕ್ಕೆ ಬಂದಿದ್ದೀನಿ, ಹನ್ನೆರಡು ವರುಷಗಳ ಹಿಂದೆ ನೀವು ಮಾಡಿದ ಸಹಾಯ.....

ನಾಗಪ್ಪ: (ನಕ್ಕು) ಹೌದೌದು. ನಾಗಪುರ ಸತ್ಯಾಗ್ರಹದ ಕಾಲ ಅದು ಆಗ ನಮ್ಮ ವಿರುದ್ಧ ನಿಮ್ಮ ರಿಪೋರ್ಟ ನಾನೇ ಬರಕೊಡ್ತಿದ್ದೆ.

ದಾವೂದ: ಆ ನಿಮ್ಮ ಮೆಹರ್ಬಾನಿಯಿಂದೇ ಈಗ ನನ್ನ ನಸೀಬ ಖುಲಾಯಿಸ್ತು, ಫೌಜದಾರ ಆಗಿದ್ದೇನೆ. ಆದರೆ ಈಗಲೂ ನಾ ಹೆಬ್ಬೆಟ್ಟಿನ ಗುರ್ತಿನ ಹೈದನೇ. ಯಾಕೂಬ ನಿಂತೆ ಏನು ಮಿಕಿ ಮಿಕಿ ನೋಡ್ತಿ? ಹೊಡಿ ಸಲಾಂ ಹೆಗಡೇರಿಗೆ, ಹೆಗಡ್ತೀರಿಗೆ.

ನಾಗಪ್ಪ: ಅದಿರಲಿ ನಮ್ಮನ್ನು ಅರೆಸ್ಟ ಮಾಡ್ಕೊಂಡು ಹೋಗ್ರಿ.

ದಾವೂದ: ಮಾಫ ಮಾಡ್ರಿ ನಾಗಪ್ಪ ಹೆಗಡೆಯವರೆ-

ನಾಗಪ್ಪ: ನಿಮ್ಮ ಡ್ಯೂಟಿ ಅದು ನೀವು ಮಾಡ್ರಿ. ವಾರಂಟ ಇದೆಯೋ? ಆದ್ರೆ ಅದೆಲ್ಲಾ ನಿಮಗೆ ಬ್ಯಾಡಾ ಅನ್ನಿ.

ದಾವೂದ: ಯಾಕೂಬ, ಹೆಗಡೇರಿಗೆ ವಾರಂಟ ತೋರ್ರ್ಸು.

ಯಾಕೂಬ: ಫೌಜದಾರ ಸಾಬ, ಒಬ್ಬ ಇಸಮ ಗೈರ ಹಾಜರ. ಸುಬ್ಬಣ್ಣ ಹೆಗಡೆ ಇಲ್ಲ.

ದಾವೂದ: ಇಲ್ಲಾದ್ರೆ ಬಿಡು. ಏ ಇವರನ್ನೆಲ್ಲ ಮರ್ಯಾದೆಯಿಂದ ಹೊರಗೆ ಗಾಡೀಲಿ ಒಯ್ದು ಕೂಡ್ರಿಸು. ಮನೆ ಜಪ್ತಿಗೆ ಆಳು ಒಳಗೆ ಕಳಿಸು ಸರಿ ಬಂದೋಬಸ್ತು ಮಾಡು. ತಿಳಿತೇನು? ಸುಬ್ಬಣ್ಣ ಹೆಗಡೆ ಫರಾರಿ ಎಂದು ರಿಪೋರ್ಟು ಮಾಡುತ್ತೇನೆ.

ನಾಗಪ್ಪ: ಅಂದ್ರೆ ನಾನೇ ಬರಕೊಡಬೇಕೋ ಮತ್ತೆ?

ದಾವೂದ: ಅದಂತೂ ತಪ್ಪಿದ್ದೇ ಆಲ್ಲ ಹೆಗಡೇರೆ. (ನಗು)

ನಿವೇದಕ: (ನಾಗಪ್ಪ ಹೆಗಡೆಯವರಿಗೂ ಅವರ ಮನೆಯವರಿಗೂ ಎರಡು ಎರಡೂವರೆ ವರ್ಷ ಶಿಕ್ಷೆ ಆಯಿತು. ಈ ನಡುವೆ ತಮ್ಮ ಸುಬ್ಬಣ್ಣನೂ ಸ್ವಯಂಸೇವಕನಾಗಿ ಕೆಲಸ ಮಾಡುತ್ತಿದ್ದಾಗ ಪೋಲಿಸರ ಕೈಗೆ ಸಿಕ್ಕು ಜೇಲಿಗೆ ಹೋದನು. ಆದರೆ ಈ ಮೊದಲೇ ಕುಟುಂಬದ ಚಿನ್ನದ ಚರಿಗೆಯನ್ನು ಭದ್ರವಾಗಿ ಹೂಳಿಟ್ಟಿದ್ದನು. ಅಣ್ಣ ತಮ್ಮಂದಿರು ವಿಸಾಪುರ ಜೇಲಿನಲ್ಲಿ ಬೆಟ್ಟಿಯಾದರು)

ನಾಗಪ್ಪ: ಅರೇ ಸುಬ್ಬಣ್ಣ, ನೀ ಇಲ್ಲೆಲ್ಲಿ ಬಂದೆ? ನಿಂಗೆ ಹೇಳಿದ್ದೇನು? ನೀ ಮಾಡಿದ್ದೇನು?

ಸುಬ್ಬಣ್ಣ: ಹೇಳಿದ್ದೆಲ್ಲ ಮಾಡೇ ಬಂದೆ ನಾಗಪ್ಪಣ್ಣಾ. ಆ ಚಿನ್ನದ ಚರಿಗೆ ಬೆಟ್ಟದಲ್ಲಿ ಅಬ್ಬಿ ನೀರು ಬೀಳ್ವಲ್ಲಿ ಆಳ ತೆಗೆದು ಹುಗಿದಿಕ್ಕಿ ಬಂದೆ.

ನಾಗಪ್ಪ: ಆದ್ರೂ ನೀ ಬರಬಾರದಾಗಿತ್ತೋ.

ಸುಬ್ಬಣ್ಣ : ಎಲಾ ಇವನಾ. ನಾನಾಗಿ ಬಂದ್ನಾ? ಪೋಲೀಸ್ರು ಹಿಡಕೊಂಡು ತಂದ್ರು. ನಾ ಕಾಂಗ್ರೆಸ ಕೆಲಸ ಮಾಡ್ತಿದ್ದೆ. ನನ್ನ ಪುಣ್ಯ ಅನ್ನೂ. ನಿನ್ನನ್ನೂ ಕಂಡೆ.

ನಾಗಪ್ಪ: ನಾವು ನಾಕು ಜೇಲು ನೀರು ಕುಡಿದಾಯ್ತು, ನಾ ಒಂದು ಕಡೆಗೆ ನಿನ್ನ ಅತ್ತಿಗೆ, ಸುಬ್ಬಿ ಒಂದ್ಕಡೆ, ಕಾರ್ವಾರ ಆತು, ಹಿಂಡಲ್ಗಿ ಆತು, ರತ್ನಾಗಿರಿ ಆತು, ಯರೊಡೆ ಆತು ಈಗ ವಿಸಾಪುರಕ್ಕೆ ಬಂಜ್ಯೋ.

ಸುಬ್ಬಣ್ಣ: ಅವರೆಲ್ಲಿ?

ನಾಗಪ್ಪ: (ನಕ್ಕು) ಅವ್ರು ಅಂದರೆ ಅವಳು ಅನ್ನು. ನಿನ್ನ ಸುಬ್ಬಿ ಅಕೋ ಆಚೆ ಬರಾಕಿನಲ್ಲಿ ಇದ್ದು, ನಿನ್ನ ಅತ್ತಿಗೆನೂ ಅಲ್ಲೇ. ಇಲ್ಲಿ ಗಂಡ್ಸರ ಕೋಣೆ ಬೇರೇ, ಹೆಂಗ್ಸರದು ಬೇರೆ.

ಸುಬ್ಬಣ್ಣ: (ನಿಟ್ಟುಸಿರೆಳೆದು) ಹೀಗೋ ಸರಿ.

ನಾಗಪ್ಪ: (ನಕ್ಕು) ಹಾಗಾದ್ರೆ ನೀ ತಿರುಗಿ ಹೋಪುಲೆ ಅಡ್ಡಿ ಇಲ್ಲಾ ಅನ್ನು. ನಿನ್ನ ಶಿಕ್ಷೆ ಎಷ್ಟು? ನಂದು-ನಮದು ಎರಡೂವರೆ ವರ್ಷ.

ಸುಬ್ಬಣ್ಣ: ನಂದು ಆರು ತಿಂಗಳು ಮಾತ್ರ. ಈಗಲೆ ಮೂರು ತಿಂಗಳ ಮುಗೀತಾ ಬಂತು.

ನಾಗಪ್ಪ: ಆಗಲಪ್ಪಾ ಆಗೋದೆಲ್ಲಾ ಒಳ್ಳೇದೆ. ಬೇಗ ಬಿಟ್ಟು ಹೋಗಿ ನಮ್ಮ ನಿಧಿ ನೋಡ್ಕೊ.

ಸುಬ್ಬಣ್ಣ: ಅದ್ರ ಚಿಂತೆ ಬಿಡು. ಆ ಚರಿಗೆ ಇಷ್ಟು ಭದ್ರವಾಗಿ ಹೂಳಿಟ್ಟಿದ್ದೆ. ನಾಳೆ ನಂಗೇ ಅದೆಲ್ಲುಂಟೆಂದು ಪತ್ತೆ ಹತ್ತೋದೆ ಕಷ್ಟ!

ನಾಗಪ್ಪ: ಹಾಗೆನ್ನಬೇಡೋ ಮೂರ್ಖಾ. ಅದಕ್ಕೇ ಮಾರಾಯಾ ನಿಂಗೆ ಹೇಳಿದ್ದೆ. ತಡಗಣೇಲಿ ಒಯ್ದಿಡು ಎಂದು. ನೀ ಕೇಳಲೇ ಇಲ್ಲ.

೪

ನಿವೇದಕ: ನಡುರಾತ್ರಿ ಕಳೆದಿದೆ. ಬಿರುಗಾಳಿ ಮಳೆ ಗುಡುಗು ಮಿಂಚಿನ ಸದ್ದು ಕಡಿಮೆಯಾಗುತ್ತ ಬರುತ್ತದೆ. ಕೋಳಿ ಕೂಗುತ್ತದೆ, ದೇವಿ ಮನೆಯಲ್ಲಿ ಫಕೀರ ಎದ್ದು ಅಳುತ್ತಾನೆ.

ದೇವಿ: ಯಾಕೋ ಫಕೀರಾ, ಯಾಕೆ ಮರಿ ತೀಡ್ತೆ?

ಫಕೀರಾ: ತಿಂ-ಬೂ-ಲೆ! ಹೊಟ್ಟೆ ಹಚಿವೆ.

ದೇವಿ: ಅಯ್ಯೋ ಈಗೆಲ್ಲಿಂದ ಕೊಡ್ಲ್ಯೋ? ಬೆಳಗಾಗ್ಲಿ ಬಿರೀನೆ ತಂದು ಕೊಡ್ತಿ.

ಫಕೀರಾ: ಏ-ನು?

ದೇವಿ: ಏನು ಬೇಕು ನಿನಗೆ?

ಫಕೀರಾ: ಮರಕೆಸೂ ಪತ್ರೋಡೆ.

ದೇವಿ: ಹೂಂ, ಆತು. ಅದನ್ನೇ ಮಾಡಿಕೊಡ್ತೆ.

ಫಕೀರಾ: ಕೇಸು ಹ್ಯಾಂಗೆ ತರ್ತೆ?

ದೇವಿ: ಮರ ಹತ್ತಿ ತರ್ತೆ.

ಫಕೀರಾ: ನಿಂಗೆಲ್ಲಿ ಮರ ಹತ್ತೂಲೆ ಬತ್ತು?

ದೇವಿ: ಬರ್ದೆ ಏನು?

ಫಕೀರಾ: ಹಾಗಾದ್ರೆ ಈಗ ಮನೆ ಕೋಳ ಹತ್ತಿ ಕಾಣ್ಸು.

ದೇವಿ: ಹೋಗ ಮಂಗ್ಯಾ, ಸುಮ್ಮನೆ ಮಕ್ಕೊ. ಅಂಥ ಹೊತ್ತು ಬಂದ್ರೆ ಮರಾನೂ ಹತ್ತತೆ. ಕೋಳಾನೂ ಹತ್ತತೆ.

ಫಕೀರಾ: (ಮತ್ತೆ ಅಳು)

ದೇವಿ: ಚ ಚ ಚ ಮಕ್ಕೊಳೊ ಸುಮ್ಮಗೆ ಮಕ್ಕೊ.

ಫಕೀರಾ: ಹೊಟ್ಟೇಲಿ ಸಂಕ್ಟ. ಅಮ್ಮಾ ಹಶೂ ಬ್ಹಾಳಾ.

ದೇವಿ: ಅಲ್ಲೋ ನೀ ಗಂಡು ಹುಡುಗ, ಆ ಲಕ್ಷಮ್ಮ ನೋಡು.

ಫಕೀರಾ: ಯಾರು?

ದೇವಿ: ಆ ದಿನ ಶಿವರಾತ್ರಿ ಹಬ್ಬದ ಸಂತೇಲಿ ಮಿಠಾಯಿ ಕೊಟ್ರಲ್ಲ ಅವ್ರು.

ಫಕೀರಾ: ಹಾಂ! ಅವರೇನು?

ದೇವಿ: ಅವರು ಮೂವತ್ತು ದಿನಾ ಹಗಲು ರಾತ್ರಿ ಉಪಾಸಾ ಮಾಡ್ದ್ರು.

ಫಕೀರಾ: ಮೂವತ್ತು ದಿನಾ?

ದೇವಿ: ಹುಂ ಮೂವತ್ತು ದಿನ. ಒಂದು ಅಗಳ ಅನ್ನಾ ಮುಟ್ಟಿಲ್ಲಾ. ಆ ಗಾಂಧಿ ಅಜ್ಜ ಅವರು ಇನ್ನೂ ಮುದುಕ್ರು. ಎಷ್ಟು ಸಾರೆ ಉಪಾಸಾ ಮಾಡಿದ್ರು ಗೊತ್ತೆ?

ಫಕೀರಾ: ಯಾಕೆ? ಹೊಟ್ಟೆಗಿಲ್ದೆ?

ದೇವಿ: ಹೋಗೋ ಮಳ್ಳಾ, ನಮ್ಮ ಸಲುವಾಗಿ. ಮೇಲಿನ ಜಾತಿ ಮಂದಿ ನಮ್ಮನ್ನು ತಮ್ಮವರಂತ ತಿಳಕೋಬೇಕಂತ, ಮುಟ್ಕೊಳ್ಳ ಬೇಕೂ ಅಂತ, ನೀ ಎಳೆ ಹುಡುಗ, ಮೂರುಗಳಿಗೆ ತಡಕೊಳ್ಳಿಕ್ಕೆ ಆಗ್ದಾ? ತುಸು ತಾಳ್ಕೊ.

ಫಕೀರಾ: ಹೂಂ ಅಮ್ಮಾ ನನ್ನ ಅಪಕೊಂಡು ಮಲಗು. ನಿನ್ನ ಎದೆ ಕಾವಿಗೆ ನಿದ್ದೆ ಬತ್ತೀದು.

(ಕ್ಷಣ ಮೌನ, ಆಕಳು ಕೂಗುತ್ತದೆ)

ಫಕೀರಾ: ಯಾಕೆ ಎದ್ದೆ? .

ದೇವಿ ಆ ದನಕ್ಕೆ ಹುಲ್ಲಿಲ್ಲ, ಹೋಗಿ ಹುಲ್ಲು ಕೊಯ್ಕೊಂಡು ಬರ್ತೆ.

ಫಕೀರಾ: ನಂಗೆ ಮಾತ್ರ ತಾಳ್ಕೋ ಹೇಳ್ತೆ.

ದೇವಿ: ನೀ ಬುದ್ಧಿ ಇದ್ದಾವಾ. ಅದು ಹಸು, ಮೂಕ ಪ್ರಾಣಿ.

ಫಕೀರಾ: ಅದಾಗಾ, ನನ್ನೊಟ್ಟಿಗೆ ಮಲಗು. ನಂಗೆ ಕಥೆ ಹೇಳು.

ದೇವಿ: ನೋಡು, ಮೊನ್ನೆ ತಿಗಣಿ ಊರಾಗ ಗದ್ದಲೋ ಗದ್ದಲ. ಹೆಂಗಸ್ರೆಲ್ಲಾ ಉಪವಾಸ ಕುಂತಿದ್ರು. ಸತ್ಯಾಗ್ರಹಾ. ಆಗ ಹೊಲೇರಿಗೆ ಹೆಂಡ ಕುಡಿಸಿ ಅವರ ಭೂ ಬಿಟ್ಟರು. ಆದರೆ ಅವರು ಅದಕ್ಕೆ ಒಪ್ಪಲಿಲ್ಲ. (ಕರು ಕೂಗುತ್ತದೆ)

ಫಕೀರಾ: ಅಮ್ಮಾ ಏಳು, ನನ್ನ ಕೆಂಪಿ ಕೂಗ್ತು. ಪಾಪ ಅದಕ್ಕೆ ಹಶೂ ಆಯ್ತೋ ಏನೋ! ಹೋಗು ಹುಲ್ಲುತಾ.

ದೇವಿ: ಅಲ್ಲೋ ಆಗ ಗೌರಿ ಕೂಗದಾಗ ಬ್ಯಾಡಾ ಅಂದಿ.

ಫಕೀರಾ: ಗೌರಿ ದೊಡ್ಡೋಳು. ನಿನ್ನಾಂಗೆ ಗಟ್ಟಿ. ಕೆಂಪಿ ಪಾಪ ಕರು. ಬೇಗ ಹೋಗಿ ಹುಲ್ಲು ತಂದ್ಹಾಕು. ಹಾಂ ಅಮ್ಮಾ ಮತ್ತೆ ನಂಗೆ ಮರಕೆಸೂ (ಆಕೆ ನಗುತ್ತ ಹೋಗುವಳು)

ೞ

(ನೀರು ಕೊಚ್ಚಿ ಹೋಗುವ ಅಬ್ಬರ. ಕ್ರಮೇಣ ನಸುಕು ಹರಿಯುವ ಸದ್ದು. ಹಕ್ಕಿಗಳ ಸಾವಿರಾರು ಚಿಲಿಪಿಲಿ ಬೆಟ್ಟ ತುಂಬ. ದೂರದ ಗುಡಿಯಲ್ಲಿ ನಾಗಸ್ವರ, ಮಳೆರಭಸ ಕಡಿಮೆ. ಚಿಲಿಪಿಲಿ ಹೆಚ್ಚು)

ದೇವಿ: ಇನ್ನು ಹುಲ್ಲು ಹೊರಿ ಹೊತ್ಕೊಂಡು ಮನೆಗೆ ಹೋಗೂದು. ಕೆಸೂನೂ ಕಿತ್ಕೊಂಡಾತು. ಪಾಪ ಪೋರ ಹಶೂ ಹಶೂ ಎಂತ ಬಾಯ್ಬಿಡತಾನೆ (ಕೈ ಕಾಲು ತೊಳಕೊಂಡು)-ಅರೇ ಎಂಥ ಜೋರು ನೀರು! ದೊಡ್ಡ ಹೊಂಡಾನೆ ಆಗಿದೆ. ಆಂ ಇದೇನು? ಲಕಲಕ ಹೊಳೀತದೆ. ಚರಿಗೆ ತಾಮ್ರದ್ದು. ಭಾಳ ಬಾದಿ. ಓಹೋ ಓಹೋ! ಇದೇ ತೆಗ್ಗಿನ ಮನೆಯ ಚಿನ್ನದ ಚರಿಗೇನೇ ಇರಬೇಕು! ಇಲ್ಲೆಲ್ಲೋ ಹುಗಿದಿಟ್ಟಿದ್ರು ಅಂತ ಕಾಣತದೆ. ಹಳ್ಳಕ್ಕೆ ಬಳ್ದು ಬಂತು. ಏನ್ಮಾಡ್ಲಿ? (ಪೋಲಿಸರ ಹುಸಿಗುಂಡು) ಅಯ್ಯಪ್ಪಾ ಪೋಲಿಸ್ರ ಗುಂಡು. ಇತ್ಲಾಗೇ ಹಾರಸ್ತಾ ಬರ್ತಾರೆ. ಅವರು ಇದೆಲ್ಲ ನೋಡಿದ್ರೆ ಮುಗಿದೇ ಹೋಯ್ತು. ಅವರು ಬರೂ ಮುಂಚೆ ಮುಚ್ಚಿಡಬೇಕು. ಚೂಳಿಲಿ ಹಾಕಿ ಮನೆಗೆ ತಕ್ಕೊಂಡ್ ಹೋಗ್ತೆ.

(ದೇವಿ ಹಾಗೆ ಮಾಡಲು ಹೊರಟಾಗ ಯಾಕೂಬ ಸುಬ್ರಾಯ ಬರುತ್ತಾರೆ)

ಯಾಕೂಬ: (ಆಕಳಿಕೆ) ಏ ಮುದ್ಕಿ, ಯಾರಬೇ ನೀನು?

ದೇವಿ: ನಾ...ನಾನ್ರೀ....ಹಸಲ್ರ ದೇವಿ.

ಸುಬ್ರಾಯ: ದೇವಿನಾ, ಈ ನಸಕಿಗೆ ಇಲ್ಯಾಕೆ ಬಂದೆ ಸಾಯಲಿಕ್ಕೆ?

ದೇವಿ: ಹುಲ್ಲು ಕೊಯ್ಯೊಲೆ. ಧಣೇರದ ಹುಲ್ಲ ಚೂಳಿ ಹಾಕ ಬೇಕ್ರಿ.

ಯಾಕೂಬ: ಕ್ಯಾ ಬೇ, ಆ ಬುಡ್ಡಿ ಹತ್ರ ಏನ ಬಡಬಡಿಸ್ತೀಯೋ ಸುಬ್ರಾಯಾ?

ಸುಬ್ರಾಯ: ಹೌದು ಹವಾಲ್ದಾರ್ರೆ, ಈ ಕೆಟ್ಟ ನಸುಕಿಗೆ ಮುದುಕೀ ಮುಸು ನೋಡೋದು ಹಣೇಲಿ ಬರೀ ಬೇಕೇ ನಮಗೆ?

ಯಾಕೂಬ: ಚಲೋ ಗರಮಾ ಗರಮ್ ಚಾ ಕುಡಿವಾ. ಊರಲ್ಲಿ ಹೋಗಿ.(ಹೋಗುವರು)

ದೇವಿ: ಹುಶ್, ಬೆಟ್ಟದಮ್ಮಾ ಬೀಳಿಗಿ ಮಾರಮ್ಮಾ ನೀನೇ ಪಾರಮಾಡ್ದಿ. ಹುಶ್-! ಬೀಳಗಿ ಮಾರೆಮ್ಮಾ ನೀನೆ ಉಳಿಸಿದಿ ಈ ಬಡಜೀವಾ!

ನಿವೇದಕ: ಇತ್ತ ಸುಬ್ಬಣ್ಣ ಬಿಡುಗಡೆ ಆಗಿ ಬಂದ. ಬಂದವನೇ ನೇರವಾಗಿ ನಿಧಿ ಇಟ್ಟ ಜಾಗಕ್ಕ ಹೋದ. ಅಲ್ಲಿ ಕಂಡದ್ದೇನು? ದೊಡ್ಡ ಹೊಂಡ. ಸುಬ್ಬಣ್ಣ ಹೌಹಾರಿ ಭ್ರಮಿಷ್ಠನಂತೆ ಆದರೆ ಆಶ್ಚರ್ಯವೇನು?

ಸುಬ್ಬಣ್ಣ: ಚರಿಗೆ! ನನ್ನ ಚರಿಗೆ! ನಮ್ಮ ಚಿನ್ನ ಹೋಯ್ತು! ಕದ್ದೋಯ್ತು ಮನೆಹಾಳಾಯ್ತು! ಅಯ್ಯೋ ಅಣ್ಣಾ! ಅಯ್ಯೋ ಅತ್ತಿಗೆ! ಅಯ್ಯೋ ಅಯ್ಯೋ ನನ್ನ ಸುಬ್ಬಿऽऽ ನಿಮಗೆ ಈ ಸುಟ್ಟ ಮೋರೆ ಹೇಗೆ ತೋರಿಸಲಿ? ಚಿನ್ನಾ ಕಾಯೂಲೆ ನೆಂಗೆ ಇಟ್ಟಿದ್ರಿ. ನಾ ಮಾಡಿದ್ದೇನು? ಅಯ್ಯಯ್ಯೋ!

೬

ದಾವೂದ: ಅರೇ ಯಾಕೂಬ, ಇದರ ಆ ಇಲ್ನೋಡು ಈ ಪತ್ರ ವಿಸಾಪುರ ಜೇಲಿನಿಂದ ತಿರುಗಿಬಂತು. ನಾಗಪ್ಪ ಹೆಗಡೇರಿಗೆ ಸುಬ್ಬಣ್ಣ ಲಿಖಾಥಾ,

ಯಾಕೂಬ: ಕ್ಯಾ? ಕ್ಯಾಲಿಖಾ?

ದಾವೂದ: ಅರೇ ಸುನೋತೋ. ಸುಬ್ಬಣ್ಣ ಹುಡುಕ್ದಾ ಹುಡುಕ್ದಾ ಬಂಗಾರ ಸಿಗಲಿಲ್ಲ, ಯಾರೋ ಲಪ್ಟಾಯಿಸಿ ಬಿಟ್ಟಿದ್ದಾರೆ!

ಯಾಕೂಬ: ಯಾರವರು? (ಸುಬ್ರಾಯ ಪೇದೆ ಬರುತ್ತಾನೆ).

ಸುಬ್ರಾಯ: ನಂಗೊತ್ತು ಯಾರೂಂತ.

ದಾವೂದ: ಸರಿಯಾಗಿ ಬಂದೆ ಸುಬ್ರಾಯಾ ನಿಂಗೊತ್ತೇ? ಆ ಚಿನ್ನ ಯಾರು ಹೊತ್ತರೋ?

ಸುಬ್ರಾಯ: ಮತ್ತಾರು? ಸುಬ್ಬಣ್ಣನೇ ತಾನೇ ಕಳುವಾಯಿತೆಂದು ಬಯಾನ ಮಾಡಿದ್ದಾನೆ. ಬಡ್ಡೀ ಮಗ.

ದಾವೂದ: ವೋ ಕಿಧರ ರಖಾ? ನಾವೆಲ್ಲ ಹುಡುಕಬೇಕು?

ಸುಬ್ರಾಯ: ಹಸಲರ ಕೇರಿಲಿ.

ಯಾಕೂಬ: ಬರಾಬರಿ ಅವರನ್ನೆಲ್ಲ ಅಡಿವಿಗೆ ಅಟ್ಟಿ, ಬೆತ್ತ ಬೀಸಿ, ಬೆದರಿಕೆ ಹಾಕಿ ಗುಂಡು ಹಾರ್ಸಿ ಬೇವರ್ಶಿಗಳ ಮನೆ ಮಾಡು ಕಿತ್ತು ಬುಡ ಮೇಲ್ಮಾಡಬೇಕು!

ದಾವೂದ: ನಡೀರಿ ಕಾರವಾರದಿಂದ ಜ್ಯಾದಾ ಪೋಲಿಸ ಪಾರ್ಟಿ ತರ್ಸತೇನೆ, ಒಂದು ಕೈ ನೋಡೆ ಬಿಡ್ವಾ, ಹಂ ಕರೆಸೊ ಕಾಯದಾ!

(ಹಸಲರ ಕೇರಿಯ ಕೋಲಾಹಲ:- "ಕೈ ಮುಗಿತೇ ಒಡೆಯಾ ಕಾಲಿಗೆ ಬಿದ್ದೆ ಒಡೆಯಾ", 'ನಂಗೊತ್ತಿಲ್ಲ ಒಡೆಯಾ' 'ಯಾವ ಬೆಳ್ಳಿನೋ ಯಾವ ಬಂಗಾರನೋ', 'ಅಯ್ಯಯ್ಯೋ ದೇವರೇ ಸತ್ತೆವೋ', ಅಯ್ಯೋ ದೇವ್ರೆ' - ನಡುನಡುವೆ ಪೋಲಿಸರ ಗದರಿಕೆ 'ಥೂ ಮುಂಡೇ ಮಕ್ಕಳೇ, ಖರೇ ಹೇಳ್ರಿ' 'ಬದ್ಮಾಷ ಹುಗಿದೇ ಹಾಕ್ತೇವೆ', 'ಕೇರಿಗೆ ಕೇರಿ ಸುಟ್ಟು ಬೂದಿ ಮಾಡಿಬಿಡ್ತೇವೆ',-ಇತ್ಯಾದಿ ಹುಸಿಗುಂಡು ಹಾರಿಸುತ್ತಾರೆ. ಅಡವಿಯ ಕೋತಿಗಳೆಲ್ಲ ಹಲ್ಲು ಕಿರಿದು ಕಚಪಚ ಮಾಡುತ್ತವೆ. ಆನೆಗಳು ಘೀಳಿಡುತ್ತವೆ. ಚಿರತೆ ಗರ್ಜಿಸುತ್ತದೆ. ಬಳ್ಳು ಕೂಗುತ್ತಿವೆ, ಕೋವಿಯ ಸದ್ದುಗಳಿಗೆ ಹೆದರಿ ಹೆಬ್ಬಾವು ಹರಿದಾಡ ಹತ್ತುತ್ತವೆ. 'ಅರೇ ಸಾಂಪ! ಹೆಬ್ಬಾವು ಬಂತು! ಓಡಿ ಅಬ್ಬಬ್ಬಾ ಕಾಳಿಂಗ! ಓಡಿ ಓಡಿ' ಎಂದು ಪೋಲಿಸರು ಬೆಟ್ಟದಿಂದ ಓಡುವಾಗ ಹಸಲರು ಚಪ್ಪಾಳೆ ತಟ್ಟಿ ಕೇಕೆ ಹಾಕುತ್ತಾರೆ. ಹಲಗೆ ಬಾರಿಸುತ್ತಾರೆ. "ಓಡಿ ಓಡಿ! ಜೀವ ಹಿಡಿದು ಓಡಿ ನಮ್ಮ ಬೀಳಗಿ ಮಾರೆಮ್ಮ ಕಾಪಾಡ್ತು!" ಎಂದು ಕೂಗಾಡುತ್ತಾರೆ)

ಫಕೀರಾ: ಅಮ್ಮಾ ನಿನ್ನ ಮೊಕಾ ಹಿಗ್ಗಿ ಹೀರೇಕಾಯಿ ಆಗಿದೆ.

ದೇವಿ: ಹೋಗೋ ಮಳ್ಳು. ಹೀರೇಕಾಯೋ! ಸೋರೇ ಕಾಯೋ! ನಮ್ಮ ಮಂದಿಗೆ ಬಂದ ಸಂಕಟ ಕಳೀತು. ಅದೇ ಒಂದು ಸಂತೋಷ. ಬೀಳಗಿ ಮಾರೆಮ್ಮ ನಮ್ಮ ಕೇರಿ ಕಾಪಾಡಿದ್ಳು.

ಫಕೀರ: ಅಲ್ಲ ಆಗ ನಾ ಒಳಗೆ ಬತ್ತಾ ಅಮ್ಮಾನೀ ಕೋಳ ಹತ್ತಿ ಇಳಿತಾ ಇದ್ದೀ ಕಳ್ಳ ಮೋಳನಾಂಗೆ ಅಲ್ಯಾಕ ಹತ್ತದೆ?

ದೇವಿ: ಎಲಾ ತುಂಟ ನಾ ಮೋಳಾ ನೀ ಬೆಕ್ಕು. ನೋಡಪ್ಪಾ ನೋಡು. ಆ ಹೊತ್ತು ಹೇಳಿದ್ದೇ ಮರ್ತು ಹೋದೆಯಾ? ನಾ ಮರಾನೂ ಹತ್ತತೆ, ಕೋಳಾನೂ ಹತ್ತತೆ ಎಂತ. ನಿನ್ನೆ ಗಾಳಿಗೆ ಮಾಡಿನಲ್ಲಿ ದೊಡ್ಡ ಕಂಡಿ ಬಿದ್ದಿತ್ತು. ಅದು ಸರಿ ಮಾಡೂಕೆ ಮೇಲೆ ಹತ್ತದೆ

ಫಕೀರಾ: ಅಪ್ಪಂಗೆ ಹೇಳಿದ್ರೆ ಅಂವ ಹತ್ತಿದ್ದ.

ದೇವಿ: (ಖಿನ್ನ ದನಿ) ಅಪ್ಪನಿಂದ ಅದೆಲ್ಲಾ ಆಗ್ತಾ? ಮರಿ ನಿನ್ನ ಕಾಯಿಲೆ, ಒಂದಿನಾ ಹೀಂಗೆ ಒಂದಿನಾಹಾಗೆ. ಅಂವ ಹೊರಗೆ ಹೋದಾಗ್ಲೇ ನಾ ಕೋಳ ಹತ್ತಿ ಇಳ್ದೆ. ಅವಂಗ ಮತ್ತ ಹೇಳಬ್ಯಾಡ, ಗನಾಮರಿ ಬೆಲ್ಲಾ ಕೊಬ್ರಿ ಕೊಡ್ತಿ.

ಫಕೀರಾ: ಹಾಂಗಾದ್ರೆ ಮೊದಲು ಕೊಡು.

ದೇವಿ: ಹೂಂ ಲಗೂ ತಿನ್ನು. ಆಮೇಲೆ ನೆಲ ಎಲ್ಲಾ ಸಮಾ ಮಾಡ್ಬೇಕು, ಆ ಪೋಲಿಸ್ರು ಇಡೀ ಮನೆ ಆಗ್ದಗ್ದು ಹಾಕಿ ಹೋದ್ರು.

೭

(ಲುಸಿಂಗ್ಟನ ತಡಸಲು ಸದ್ದು)

ಗೋಪಾಲ: ಶಂಕರಪ್ಪನೋರೆ ಕಾಲು ಜಾರೀತು, ನಿಧಾನ ಬನ್ನಿ

ಶಂಕರ: ಕೈ ಹಿಡಿ ಗೋಪಾಲ. ಈಗ ನಿದಾನ ಮಾಡಿದ್ರೆ ನಡೆವ್ಹಾಂಗೆ ಇಲ್ಲ ಆ ಹುಚ್ಚ ಸುಬ್ಬಣ್ಣ ಈ ಲುಸಿಂಗ್ಟನ ಫಾಲ್ಸದ ಕಡೆಗೆ ಓಡಿ ಬಂದಾನೆಂದು ಕೇಳಿ ಓಡಿ ಬಂದ್ವಿ, ಅವನ್ನ ಇಲ್ಲಿ ಹುಡ್ಕಬೇಕು.

ಗೋಪಾಲ: ಇಲ್ಲಿ ಯಾರೂ ಕಾಣುದಿಲ್ಲ.

ಶಂಕರ: ಸ್ವಲ್ಪ ಕೂಗಿ ನೋಡು.

ಗೋಪಾಲ: ಸುಬ್ಬಣ್ಣ ಹೆಗಡೇರೆ, ಓ ಸುಬ್ಬಣ್ಣ ಹೆಗಡೇರೇ (ಪ್ರತಿಧ್ವನಿ)

ಇಬ್ಬರೂ: ಓ ಸುಬ್ಬಣ್ಣ ಹೆಗಡೆರೇ (ಪ್ರತಿಧ್ವನಿ)

ಶಂಕರ: ಎಲಾ ಗುಂಡಿಗೆ ಹಾರಿ-ಗೀರಿ ಜೀವಕಳಕೊಂಡನೋ ಏನು? ಅದೊ ಅದಾರು ಕೆಳಗೆ.

ಗೋಪಾಲ: (ಮೆಲ್ಲಗೆ) ಶಂಕರಪ್ಪನೋರೆ ದೊಡ್ಡಕ್ಕೆ ಮಾತಾಡಬೇಡಿ, ಅವ ಸುಬ್ಬಣ್ಣನೇ, ನೀರಿಗೆ ಹಾರೂಲೆ ಅನುಮಾನ ಮಾಡ್ತಾ ಇದ್ದಾನೆ. ನಾವು ಹಿಂದಿನಿಂದ ಹೋಗಿ ಅವನ್ನ ಹಿಡೀವಾ.

ಸುಬ್ಬಣ್ಣ: ಹರ ಹರ ಹರ ಮ .....

ಗೋಪಾಲ-ಶಂಕರ: (ಇಬ್ಬರೂ) ... ಮಹಾದೇವ.

ಸುಬ್ಬಣ್ಣ: ಯಾರದು? ಬಿಡಿ, ನನ್ನ ಕೈ ಬಿಡಿ.

**ಗೋಪಾಲ:** ಸುಬ್ಬಣ್ಣ ಹೆಗಡೇರೆ,

**ಸುಬ್ಬಣ್ಣ:** ಯಾರದು? ಬಿಡ್ರಿ, ನನ್ನ ಸಾಯಲಿಕ್ಕೆ ಬಿಡಿ. ಜೀವಂತ ಇಟ್ಟ ಕೊಲ್ಲಬೇಡ್ರಿ.

**ಶಂಕರ:** ಸುಬ್ಬಣ್ಣಾ ಇದೇನು ಹುಚ್ಚಾಟ? ನೀನು ಸ್ವಯಂಸೇವಕ ಸತ್ಯಾಗ್ರಹಿ, ಹತ್ಯಾಗ್ರಹಿ ಅಲ್ಲ.

**ಸುಬ್ಬಣ್ಣ:** ಅದಾರು? ಶಂ....ಕರ...ಪ್ಪನೋರೆ ಕಾಲಿಗ ಬಿದ್ದೆ. ತಪ್ಪಾಯ್ತು ಪ್ರಾಣ ಉಳಿಸಿದ್ರಿ. ಆದರೆ ಮಾನ? (ಅಳುತ್ತ) ಮಾನಾ ಹೋಯಿತ್ರಿ. ಮಾನ ಹೋಯ್ತು. ನನ್ನ ಮೇಲೆ ಘೋರ ಅಪವಾದ ಬಂದಿದೇರಿ.

**ಶಂಕರ:** ನಮಗೆ ಅದೆಲ್ಲಾ ಗೊತ್ತು. ಹೆಗಡೇರೆ ಅಪವಾದ ರಾಮನಿಗೂ ತಪ್ಪಲಿಲ್ಲ ಆದರೆ ನಾವು ಅದನ್ನು ನಂಬುದಿಲ್ಲ.

**ಸುಬ್ಬಣ್ಣ:** ಮೊನ್ನೆ ನನ್ನ ಮಾಂವಾ ನನಗೆ ಮನೆ ಮೆಟ್ಟಿಲು ಹತ್ತೋಕೆ ಕೊಡಲಿಲ್ಲ ನಾ ಕುಟುಂಬದ ಬಂಗಾರಾ ಎತ್ತಿ ಹಾಕಿ ಮಾವನ ಮನೇಲಿ ಇಟ್ಟಿದ್ದ ಎಂದು - ಆ ಪಟೇಲ ಮಂಜಪ್ಪ ಊರ ತುಂಬ ಗುಲ್ಲು ಹಾಕಿದ್ದಾನೆ ಸರಕಾರಕ್ಕೂ ರಿಪೋರ್ಟ ಮಾಡಿದ್ದಾನಂತೆ. ಏನ ಮಾಡ್ಲಿ ಗೋಪಾಲ ಭಟ್ಟರೇ?

**ಗೋಪಾಲ:** ಏನಿಲ್ಲ ಸುಳ್ಳ ಸುಳ್ಳೇ, ಖರೇ ಖರೇನೇ. ಬನ್ನಿ ನಮ್ಮ ಸಂಗಡ.

**ಸುಬ್ಬಣ್ಣ:** ನಾ ಒಲ್ಲೆ. ಊರಿಗೆ ಮೋರೆ ಹೇಗೆ ತೋರಿಸ್ಲೀ? ಮಾನ ಹೋಯ ಪ್ರಾಣ ಯಾಕೆ ಇಟ್ಟುಕೊಳ್ಳೋದು?

**ಶಂಕರ:** ಸುಬ್ಬಣ್ಣಾ ಹುಚ್ಚಾಪಟ್ಟೆ ಮಾತಾಡಬೇಡ, ನಿನ್ನ ಪ್ರಾಣಾ ಮಾನ ನಿ ಅಣ್ಣನ ಕೈಲಿ. ಅದು ನಿನ್ನ ಕೈಯಲ್ಲಿ ಇಲ್ಲ. ನಾಗಪ್ಪಹೆಗಡೇರು ಇನ್ ಒಂದು ವಾರದೊಳಗೆ ಬಿಡುಗಡೆ ಆಗಿ ಬರ್ತಾರೆ. ಅವರು ಬರೂತನ ನೀನು ನಮ್ಮ ಸಂಗಡ ಇದ್ದುಬಿಡು.

**ಸುಬ್ಬಣ್ಣ:** ಎಲ್ಲಿ?

**ಗೋಪಾಲ:** ಇನ್ನೆಲ್ಲಿ ? ತಡಗಣಿ ಶಿಬಿರದಲ್ಲಿ. ಮೈಸೂರ ಗಡಿಯೊಳಗೆ ಅಲ್ಲಿ ಊರ ಉಸಾಬರಿ ಏನೇನೂ ಇಲ್ಲ.

**ಸುಬ್ಬಣ್ಣ:** ಆಯ್ತು ದೇವರ ಇಚ್ಛೆ ಇದ್ದಂತೆ ಆಗಲಿ. ಅಣ್ಣನೂ ಅದೇ ಅಂದಿ ಹಿಂದೆ. ನಿಮ್ಮ ಆ ಶಿಬಿರದಲ್ಲೇ ಆಶ್ರಯ ಪಡೆ ಎಂತ. ನಂಗೆ ಸೊ ಹೆಚ್ಚಾಯ್ತು.

## ೮

ನಿವೇದಕ: (ಊರಿನ ವೀರ ಸತ್ಯಾಗ್ರಹಿಗಳ, ಕರನಿರಾಕರಣೆಯ ಯೋಧರ ಬಿಡುಗಡೆಯ ದಿನ, ವಾದ್ಯ ವಿಜೃಂಭಣೆಯಿಂದ ನಾಗಪ್ಪ ಹೆಗಡೆಯವರ ಪರಿವಾರವನ್ನು ಮನೆಯವರೆಗೆ ಮುಟ್ಟಿಸಿದ್ದಾರೆ. ಜೈ ಜೈ ಕಾರಗಳ ಗರ್ಜನೆಯಲ್ಲಿ. "ನಾಗಪ್ಪ ಹೆಗಡೆಯವರಿಗೆ ಜಯವಾಗಲಿ". "ನಾಗವೇಣಿಬಾಯವರಿಗೆ ಜಯವಾಗಲಿ!" ಪುನಃ ಪುನಃ ಗರ್ಜನೆ, ಸ್ತಬ್ಧ)

ನಾಗಪ್ಪ: ಬಂಧುಗಳೇ ನಿಮಗೆಲ್ಲ ನಮಸ್ಕಾರ. ಬಾಯಿಂದ ಮಾತು ಹೊರಡೂದಿಲ್ಲ. ದೊಡ್ಡ ದೇಶಭಕ್ತರಿಗೆ ಮಾಡೋ ಸ್ವಾಗತ ಮಾಡಿದ್ರಿ. ಇದಕ್ಕೆಲ್ಲ ನಾನು ಯೋಗ್ಯನಲ್ಲ, ಪೋಲಿಸರು ಹಿಡಕೊಂಡು ಹೋದ್ರು, ಜೇಲಕಂಡೆ, ಬಿಡುಗಡೆ ಮಾಡ್ದ್ರು ತಿರುಗಿ ಬಂದೆ. ಪೋಲಿಸರಿಂದಲೇ ನಾವು ದೊಡ್ಡ ಪುಢಾರಿಗಳಾದಾಂಗೆ ಆಯ್ತು. ಈ ದೊಡ್ಡಸ್ತಿಕೆ ನಮ್ಮ ಮೇಲೆ ಹೇರಿದ್ದು, ಹಿಂದೆ ರಾಮನಾಮದ ಬಲದಿಂದ ಕಲ್ಲ ಬಂಡೆ ತೇಲ್ತಂತೆ. ಇಂದು ಗಾಂಧೀಜಿ ಹೆಸರಿನಿಂದ ನಾವು ಮೇಲೆ ಬರ್ತೇವೆ, ಬಿರುಗಾಳಿಗೆ ಸಿಕ್ಕ ತರಗೆಲೆ ಗರುಡನ್ಹಾಂಗೆ ಹಾರಾಡ್ತದೆ. ಆದರೆ ಬಿರುಗಾಳಿ ಹೋದ್ಮೇಲೆ ಗರುಡ ಗರುಡನೇ ತರಗೆಲೆ ತರಗೆಲೆನೇ. (ಮತ್ತೆ ಮತ್ತೆ ಜೈ ಜೈಕಾರ ಚಪ್ಪಾಳೆ) ನಮ್ಮದು ಸರ್ವಸ್ವ ಹೋತು (ಗದ್ಗದ) ತಮ್ಮ ಸುಬ್ಬಣ್ಣ....("ದಾರಿಬಿಡಿ ಸುಬ್ಬಣ್ಣಂಗೆ ದಾರಿ ಬಿಡಿ" ....ಕೂಗು,

ಸುಬ್ಬಣ್ಣ: ಅಣ್ಣಾ ಇಲ್ಲಿದ್ದೇನೆ. ನಿನ್ನ ಪಾಪಿ ತಮ್ಮ ಕಾಲಿಗೆ ಬಿದ್ದೆ. ಹೊಟ್ಟೇಲಿ ಹಾಕ್ಕೋ. ನಮ್ಮ ಸರ್ವಸ್ವ ನನ್ನಿಂದ ಹೋಯ್ತು (ಅಳುವನು ಬಿಕ್ಕಿ ಬಿಕ್ಕಿ)

ನಾಗಪ್ಪ: ಛೇ, ಛೇ ಹಾಗೆನ್ನಬೇಡ ತಮ್ಮ ಇದೊಂದು ದೊಡ್ಡ ಯಜ್ಞ, ಇದರಲ್ಲಿ ಯಾರು ಎಷ್ಟು ಆಹುತಿ ಹಾಕಿದ್ರೋ ಲೆಕ್ಕವೇ ಇಲ್ಲ. ನಮ್ಮದೇನು ಮಹಾ? ನಡೆ ಒಳಗೇ, ಬಂಧುಗಳೇ ರಾತ್ರೆ ವಿಪರೀತ ಆಯ್ತು. ಈಗ ಮನೇಗೆ ನಡೀರಿ ನಮಸ್ಕಾರ. (ಜನಕೋಲಾಹಲ, ಚೆದರುತ್ತದೆ. ಬಾಗಿಲ ಕದ ಇಕ್ಕುವ ಸದ್ದು)

ಸುಬ್ಬಣ್ಣ: ಅತ್ತಿಗೆ, ಅಣ್ಣಾ ನಿಮ್ಮ ಪಾದದಾಣೆ, ನಾ ಚಿನ್ನದ ಚರಿಗೆ ಎತ್ತಿ ಹಾಕಿಲ್ಲಾ (ಬಿಕ್ಕುತ್ತಾನೆ)

**ಅತ್ತಿಗೆ:** ಅದೋ ಮತ್ತೆ ಹಾಗೆ ಯಾರಂದ್ರೋ ಹುಚ್ಚಾ? ಅಳಬೇಡ.

**ಸುಬ್ಬಣ್ಣ:** ಊರ ತುಂಬ ಆಡ್ಕೋಳ್ತಾರೆ-ಆ ಪಟೇಲ ಮಂಜಪ್ಪ.....

**ನಾಗಪ್ಪ:** ಓ ಆ ಪಟೇಲನೋ? ಅಂವ ಹಾಗೆ ಹೇಳೋದೇ? ಅಂವ ನಮಗೆ ಮಹಾ ಉಪಕಾರಿ ನೋಡು. ಅದೆಲ್ಲ ಈಗ ಬೇಡ, ಹೋಗಿ ಮಲಗು. ಆಕೋ ಅಲ್ಲಿ ಸುಬ್ಬಿ ಕಾಯ್ತ ಇದ್ದಾಳೆ. ಪಾಪಾ, ನಿನ್ನ ನೋಡದೆ ವರ್ಷಕಾಲ ಆಯ್ತು. ನಾಳೆ ಎಲ್ಲ ಬಾಕಿ ಪಂಚಾಯ್ತಿ. ಈಗ ಹೋಗಿ ಮಕ್ಕೋ. (ಕದ ತಟ್ಟಿದ ಸದ್ದು) ಅದ್ಯಾರೋ ನೋಡೆ ನಾಗವೇಣಿ ಈ ಹೊತ್ತಿಗೆ?

**ನಾಗವೇಣಿ:** ಮತ್ತೆ ಬಂದ್ರೋ ಏನೋ ಪೋಲಿಸ್ರೂ?

**ನಾಗಪ್ಪ:** ಇರಲಾರ್ದು ಇದು ಪೋಲಿಸರ ಗಟ್ಟಿ ಕೈ ಅಲ್ಲ.
(ನಾಗವೇಣಿ ಹೋಗಿ ಕದ ತೆರೆಯುವಳು).

**ನಾಗವೇಣಿ:** ಯಾರು ದೇವಿನೆ? ಇದೇನೆ ಇಷ್ಟು ರಾತ್ರಿಗೆ ಬಂದ್ಬಿಟ್ಟೆ? ಬಾ ಒಳಗೆ ಬಾ, ಹಸಲ್ರ ಶಿವಪ್ಪನ ಹೆಂಡ್ತಿ ದೇವಿ ಬಂದಾಳೆ, ಏನೋ ತಂದಾಳೆ.

**ನಾಗಪ್ಪ:** ಇಲ್ಲಿ ಬಾ ದೇವಿ. ಇಲ್ಲಿ ಮುಂದೆ ಬಾ ಈ ಅಪರಾತ್ರೆಗೆ ಯಾಕೆ ಬಂದೆ?

**ದೇವಿ:** ಈಗೇ ಬರ್ಬೇಕು ನನ್ನೊಡೆಯಾ.

**ನಾಗಪ್ಪ:** ಇದೇನು ತಂದೆ?

**ದೇವಿ:** ಇದಕ್ಕೇ ಬಂದೆ ಒಡೆಯಾ.

**ಅತ್ತಿಗೆ:** ಏನದು?

**ದೇವಿ:** ನಿಮ್ಮ ಬದುಕು. ನಿಮ್ಮ ಚಿನ್ನದ ಚರಿಗೆ. ಇಷ್ಟು ವರ್ಷಾ ಕಾಪಾಡ್ ಜೀವ ಹಣ್ಣಾಗಿ ಹೋಯ್ತು ಧನಿ. ಇಂದು ನೀ ಬಂದೆ, ನಿನ್ನ ಚಿನ್ನ ನಿನ ಪಾದಕ್ಕೆ ಇಟ್ಟೀನಿ. ನಾ ಈಗ ಪಾರಾದೆ.

**ನಾಗಪ್ಪ:** ಅರೇ ಇದು ನಮ್ಮ ಕಾಣೆ ಆದ ಚರಿಗೆ. ಸುಬ್ಬಣ್ಣ ಸುಬ್ಬೀ (ಅವರು ಓಡಿ ಬರುವರು).

**ಇಬ್ಬರೂ:** ಏನಣ್ಣ, ಏನತ್ತಿಗೆ ? ಕರೆದ್ರಿ?

**ನಾಗಪ್ಪ:** ಇದು ನೋಡು ನಮ್ಮ ಸೊತ್ತು ಈ ದೇವಿ ಕಾದಿಟ್ಟಿದ್ದು. ನಮ್ಮ ನಿಧೀನ ಈಗ ತಂದೊಪ್ಪಿಸಿದ್ದಾಳೆ.

ಸುಬ್ಬಣ್ಣ: ಅವಳಿಗೆಲ್ಲಿ ಸಿಗ್ತು? ನಾ ಅಬ್ಬಿ ನೀರು ಬೀಳ್ವಲ್ಲಿ ಹೂಳಿಟ್ಟಿದ್ದೆ.

ದೇವಿ: ಹೌದಪ್ಪಾ ನೀನಿಟ್ಟೆ. ಆದರೆ ಹಳ್ಳ ಕೊರ್ಕೊಂಡು ಹೋಗತಿತ್ತು. ನಾ ಕಂಡೆ, ಮನೆಗೆ ತಂದೆ.

ಸುಬ್ಬಣ್ಣ: ದೇವಿ ಆ ನಿಮ್ಮ ಕೊಂಪೇಲಿ ಎಲ್ಲಿಟ್ಟೆ?

ದೇವಿ: (ನಕ್ಕು) ಸುಬ್ಬಣ್ಣ, ಕೋಳ ಏರಿ ಮಾಡಿನ ಸಂದೀಲಿ ಹುಗಿಸಿಟ್ಟೆ ಈಗ ತಗೊಂಡು ಬಂದೆ.

ನಾಗಪ್ಪ: ದೇವಿ, ದೇವಿ ನೀನೆಷ್ಟು ಒಳ್ಳೆಯವಳು! ನಮ್ಮ ಮನೇನೇ ಉಳಿಸ್ದೆ (ಗದ್ಗದ ದನಿ)

ನಾಗವೇಣಿ: ದೇವಿ, ಇಕೋ ಈ ರಾಶೀಲಿ ನಿಂಗ ಬೇಕಾದ್ದು ಹೆಕ್ಕಿಕೋ, ಬಳೇನೋ ಸರಾನೋ ಬೆಂಡವಾಲೇನೋ, ಅಕ್ಕೀನೋ......

ದೇವಿ: ಬೇಡ ತಾಯಿ, ಮತ್ತೆ ನನ್ನ ಮದ್ವಿ ಮಾಡಸ್ತೀರ್ಯಾ? ಇದೆಲ್ಲಾ ಏನೇನೂ ಬ್ಯಾಡ್ರಿ, ದೇವ್ರು ಮೆಚ್ಚ್ಯಾನಾs?

ಸುಬ್ಬಣ್ಣ: ಎಂಥ ಹಿರಿತ್ಯಾಗಿ ನೀನು. ಹುಟ್ಟ ಆತ್ಮಜ್ಞಾನಿ.

ನಾಗಪ್ಪ: ಇಲ್ಲ ದೇವಿ, ಇದೆಲ್ಲ ನಿಂದು, ನಿಜವಾಗಿಯೂ ನಿಂದು. ನಿನ್ನ ಜಾಗದಲ್ಲಿ ಇನ್ನಾರಾದ್ರೂ ಇದ್ರೆ ಇದನ್ನು ದಕ್ಕಿಸುತ್ತಿದ್ದರು. ಯಾರ ಪಾಲೋ ಆಗ್ತಿತ್ತು.

ದೇವಿ: ಹಾಗೆಲ್ಲ ಅನ್ನಬ್ಯಾಡ್ರಿ, ನನ್ನೊಡೆಯಾ. ನಾ ಜೀತದಾಳು. ಒಡೇರ ಬದುಕೇ ನಮ್ಮ ಬದುಕು. ಕಾಯೋದು ನನ್ನ ಕೆಲ್ಸ. ಹs ಅದೀಗ ಮುಗೀತು. ರಾತ್ರೆ ಭಾಳಾಯ್ತು ಮಕ್ಕೊಳ್ಳಿ ದಣಿದು ಬಂದೀರಿ. ನಾ ಬರ್ತೇನೆ ಕೈ ಮುಗಿದೆ (ಹೋಗ ಹತ್ತುವಳು).

ನಾಗಪ್ಪ: ದೇವಿ ತಡೆ. ನೀ ನಮಗೆ ತಾಯಿ. ದೊಡ್ಡಮ್ಮ ಈ ಒಂದು ಉಡುಗೊರೆ ತಕೋ ಹುಂ ಹಿಡಿ ಈ ಪವನ ಸರ.

ದೇವಿ: ಅಯ್ಯಪ್ಪಾ. ನಂನ ತಲೆ ಕೆಡಸಬ್ಯಾಡ್ರಿ. ಒಡೆಯಾ! ನಾವು ಗೈದು ತಿನ್ನೊ ಮಂದಿ. ನನಗ್ಯಾಕ ಒಡೆಯಾ ಬಂಗಾರ ಸರ?

ಸುಬ್ಬಣ್ಣ: ನಿಂಗಲ್ಲದಿದ್ದರೆ ನಿನ್ನ ಫಕೀರಂಗೆ.

ದೇವಿ: ಅವನೂ ನನ್ನಾಂಗೇ ದುಡ್ದು ಹೊಟ್ಟೇ ಹೊರಕಂಬಾ, ಅವನ ಮೈ ಕೈ

ಬೆಳೆದು ಗಟ್ಟಿಯಾಗ್ಲಿ-ಎಂದು ದ್ಯಾವ್ರಿಗೆ ಹೇಳ್ಕೊಳ್ರಿ ಒಡೆಯಾ, ನಾಳೆ ಬರ್ತೆ. ಅಮ್ಮನೋರೇ ಒಳಗಿದ್ರೆ ಒಂದು ಕೊರ್ಸಕಾಯಿ ಕೊಡ್ರಿ (ಹೋಗುವಳು)

ನಾಗವೇಣಿ : ಹಃ! ಪವನ ಸರ ಬೇಡ, ಕೊರ್ಸಕಾಯಿಬೇಕು!

ನಾಗಪ್ಪ: ನಾಗವೇಣಿ, ಇವಳು ಮನಸ್ತಿ ಅಲ್ಲ, ನಮ್ಮ ಕುಲದೇವಿ, ನಮ್ಮ ಮನೆ ಪುಣ್ಯದ ಪುತ್ಥಳಿ.

೬

ಯಾಕೂಬ: ಪಟೇಲ ಸಾಬ ಕೇಳಿದ್ರಾ? ದೇವಿ ಕತೆ. ನೀವು ಬರಿದೆ ಆ ಸುಬ್ಬಣ್ಣನ ಹೆಸರು ಖರಾಬ ಮಾಡೋ ಪ್ರಯತ್ನ ಮಾಡಿದ್ದೇ ಬಂತು. ಆ ದೇವಿ ನಮಗೆಲ್ಲ ಪಂಗನಾಮ ಎಳೆದ್ಳು.

ಸುಬ್ರಾಯ: ನಾ ಅವಳ ಗುಡಿಸಲ ಮೂಲೆ ಮೂಲೆ ಅಗ್ದು ನೋಡಿದ್ದೆ. ಹಸಲ್ರ ಕೇರಿಲಂತೂ ಒಂದು ಮನೆ ಬಿಡ್ಲಿಲ್ಲ.

ಯಾಕೂಬ: ಏ ಬೇಕೂಫಾ, ಆ ಮುದುಕಿ ಕೋಳ ಹತ್ತಿ ಇಡ್ತಾಳಂತ ಯಾರಿಗೆ ಮಾಲೂಮ್? ಹೋಗಲಿ ಬಿಡು.

ಪಟೇಲ: ಏನು ಮಾಡೋದು? ಏನು ಹೋಗಲಿ? ಅವಳ ಮೇಲೆ ಕೇಸು ಹಾಕುವಾ, ಹುಗಿದಿಟ್ಟ ಹಣ ಸರಕಾರದ್ದು, ಅವಳೆಂಗೇ ಬಚ್ಚಿಟ್ಟಳು? ಮುದುಕೀನ ಕೋರ್ಟಿಗೆ ಎಳೀದೇ ಹೊದ್ರೊ.....

ಯಾಕೂಬ: ಸಾಕು ಬಿಡ್ರಿ, ಆ ಮೀಸೆ ಬೋಳ್ಕೋ ಕಸಂ, ಇರ್ಲಿ ಏನಾದರೂ ಮಾಡಬೇಕು ಇದು ನಮಗೆ ಇನ್‌ಸರ್ಟ.

ಸುಬ್ರಾಯ: ಪಟೇಲ್ರೆ, ನಿಮ್ಮ ಮನೆ ದಪ್ಪ ಕಾಫಿ ಕುಡ್ದು ಈ ಕೇಸಿನ ಪಾಯಾ ಹಾಕ್ವಾ.(ಹೋಗುವರು)

## ೧೦

ದೇವಿ: ಫಕೀರಾ, ಫಕೀರಾss ಇತ್ಲಾಗೆ ಬಾಪ್ಪಾ. ಆ ತೆಂಗಿನ ಸಸಿ ಹಿಡಕೊ, ಹಾಂ ಈ ಹೊಂಡದಲ್ಲಿಡು,

ಫಕೀರಾ: ಯಾಕಮ್ಮಾ?

ದೇವಿ: ಇಮ ನಿನ್ನ ಅಪ್ಪನ ನೆಪ್ಪಿಗೆ, ಅಲ್ದೆ ಆ ಚಿನ್ನದ ಚರಿಗೇನೂ ಇಲ್ಲೆ ಇತ್ತು ಅದರ್ರೂ ನೆಪ್ಪಿಗೆ.

ಫಕೀರಾ: ಸರಿ, ಆದರೆ......

ದೇವಿ: ಈ ಸಸಿ ಬೆಳ್ದಾಗ ಫಲಕೊಟ್ಟಾಗ ಎರಡೂ ನೆಪ್ಪು ಆಗ್ತಾವೆ.

ಫಕೀರಾ: ಆದರೆ ಆ ಫಲಾ ನಿಂಗೆಲ್ಲಿ ಸಿಗ್ತದೆ?

ದೇವಿ : ನಿನಗೆ, ನಿನ್ನ ಮಕ್ಕಳಿಗೆ ಸಿಕ್ಕರೆ ಸಾಕು, ಅದೇ ನನಗೆ ಸುಕಾ.

ಫಕೀರಾ: ಯಾರೋ ನೆಟ್ರೆ ಯಾರಿಗೋ ಫಲ.

ದೇವಿ: ಪರಪಂಚ ನಡೆದದ್ದೇ ಹಾಗೆ ಮಗಾ. ಈ ತೋಟ ಯಾರು ನೆಟ್ಟರು? ಆ ಬೆಟ್ಟ ಯಾರು ಮಾಡ್ದರು? ಬೆಟ್ಟದಲ್ಲಿ ಮರ ಕಡಿದ್ರೆ ಅಲ್ಲಿ ಹೊಸ ಮರ ನೆಡಬೇಕು. ಬೆಟ್ಟದರಿಣಾs ತೋಟದರಿಣಾss.

ಫಕೀರಾ: ತಿಳೀತು ಬಿಡು. ದೇವರರಿಣಾ ಹೀಗೆ ತೀರ್ಸಬೇಕೂಂತ ನೀ ಹೇಳ್ತಿ

ದೇವಿ: ಹಾಂ, ಶಾಣು ನನ್ನ ಫಕೀರಾ, ಈಗ ಹೇಳು, ಈ ತೆಂಗಿನ ಸಸಿ ಕಾಯಿ ಯಾರಿಗೆ?

ಫಕೀರಾ: (ನಗು ತಡೆಯಲಾರದೆ) ನನ್ನ ಮಕ್ಕಳಿಗೆ.

(ಯಾಕೂಬ ಸುಬ್ರಾಯ ವಗೈರೆ ಬರುತ್ತಾರೆ)

ಯಾಕೂಬ: ಏ ಮುಚ್ಚಬಾಯ್, ನಮಗೆ ಹಲ್ಲ ಕಿರೀತಿ ಏನು? ಸುಬ್ರಾಯ ಅರೆಸ್ಟ ಮಾಡು ದೇವಿಗೆ-ದೇವಿಕೊಂ ಶಿವಪ್ಪಾ ಹಸಲ್ರು ಇವಳ ಮೇಲೆ ವಾರಂಟಐತಿ.

ದೇವಿ: ವಾರಂಟು? ಅದು ಯಾಕೋ?

ಸುಬ್ರಾಯ: ದೇವಿ, ಒಣ ರಗಳೆ ಮಾಡಬ್ಯಾಡ. ನಮ್ಮ ಸಂಗಡ ಬಾ, ಇಲ್ಲಾಂದರೆ ಕೈಗೆ ಬೇಡಿ ಕಬ್ಬಿಣದ ಬಳೆ, ತೆಗ್ಗಿನಮನೆ ಚಿನ್ನದ್ದಲ್ಲ. ಹಃ ಹಃ ಹಃ

ದೇವಿ: ಆದರೆ ಯಾಕೆ ಇದೆಲ್ಲ......

ಯಾಕೂಬ: ಯಾಕೆಂದು ಈ ಯಾಕೂಬಖಾನರಿಗೆ ಏನು ಗೊತ್ತು? ಕೋರ್ಟು ಹೇಳ್ತದೆ ನಿನ್ನ ಮೇಲೆ ಖಟ್ಲೆ ಅದೆ.

ದೇವಿ: (ಚಕಿತ) ಆಃ ಖಟ್ಲೆ ?

ಯಾಕೂಬ: ಸರಕಾರಿ ಬೊಕ್ಕಸ ಎತ್ತಿ ಹಾಕಿದ್ದಕ್ಕಾಗಿ. ನಡೆ-ಏ ಫಕೀರಾ ಬಿಡೋ ಅಮ್ಮನ್ನ

ಫಕೀರಾ: ಅಮ್ಮಾ ಅಮ್ಮಾ ಅಮ್ಮಾ ( ಅಳುತ್ತ ಕೂಗುತ್ತ ಹಿಂದೆ ಓಡುತ್ತಾನೆ )-

೧೧

ನಿವೇದಕ: ದೇವಿಯ ವಿಚಾರಣೆ ಕೊನೆಗೆ ನ್ಯಾಯಮೂರ್ತಿಗಳ ತೀರ್ಪು

ನ್ಯಾಯಮೂರ್ತಿ: ದೇವಿ ಕೊಂ ಶಿವಪ್ಪ ಇವಳ ವಿರುದ್ಧ ಪೋಲಿಸರು ಹಾಕಿದ ಕೇಸನ್ನು ಕಿತ್ತು ಹಾಕಲಾಗಿದೆ. ದೇವಿಯು ಹುಗಿದಿಟ್ಟ ಧನವನ್ನೇ ಎತ್ತಿ ಹಾಕಿದ್ದು ಪುರಾವೆ ಆಗಲಿಲ್ಲ. ಆ ಧನವನ್ನು ಮುದ್ದೆಮಾಲನ್ನು ಕೋರ್ಟಿನಲ್ಲಿ ಹಾಜರ ಮಾಡಿಲ್ಲ. ಸದರ ದೇವಿ ಅದನ್ನು ಒಯ್ದದ್ದು ಬೇರೆ ಕಡೆಗೆ ಹಸ್ತಾಂತರ ಮಾಡಿದ್ದು ಯಾವುದಕ್ಕೂ ಸಾಕ್ಷಿ ಪುರಾವೆಗಳನ್ನು ಪೋಲಿಸರು ಹಾಜರು ಪಡಿಸಿಲ್ಲ. ಇವೆಲ್ಲ ನೋಡಿದರೆ ದೇವಿಯಂಥ ಸ್ವಾತಿಕ ಬಡ ಹೆಂಗಸನ್ನು ಪೀಡಿಸಲಿಕ್ಕೆ ದುರುದ್ದೇಶ ಪೂರ್ವಕವಾಗಿ ಪೋಲಿಸ ಪಾಟೇಲರು ಈ ಖಟ್ಲೆಯನ್ನು ಹಾಕಿರಬೇಕೆಂದು ಕೋರ್ಟಿಗೆ ಬಲವಾದ ಸಂಶಯ ಬರುತ್ತದೆ. ಆದ್ದರಿಂದ ದೇವಿಯು ಪೂರ್ಣ ನಿರ್ದೋಷಿ ಎಂದು ಸಾರಿ ಈ ಖಟ್ಲೆಯನ್ನೂ ಕೋರ್ಟು ಕಿತ್ತು ಹಾಕುತ್ತದೆ.

(ಕೋರ್ಟಿನಲ್ಲಿ ಗದ್ದಲ-'ಸದ್ದು ಸದ್ದು' -ಕೂಗು)

ನಿವೇದಕ: ಮೈಸೂರ ಸರಕಾರದ ಪರವಾಗಿ ಗೌರವಧನವಿತ್ತು ಸತ್ಕರಿಸಲು ಸಿದ್ದಾಪುರದಲ್ಲಿ ಸಭೆ ನಡೆಯಿತು. ನಗರದ ಗಣ್ಯ ಮಾನ್ಯ ಧುರೀಣರ ಗೌರವಪರ ಭಾಷಣಗಳಿಗೆ ಉತ್ತರ ಕೊಡುತ್ತ ದೇವಿ ಅಂದಳು.

ದೇವಿ: ನಂಗೆ ಇದೆಲ್ಲಾ ಏನೇನೂ ಬ್ಯಾಡ. ನಾನು ಬಡವಿ. ಉಡಲಿಕ್ಕೆ ಇಡಿ ಸೀರೆ ಕಂಡಿಲ್ಲ. ಈ ಸೀರೆಯೂ ಯಾರೋ ಉಡಿಸಿ ಕಳಿಸಿದ್ದು, ಆದರೂ ನಾನು ಯಾರಿಂದಲೂ ಏನೂ ಕೇಳೋದಿಲ್ಲ. ಬೇಡೋದಿಲ್ಲ. ದೇವರು ಇಟ್ಟಂಗೆ ಇರ್ತೇನೆ. (ಹಿನ್ನೆಲೆಯಲ್ಲಿ ಈಶಾವಾಸ್ಯೋಪನಿಷತ ವಾಕ್ಯಗಳ "ತೇನ ತ್ಯಕ್ತೇನ ಭುಂಜೀಥಾ ಮಾಗೃಧಃ ಕಸ್ಯಸ್ವಿತ್ ಧನಂ...") ನಾಗಪ ಹೆಗಡೇರು ಹೊನ್ನು ಕೊಟ್ರು, ಹಣ ಕೊಟ್ರು ನಾ ತಗೋಳ್ಳಿಲ್ಲ. ಈಗ ಸರಕಾರ ಹಣ ಕೊಡ್ತದಂತೆ. ಅದೂ ನನಗೆ ಬ್ಯಾಡಾ, ನನ ಫಕೀರಪ್ಪಂಗೂ ಬ್ಯಾಡಾ. ನಮ್ಮದು ದುಡಕೊಂಡು ತಿನ್ನೋ ಜಾತಿ ನಮ್ಮ ಜೀತದ ಜೀವ ಈ ಹಣ ಮುಟ್ರೆ ನನ್ನ ಆತ್ಮ ಮೆಚ್ಚಾ. (ದೀರ್ಘ ಚಪ್ಪಾಳೆ. "ಹಸಲ್ರ ದೇವಿಗೆ ಜಯವಾಗಲಿ" ಕೂಗು)

**ನಿವೇದಕ:** ಇಂದು ದೇವಿಯು ಅಮರಳಾದಳು. ದೇವತ್ವಕ್ಕೆ ನಿಜವಾಗಿಯೂ ಏರಿದಳು. ಅವಳು ಬಾಳಿಡೀ ನೆಚ್ಚಿದ ಬೆಟ್ಟ ಬಾನು ಬಯಲುಗಳಲ್ಲಿ ಐಕ್ಯ ಹೊಂದಿದಳು. ಚಿತೆಯ ಮೇಲೆ ಅವಳ ಜರಾಜರ್ಜರ ದೇಹ ಸಮಿಧೆಯಂತೆ ಬಿದ್ದಿದೆ. ಜ್ವಾಲೆಗಳು ಅದನ್ನೆ ನೆಕ್ಕುತ್ತಿವೆ. ಇದಾರು? ತೆಗ್ಗಿನ ಮನೆ ಹೆಗಡೆಯವರ ಸಕಲ ಪರಿವಾರ ಧರ್ಮ ಕಾಷ್ಠ ಹಾಕಲಿಕ್ಕೆ ಸುತ್ತಲೂ ನೆರೆದಿದ್ದಾರೆ. ಕಣ್ಣೀರ ಕೋಡಿ ಚಿತೆಯಲ್ಲಿ ತರ್ಪಣ ಕೊಡುತ್ತಿದೆ. ದೇವಿಯ ಆತ್ಮದೊಂದಿಗೆ ಆವಿಯಾಗಿ ಆಕಾಶಕ್ಕೆ ಏರುತ್ತಿದೆ.

**ನಾಗಪ್ಪ:** (ಗದ್ಗದ) ಬಾರೋ ತಮ್ಮಾ, ಬಾ ನಾಗವೇಣೀ, ಧರ್ಮಕಾಷ್ಠ ಹಾಕೋಣ.

**ಸುಬ್ಬಣ್ಣ:** ಅಯ್ಯಯ್ಯೋ ದೇವಿ, ನಮ್ಮಮ್ಮಾ! ನಮ್ಮ ಬಿಟ್ಟು ಹೋದೆಯಾ? ನಮ್ಮ ತಾಯಿ ಸತ್ತಾಗಲೂ ನನಗಿಷ್ಟು ಕಣ್ಣೀರು ಬಂದಿದ್ದಿಲ್ಲ, ದೇವೀ, ದೇ....ವೀ....(ಕುಸಿಯುತ್ತಾನೆ)

**ನಾಗವೇಣಿ:** ನಮ್ಮ ಮನೆ ಭಾಗ್ಯ ಲಕ್ಷ್ಮಿ ಹೋದಳು.

ಎಂಥ ತ್ಯಾಗಿ ಏನು ತಪಸ್ಸು

ಅವಳೊಬ್ಬ ಯೋಗಿನಿ.

**ಪಟೇಲ:** ನಾ ಪಟೇಲ ಪಾಪಿ ದೇವೀ, ಯೋಗ್ಯತೆ ತಿಳಿದೇ ಹೋದೆ, ೧೯೩೭ರಲ್ಲಿ ಮಹಾತ್ಮರು ದೇವಿನ ಕಂಡು ಕಣ್ಣೀರಗರದ್ರು.

**(ಬಾಪೂಜಿ ದನಿ) :** 'ಇಂಥ ಪುಣ್ಯಾತ್ಮರಿರುವದರಿಂದಲೇ ಜಗತ್ತು ನಡೆದಿದೆ' ಅಂದರು ಗಾಂಧೀಜಿ. ಆ ಪುಣ್ಯ ಈ ಹೊತ್ತು ಹೊರಟೆದ್ದು ಹೋಯಿತು.

-ರಾಷ್ಟ್ರಪತಿ ರಾಜೇಂದ್ರ ಪ್ರಸಾದರು ಪಾವಟಿಗೆ ಏರಿ ಹೋಗಿ ದೇವಿ ದರ್ಶನ ಪಡೆದ್ರು ಕುಮಟೆಗೆ ಬಂದಾಗ;

-ಪೂಜ್ಯ ವಿನೋಬಾ ಕೈ ಹಿಡಿದು ಗೋಕರ್ಣ ಮಹಾಬಲೇಶ್ವರನ ಪೂಜೆಗೆ ಒಯ್ದುದು ಎಂಥ ಭಾಗ್ಯ.

-ಆಚಾರ್ಯ ಕಾಲೇಲಕರರು ದೇವೀಯ ಗುಡಿಸಲಿಗೆ ಹೋಗಿ ಅವಳ ಕ್ಷೇಮ ಸಮಾಚಾರ ಕೇಳಿದ್ರು.

**ನಾಗಪ್ಪ:** ಫಕೀರಾ ಅಮ್ಮಂಗೆ ಕೈ ಮುಗಿ ಇನ್ನು ನೀನು ಜೀತದಾಳು ಅಲ್ಲ ಇಮ್ಮ ಹೆಗಡೇರು ನಿನ್ನ ಬಿಡುಗಡೆ ಮಾಡಿದಾರೆ.

**ಫಕೀರ:** (ಬಿಕ್ಕುತ್ತ) ಆದ್ರೂ ನಿಮ್ಮ ಆಳಾಗೇ ದುಡೀತೀ. ಅಮ್ಮ ಅದನ್ನೇ ಕಲಿಸಿದ್ದು, ರಟ್ಟಿಗಟ್ಟಿ ಇರೋತನಕಗೈಯು ಎಂದಿದ್ದಳು. ಅವಳು, ಗೈದು ಸತ್ತಳು. ನಾ ಗೈದು ಬಾಳ್ತೇನೆ.

# ಶಿವಯೋಗಿ ಸಿದ್ಧಿ.

**ಪಾತ್ರಗಳು :**

**ಶಂಕರಪ್ಪ (ಯಜಮಾನ)**
**ಪಾರ್ವತಮ್ಮ (ಯಜಮಾನಿ)**
**ಬಸವಣ್ಣ (ಮನೆ ಆಳು)**
**ಅಜ್ಜ (ಹಳ್ಳಿಯ ಮುದುಕ)**
**ತಂಗಿ (ಅಜ್ಜನ ಸೊಸೆ)**
**ಇಬ್ಬರು ಮೊಮ್ಮಕ್ಕಳು.**

ಪುರಾಣಿಕ, ಡ್ರೈವ್ಹರ, ಕಂಡಕ್ಟರ, ಪ್ರವಾಸಿಗಳು,
ಬಸ್ ನಿಲ್ದಾಣ, ಸಮುದ್ರ ಸ್ನಾನ, ಗೋಕರ್ಣ ದೇವಸ್ಥಾನ
ರಥೋತ್ಸವ ಜಾತ್ರೆ-ಮುಂತಾದ ದನಿ, ಸದ್ದು ಗದ್ದಲ.

(ಶಿವಯೋಗ ಶಿವರಾತ್ರೆ ಒಂದು ಹೊಸ ಯುಗಧರ್ಮದ ಆಚರಣೆಯ ರೂಪಕ)



ಹಿನ್ನೆಲೆ : (ಊರ ಮಠದ ಪೌಳಿಯಲ್ಲಿ ಶಿವಪುರಾಣ ನಡೆದಿದೆ. ಶಿವರಾತ್ರೆಯ ಮಹಾತ್ಮೆ ಕೊನೆಯ ಶ್ಲೋಕ ಕೇಳಿ ಬರುತ್ತದೆ.)
"ಮಾಘಾಸಿತ ಚತುರ್ದಶ್ಯಾಂ ಮಹಾಬಲ ಸಮರ್ಚನಂ
ವಿಮುಕ್ತಿದಂ ವಿಶೇಷಣ ಸರ್ವೇಷಾಂ ಪಾಪಿನಾಮಪಿ
ಅಸ್ಯಾಂ ಶಿವತಿಥೌ ಸರ್ವೇ ಮಹೋತ್ಸವ ದಿದೃಕ್ಷವಃ
ಅಯಾಂತಿ ಸರ್ವ ದೇಶೇಭ್ಯಶ್ಚತುರ್ವರ್ಣ್ಯ ಮಹಾಜನಃ
ಸ್ತ್ರೀಯಾಃ ವೃದ್ಧಾಶ್ಚ ಬಾಲಾಶತಿ ಚತುರಾಶ್ರಮವಾಸಿನಃ
ದೃಷ್ಟ್ವಾತತ್ರೇತ್ಯ ದೇವೇಶಂ ಲೇಭಿರೇ ಕೃತ ಕತ್ಯತಾಂ
ಏವಂ ವ್ರತಂ ಕೃತಂ ಯೇನ ನ್ಯೂನಂತಸ್ಯಸ್ಯನ ವಿದ್ಯತೇ
ಮನೋಭಿಷ್ಟಾಂ ತಥಾ ಸಿದ್ದಿಂ ಲಭತೇ ನಾತ್ರ ಸಂಶಯ..."
(ಪುರಾಣ ಮುಗಿಯುವಾಗ ಗಂಟೆ ಜಾಗಟೆ ಶಂಖಗಳ ಸದ್ದು. 'ಹೂಂ ಮಂಗಳಾರತಿ ಮಾಡ್ರಿ' 'ಪ್ರಸಾದ ಬರಲಿ' - ಇತ್ಯಾದಿ ಸದ್ದು ಹಿಂದೆ ಸರಿಯುತ್ತಿದ್ದಂತೆ ಹಸುವಿನ ನರಳಿಕೆಯ 'ಅಂಬಾಃ' ದನಿ-)

ಶಂಕ್ರಪ್ಪ : ಯಾರು ಬಸವಣ್ಣೇ ಏನೋ? ಯಾವಾಗ ಬಂದು ಕೂತಿ? ಹಸು ಬೇರೆ ಹೊತ್ತುಕೊಂಡು...ಬಂದಿದ್ದಿ, ಹಾಂ ಕೇಳಿದಿಯಲ್ಲೋ ಶಿವರಾತ್ರಿ ಮಹಾತ್ಮ್ಯನ?

ಬಸವಣ್ಣೆಪ್ಪ : ಹೌದು ರಾಯರೇ, ಅನಾಯಸವಾಗಿ ಪುರಾಣಾ ಕಿವಿಗೆ ಬಿತ್ತು . ನೋಡಿ-ಪಾಪ, ಈ ಹಸೂನ ಪುಣ್ಯ; ಎಲ್ಲೋ ಕೊರಕಲಾಗ ಕಾಲ್ಮುರ್ಕೊಂಡು ಬಿದ್ದಿತ್ತು. ಹಗಲೆಲ್ಲ ಗುಡ್ಡ ಸುತ್ತಾಡಿ ಎತ್ಕೊಂಡು ಬಂದೆ ಈ ಮಠದ ದಾರೀಲೇ.

ಶಂಕ್ರಪ್ಪ : ಅದೇ ನಿನ್ನ ಪುಣ್ಯಾ. ಪೌಳೀಲೆ ಕೂತು ಪುರಾಣ ಕೇಳ್ತಿದ್ವಿ ನೀನೂ ಹಾಯಂತೆ ಬಂದು ಕೂತೆ. ಶಿವಪುರಾಣ ಕಿವಿಗೆ ಬಿತ್ತು. ಶಿವಯೋಗದ ಮಹಿಮಾನೂ ಕೇಳ್ದಿ.

ಪಾರ್ವತಮ್ಮ : ಏ ಬಸವಣ್ಣೆ, ತೀರ್ಥ ಪ್ರಸಾದಾ ತಗೊಂಡ್ಯೋ ಇಲ್ಲೊ?

ಬಸವಣ್ಣೆಪ್ಪ : ತಕೊಂಡೆ ತಾಯಿ, ಯಜಮಾನ್ರೆ ಪಾರ್ವತಮ್ಮನೋರನ್ನೂ ಸಂಗಾತ ತಂದಿದ್ದೀರಾ?

ಶಂಕ್ರಪ್ಪ : ಅಲ್ವೇ ಮತ್ತೆ, ಅವಳೇ ನನ್ನ ಬಾಳ ಸಂಗಾತಿ, ಪುರಾಣಕ್ಕೂ ಬಂದಳು, ಒಳಗೆ ಕೂತುಕೊಂಡ್ಳು, ತೀರ್ಥ ಪ್ರಸಾದಾ?

ಬಸವಣ್ಣೆಪ್ಪ : ಆತು ಬಿಡ್ರಿ, ತೀರ್ಥಾನೂ ಕುಡ್ದೆ ಪ್ರಸಾದಾ ಪಾಪಾ ಆ ಹಸುಗೆ ತಿನ್ನಿದೆ.

ಪಾರ್ವತಮ್ಮ: (ನಕ್ಕು) ಸರಿಹೋತು ಬಿಡು ಬಸವಗಿಷ್ಟು, ಆಕಳಿಗಿಷ್ಟು.

ಬಸವಣ್ಣೆಪ್ಪ: (ನಕ್ಕು) ಹೋ; ನಾ ಬಸವಣ್ಣ-ನಂದೂ ದನದ್ದೇ ಜಾತಿ. ಇನ್ನು ನಾ ಮುಂದಾಗಿ ಈ ಹಸೂನ ಕೊಟ್ಟಿಗೆಗೆ ಹಾಕಿ ಮೇವೂ ಮದ್ದೂ ಮಾಡಬೇಕು, ನಾ ಹೊರಟೆ.

ಶಂಕ್ರಪ್ಪ : ಅದ ಮಾಡೋದೆ ಐತಿ. ಆದರೆ ತಡೆ, ನಾವೂ ಜತೆಗೆ ಬಂದ್ವಿ. ಇಲ್ನೋಡು ಬಸವಣ್ಣಿ. ಶಿವರಾತ್ರೆ ಬಂತು, ಈ ಸಲಾ ಆದ್ರೂ ನಮ್ಮ ಜತೆ ಗೋಕರ್ಣ ಯಾತ್ರೆಗೆ ಬಂದ್ಬಿಡು.

ಬಸವಣ್ಣೆಪ್ಪ : ಬರ್ದೆ ಮತ್ತೆ, ನೀವು ಗಂಡ ಹೆಣ್ತಿ ಪ್ರತಿವರ್ಷ ಶಿವರಾತ್ರೆಗೆ ಗೋಕರ್ಣಕ್ಕೆ ಹೋಗ್ತೀರಿ. ನನಗೂ ಮಹಾಬಲೇಶ್ವರನ ಪ್ರಸಾದ ವಿಭೂತಿ ತರ್ತಿರಿ. ಹೋಗುವಾಗ ಪ್ರತಿಸಲ 'ಬಾ' ಅಂತೀರಿ.

ಪಾರ್ವತಮ್ಮ : ಆದ್ರೆ ನೀ ಮಾತ್ರ ಒಂದು ವರ್ಷಾನೂ ಬರವೊಲ್ಲೆ, ಹುಚ್ಚ ಖೋಡಿ.

ಶಂಕ್ರಪ್ಪ : ಖೋಡಿ ಅಲ್ಲ, ಬರೆ-ಹುಚ್ಚ, ಬುದ್ದಿಗೇಡಿ. ನೋಡು ಬಸವಣ್ಣಿ, ಒಂದಾದರೂ ಮಹಾಶಿವರಾತ್ರೆ ನಿನ್ನ ಈ ಯಜಮಾನಿ ತಪ್ಸಿದ್ದುಂಟೇ?

ಪಾರ್ವತಮ್ಮ : ಅಲ್ಲೋ ಬಸವಣ್ಣೆ, ನೀ ಒಂದು ಸಲವಾದರೂ ಬಂದದ್ದೈತೇನು?

ಬಸವಣ್ಣೆಪ್ಪ : ಅವರವರ ನಸೀಬ ಬಾಯವ್ರೆ, ನನಗೇನ ಶಿವರಾತ್ರೆ, ಕ್ಷೇತ್ರ ಯಾತ್ರೆ, ಮಹಾಬಲೇಶ್ವರ ಪೂಜಾ ಬೇಡಾಗಿದೆಯೇ?

ಪಾರ್ವತಮ್ಮ : ಎಂದಾದರೂ ಶಿವರಾತ್ರೆ-ಜಾತ್ರೆ ಕಂಡಿಯೇನು?

ಶಂಕ್ರಪ್ಪ : ಅವ ನೋಡ್ಯಾನ "ಭೂ ಕೈಲಾಸ" ಸಿನೇಮಾದಲ್ಲಿ, ಅಲ್ಲೇನೋ ಬಸವಣ್ಣೇ

ಬಸವಣ್ಣೆಪ್ಪ : (ನಕ್ಕು) ನೋಡೇನ್ರಿ, ಆದರೆ ಸಿನೇಮಾ ಅಲ್ಲ; ನಾ ಐದು ವರ್ಷದ ಹುಡುಗ ಇದ್ದಾಗ ಹೋಗಿದ್ದೆ ನಮ್ಮಜ್ಜಿ ಜತೆ.

ಶಂಕ್ರಪ್ಪ : ಹಾಂಗಿದ್ರೇನು ಮಣ್ಣು ನೆನಪೈತಿ?

ಬಸವಣ್ಣೆಪ್ಪ : ಇಲ್ಲ ಧಣೇರೆ, ಎಲ್ಲ ಎಲ್ಲಾನೂ ಎದೇಲೆ ಕೊರದಿಟ್ಟಾಂಗ ಐತಿ ಸಮುದ್ರದ ಉಪ್ಪು ನೀರು ಕುಡಿದು ಉಸಿರುಗಟ್ಟಿದ್ದು, ಗುಡಿ ಗದ್ದಲದಾಗ ಉಡದಾರ ಕಳಚಿ ಬಿದ್ದದ್ದು, ದೇವರ ರಥಕ್ಕೆ ಹೊಡೆದ ಬಾಳೆಹಣ್ಣು

ಹೆಕ್ಕಿ ಹೆಕ್ಕಿ ತಿಂದದ್ದು....

(ಇದೆಲ್ಲ ಹೇಳುವಾಗ ಶಂಕ್ರಪ್ಪ-ಪಾರ್ವತಮ್ಮ ನಗುತ್ತಿರುತ್ತಾರೆ)

**ಶಂಕ್ರಪ್ಪ :** ಮತ್ತೆ ಪೋಲಿಸರು ಲಾಕಪ್ಪಿಗೆ ಹಿಡಕೊಂಡು ಹೋದದ್ದು?

**ಬಸವಣ್ಣೆಪ್ಪ :** ಅದೊಂದು ತಪ್ಪಿತ್ತು ನೋಡ್ರಿ.

**ಪಾರ್ವತಮ್ಮ :** ಸಾಕು ಬಿಡ್ರಿ ಪಾಪ, ಏನಾದರೂ ಕೆಟ್ಟಮಾತು ಆಡಬೇಡ್ರಿ-ಅದೇನಿಲ್ಲ ಬಸವಣ್ಣೀ ಈ ಸಲ ನಮ್ಮ ಸಂಗಡ ನೀ ಬರಾವನೋ ಇಲ್ಲೋ ?

**ಶಂಕ್ರಪ್ಪ :** ಅವನ್ನ ಏನ ಕೇಳ್ತಿ? ಎಮ್ಮೆ ದನಾ ಹೊಲ ತೋಟ ಎಂದಕೋತ ತಪ್ಪಿಸಿಕೋತ ಬಂದಾನ ಪ್ರತಿವರ್ಷ. ಈ ಸಲ ಬರಲೇ ಬೇಕು ಬಸವಣ್ಣೀ, ಇದು ನನ್ನ ತಾಕೀತು,

ನಿನ್ನ ಧಣೇರ ಅಪ್ಪಣೆ.

**ಪಾರ್ವತಮ್ಮ :** ಹೂಂ ಅನ್ನೋ ಮೂಳಾ, ಮತ್ತ ಬ್ಯಾರ ದಗದಗಿಗದ ಅಂತ ತೆಗೀಬ್ಯಾಡ.

**ಬಸವಣ್ಣೆಪ್ಪ :** ಬರೋದೆ ಮತ್ತೆ, ನಿಮ್ಮ ಮನೇ ದಗದ ಮುಗಿಯೋಣವೇ ಇಲ್ಲ. ಅವ ಇದ್ದದ್ದೇ ಯಾವಾಗಲೂ.

**ಶಂಕ್ರಪ್ಪ :** ಹೌದಲ್ಲಾ ಮತ್ತೆ? ಪ್ರತಿಸಲಾನೂ ನೀ ಹೀಗೆ ಅಂದಕೋತ ಬಂದಾಂವಾ.

**ಪಾರ್ವತಮ್ಮ :** ನೋಡು ಬಸವಣ್ಣೀ. ನಮ್ಮ ಮನೀ ಕೆಲಸ ಕಂಬಳಾ, ಯಾವಾಗಲೂ ಇದ್ದದs. ಹೀಂಗ ನಿನ್ನ ಜೀವಮಾನಾನೆಲ್ಲ ನಮ್ಮ ಸಂಸಾರಕ್ಕs ಸವೆಸಿ ಸುಣ್ಣಾ ಆಗಿ ಬಿಟ್ಟೆ. ನಿನ್ನ ಸ್ವಂತಕ್ಕ ಏನು ಪುಣ್ಯ ಕಟ್ಟಿಕೊಂಡ್ಹಾಂಗ ಆತು? ಅಲ್ಲೇನ್ರೀ ಬಸವಣ್ಣಿಗೆ ತುಸು ಬುದ್ಧಿ ಹೇಳಬಾರ್ದ?

**ಬಸವಣ್ಣೆಪ್ಪ :** ಅಲ್ಲ ಬಾಯವ್ರೇ, ನೀವೂ ಒಳ್ಳೇ ಹೇಳೀರಿ. ನನಗೇನ ಹೆಂಡ್ತೀನಾ, ಮಕ್ಕಳಾ, ನನ್ನ ಜೀವಮಾನವೆಲ್ಲ ನಿಮ್ಮ ಸಂಸಾರಕ್ಕಾಗೇ ಅದ. ನಿಮಗೆಲ್ಲಾ ಗೊತ್ತು. ಪ್ರತಿ ಮಾಘಮಾಸದಾಗ ನಿಮ್ಮಲ್ಲಿ ಏನಾದರೂ ಕಾಯಿಲೆ, ಕಾಸರಾ, ಸೊಸೆ ಬಾಳಂತಿ, ಮಕ್ಕಳು ಅಜಾರಿ, ದನಕರು, ಹೊಲ ಏನಾದರೂ ದಗವ ಇದ್ದದ್ದೇ. ಇದೇ ನೋಡಿ ನಾಳೆ ನೀವು ಗೋಕರ್ಣ ಶಿವರಾತ್ರೆಗೆ ಹೊರಟೀರಿ. ನಿನ್ನೆ ರಾತ್ರಿಯಿಂದ ಈ ಬೆಳ್ಳಿ ಹಸು ಬೇಪತ್ತೆ. ದೂರ ಕೊರಕಲಾಗ ಕಾಲ ಮುರಕೊಂಡು ಬಿದ್ದೇತಿ. ಹೊತ್ಕೊಂಡು ಬಂದೆ. ಯಜಮಾನ್ರೆ, ನಿಮ್ಮ ಮಕ್ಕಳ ಮೈತಿಕ್ಕಿ ದಿನಾಲೂ ಮೀಸ್ತೇನಲ್ಲಾ

ಅದೇ ನನ್ನ ಪಾಲಿಗೆ ರುದ್ರಾಭಿಷೇಕ.

**ಪಾರ್ವತಮ್ಮ :** ಸಾಕು ಬಿಡೋ ನಿನ್ನ ಶಾಣೇತನ : ಈ ಸರ್ತೆಮಾತ್ರ ನಮ್ಮ ಸಂಗತಿ ಗೋಕರ್ಣ ಶಿವರಾತ್ರೆಗೆ ಬರೋದೆ ನೋಡು ನೀನು.

**ಶಂಕ್ರಪ್ಪ :** ನೋಡೇ ಅವನ ಖೋಡಿ ನೋಡೆ; ಮೀಸೆ ಹಣ್ಣಾದರೂ ಹಟಮಾರಿತನ ಬಿಡೋದಿಲ್ಲ.

**ಬಸವಣ್ಣೆಪ್ಪ :** ಹಟ ಏನು ಬಂತು ಬುದ್ದೀ. ಇಲ್ಲೆ ಕೆಲಸದ ಹೊರೆ ಬಿದ್ದಿದೆ. ಮೀಸೆ ಹಣ್ಣಾಯ್ತೆಂದು, ಅದೇನು ಕಡಿಮೆ ಆಗ್ತೈತ್ಯೋ? ಈ ಹೊರೆ ಹೊರೋರು ಯಾರು ? ಇದೇ ನನ್ನ ಕಾಯಕ.

**ಪಾರ್ವತಮ್ಮ :** ಸರಿ ಹೋತು ಬಿಡು; ಇದ್ದಲ್ಲೇ ನಿನಗೆ ಕೈಲಾಸ.

**ಶಂಕ್ರಪ್ಪ :** ಅದೆಲ್ಲ ರಗಳೆ ಸಾಕು. ನೀ ನಾಳೆ ನಮ್ಮೊಟ್ಟಿಗೆ ಗೋಕರ್ಣಕ್ಕೆ ಹೊರಡಲೇಬೇಕು. (ಮೃದುದನಿಯಲ್ಲಿ) ನೋಡು ಬಸವಣ್ಣೆ ನಮಗೂ ಪ್ರಾಯ ಸರಿತು. ಊರು ದೂರ ಕಾಡು ಹತ್ರ ಆಗ್ತಾ ಇದೆ. ಇದೇ ನಮ್ಮ ಕೊನೆ ಗೋಕರ್ಣ ಯಾತ್ರೆಯೇನೋ. ಕೊನೆ ಶಿವರಾತ್ರಿ.

**ಪಾರ್ವತಮ್ಮ :** ಇದೇನು ಅಂತೀರಿ (ಗದ್ಗದ) ಶಿವಶಿವಾ ಹಂಗೆಲ್ಲ ಅನ್ನಬೇಡ್ರಿ ನಿಮಗ ಶಿವನಾಣೆ-ನೋಡೋ ಬಸವಣ್ಣೆಪ್ಪ ಹ್ಯಾಂಗ ಮಾತಾಡ್ತಾರ!

**ಬಸವಣ್ಣೆಪ್ಪ :** ಬುದ್ದಿ, ಬುದ್ದಿ ಬುದ್ದಿ ಇದೇನು ಬುದ್ದಿ, ಅಲ್ಲಾ ನಿಮಗೂ ಮೀಸೆ ಹಣ್ಣಾತು, ಮೈ ಲಡ್ಡಾಯ್ತು. ಬುದ್ದೀನೂ ಸೊರಗಿ ಹೋತೋ ಏನು ಮತ್ತೆ? ನಿಮಗೆ ನನ್ನ ಕೊರಳಾಣೆ, ಈ ಹಸೂ ಆಣೆ ಇದೆ, ಹಂಗೆಲ್ಲ ಅಭದ್ರ ಆಡಬ್ಯಾಡಿ.

**ಶಂಕ್ರಪ್ಪ :** ಹಾಂಗಿದ್ರೆ ನಮ್ಮ ಒಟ್ಟಿಗೆ ಬರ್ತಿಯೋ ಇಲ್ಲೋ.....

**ಬಸವಣ್ಣೆಪ್ಪ :** ಬರ್ತೇನ್ರಪ್ಪಾ ಬರ್ತೇನಿ, ನಿಮ್ಮ ಪಾದದಾಣೆ ಬರ್ತೇನಿ. ಆಯ್ತಾ? ನೀವು ಶಂಕರ-ಪಾರ್ವತಿ ನನ್ನ ಪಾಲಿಗೆ, ನೀವಿದ್ದಲ್ಲೇ ಶಿವರಾತ್ರೆ

**ಶಂಕ್ರಪ್ಪ :** ನಡಿ ಹಾಗಾದ್ರೆ. ಈ ಹಸೂನ ದನದ ಆಸ್ಪತ್ರೆಗೆ ಸಾಗಿಸೋಣ ದಾರೀಲ ಇದೆ.

**ಪಾರ್ವತಮ್ಮ :** (ನಕ್ಕು) ಅಂತೂ ಈ ಸಲನಾದ್ರೂ ನಿನಗೆ ಶಿವಯೋಗ ಫಲಿಸಿತು ಬಿಡು. ಮನಿಗೆ ಬಾ, ಎರಡು ರೊಟ್ಟಿ ಚಟ್ನಿ, ಮೊಸರು ನುಚ್ಚುಕೊಡ್ತೀನಂತ.

ಬಸವಣ್ಣೆಪ್ಪ : (ನಗು) ಹಾಂ ಇದು ಬೇಕಾದ್ರೆ. ಈಗಲೇ ಫಲಿಸ್ತು ನನ ಶಿವಯೋಗ, ಎಲ್ಲಾ ಶಿವನಾಟ. ಅಮ್ಮನೋರೆ, ಯಾರಿಗೆ ಯಾವ ಯೋಗ ಎಲ್ಲಿ ಹೇಗೆ ಫಲಿಸ್ತೈತೊ ಶಿವನೇ ಬಲ್ಲ. (ಸಂವಾದದ ಉದ್ದಕ್ಕೂ ಆಗಾಗ ಹಸು ನರಳಿಕೆ. "ಅಂಬಾ" ದನಿ, ಈಗ ತೇಲಿ ದೂರ ಹೋಗುವದು.)

೨

(ದೃಶ್ಯ ಪಲ್ಲಟಸೂಚಕ ಸ್ವರಜತಿ)

ಹಿನ್ನೆಲೆ : (ಬಸ್ ಅಪಘಾತದ ಗಲಾಟೆ ಗದ್ದಲ ಗೊಂದಲ...)

ಶಂಕ್ರಪ್ಪ : ಇದೇನು ಮತ್ತೆ?

ಪಾರ್ವತಮ್ಮ : ಅಬ್ಬಬ್ಬ! ಭಾರಿ ಗದ್ದಲ ಅಯ್ಯೋ ಅಲ್ಲಿ ನೋಡ್ರಿ ಅಲ್ಲಿ (ಗಾಬರಿ) ಏನೋ ಎಕ್ಸಡೆಂಟು ಆದ್ಹಾಂಗ ಕಾಣಸ್ತದ. ನಮ್ಮ ಬಸ್ಸೂ ನಿಂತಿತಲ್ಲ !

(ಬಸ್ ನಿಂತ ಸದ್ದು ಗದ್ದಲ ಅಡ್ಡತಿಡ್ಡ ಮಾತುಕತೆಗಳ ದನಿಗಳು ತೀವ್ರವಾಗುವವು. ಸದ್ದುಗಳ ಸುರಿಮಳೆ: " ಬಸ್ ನಿಂದಿಸಿರಿ, ಟ್ರಕ್ ಎಕ್ಸಿಡೆಂಟ ಆಗೇದ" "ಓ ಕಂಡೆಕ್ಟರ ಸಾಬ್ರೇ ನಾವೂ ಬರ್ತೀವಿ"; "ನಮ್ಮನ್ನೂ ಒಯ್ಯಿರಿ:" "ಹಾ ಗೋಕರ್ಣಕ್ಕೆ": "ನಾವು ಹಳಿಯಾಳಕ್ಕೆ", "ಹೆಣ್ಣು ಮಕ್ಕಳು ಇದ್ದಾರ್ರೀ, ಡ್ರೈವರ ಸಾಬ ಹೇಳ್ರೀ": ಎಲಾ ಡ್ರೈವರ ಕಂಡಕ್ಟರ ಇಬ್ರೂ ಇಳಿದು ಬಿಟ್ರಲ್ಲಾ"

ಪಾರ್ವತಮ್ಮ : ಅಲ್ರೆ ಇಷ್ಟೆಲ್ಲಾ ಮಂದಿ ನುಗ್ಗಾರ, ನಮ್ಮ ಗಾಡೀ ಒಳಗೆ ಜಗಾ ಎಲ್ಲಿ ಐತಿ?

ಬಸವಣ್ಣೆಪ್ಪ : ಇರ್ಲಿ ಬಿಡಿ ಪಾಪ. ಅವರನ್ನು ನಡುರಸ್ತೇಲಿ ಬಿಟ್ರೆ ಹೇಗೆ? ಬನ್ನಿ ಇತ್ತ ಬನ್ನಿ ನಾನೆದ್ದೆ. ಇಲ್ಲೆ ಜಾಗಾ ಐತಿ ತುಸು, ಪಾಪ, ಅವರಾದ್ರೂ ಏನ ಮಾಡ್ತಾರ?

ಶಂಕ್ರಪ್ಪ : ನೀನೇಕೆ ಎದ್ದಿ? ಹಿಂದುಗಡೆ ನಿನ್ನ ಜಾಗ ಹೋಗ್ತದ ಕೂಡ್ರು ಕುಂತಲ್ಲೇ, ಹುಚ್ಚ ಮೂಳಾ.

ಬಸವಣ್ಣೆಪ್ಪ : ಪರ್ವಾ ಇಲ್ಲ ಯಜಮಾನ್ರೆ, ನೀವು ಕುಂತೇ ಇರಿ. ನಾನು ಒಂದೀಟು ಕೆಳಗಡೆ ಇಳಿದು ನೋಡಿ ಬರ್ತೇನೆ. ಆ ಕೂಗಾಟ ಗೋಳಾಟ

ಏನೆಂತಲ್ಲಾ. ಬಂದೆ-ಬೇಗ ಬಂದೇ ಬಿಟ್ಟೆ: (ಬಸ್ಸು ಇಳಿದು ದೂರ ಹೋಗುವ ಮಾತಿನ ದನಿ)

(ಅತ್ತ ಕೂಗಾಟ ಗೋಳಾಟ ತೀವ್ರ. ನಡುವೆ ಹೆಣ್ಣು ದನಿ ಮಕ್ಕಳ ದನಿ ಕೇಳ್ತಾ ಇದೆ).

**ಪಾರ್ವತಮ್ಮ :** ಬಸವಣ್ಣೀ, ಏ ಬಸವಣ್ಣೀ, ಲಗೂನೆ ಬಾ. ಎಲ್ಲಾ ನೋಡಿಕೊಂಡು ಬಂದ್ಬಿಡು. ಇದ್ದ ಜಾಗ ಹೋದ್ರೆ ಬ್ಯಾರೆ ಸೀಟು ಎಲ್ಲಿ ಸಿಗ್ತದ ನಿನಗs? ಗಾಡಿನೂ ಬಿಟ್ಟು ಹೋಗ್ತದ-ಲಗೂನ ಬಾ.

**ಬಸವಣ್ಣೆಪ್ಪ :** (ಬಸ್ ಹೊರಗಿನಿಂದ) ಹೆದರಬೇಡಿ ಅಮ್ಮನೋರೆ, ಜಾಗ ಎಲ್ಲಿ ಹೋಗ್ತದ. ಇಳಿದವರು ಇಳಿತಾರೆ. ಹತ್ತವರು ಹತ್ತಾರೆ. ಅವರವರ ಜಾಗ ಅವರಿಗೆ-ಕಾಯ್ತಾ ಇರ್ತದೆ. ನಾ ಹೋಗಿ ನೋಡಿ ಬಿಡ್ತೇನೆ.

**ಶಂಕ್ರಪ್ಪ :** ನೋಡ್ದೇನೇ ಈ ಗೊಡ್ಡು ವೇದಾಂತೀ ಅಧಿಕ ಪ್ರಸಂಗ. ಮನೆ ಏನು ಮಾರ್ಗಾ ಏನು? ಇವನಿಗೆ ಪರರ ಉಸಾಬರಿ ಉಸ್ತವಾರಿನೇ ಹಚ್ಚಿಕೊಳ್ಳೋ ಹುಚ್ಚು.

**ಪಾರ್ವತಮ್ಮ :** ಅರೇ ಡ್ರೈವರ-ಕಂಡಕ್ಟರ ಬಂದೇ ಬಿಟ್ರು ತಿರುಗಿ. ನಮ್ಮ ದೀಡಶಾಣ್ಯಾ....ಇನ್ನೂ....

**ಶಂಕ್ರಪ್ಪ :** ಅಕಾ ಅವನೂ ಬಂದ, ಹಾಂ ಗಡಾನೆ ಗಾಡಿ ಹತ್ತು.

**ಬಸವಣ್ಣೆಪ್ಪ :** (ಹೊರಗಿನಿಂದ) ಇಲ್ಲ ರಾಯ್ರೆ, ನನ್ನ ಆ ಗಂಟು ಇತ್ತಕೊಡಿ ನಾ ಈಗಲೇ ಬರೋ ಹಾಂಗಿಲ್ಲ.

**ಪಾರ್ವತಮ್ಮ :** ಯಾಕೋ ಏನಾತು?

**ಬಸವಣ್ಣೆಪ್ಪ :** ಅಲ್ಲ, ಆ ಮುದುಕ ಕುರುಡ ಮೈ ಜಜ್ಜಿ ಹೋಗಿದೆ. ಓ ಆ ಕಡ ಅವಳು ಅವನ ಸೊಸೆ ಕಾಲು ಮುರಕೊಂಡು ಕೂಗ್ತಾವಳೆ. ಇಬ್ಬರು ಮಕ್ಕಳು ಗೋಳ ಹೋಯ್‌ಕೊಳ್ತಾವ್ರೆ.

**ಶಂಕ್ರಪ್ಪ :** ಅಲ್ಲೆ ಮತ್ತೆ ಆ ಊರ ಮಂದಿ ಇದ್ದಾರೆ?

**ಬಸವಣ್ಣೆಪ್ಪ :** ಇಲ್ರಿ ಶಂಕರಪ್ಪನೋರೆ, ಇಲ್ಲೆ ಹಂತಾಗೆ ಊರೇ ಇಲ್ಲ, ಒಳಗೆ ಮೂರು ಫರ್ಲಾಂಗು ದೂರ ಐತಿ. ಈ ಕುಟುಂಬ ಅಲ್ಲದೆ ಉಳಿದ ಜನ ಆಚೆ-ಈಚೆ ಹಳ್ಳಿಗಳಿಗೆ ಹೆದರಿ ಹೋದ್ರು ಇನ್ನು ಉಳಿದವ್ರು ನಮ ಬಸ್ಸು ಹತ್ತಿದ್ರು.

ಪಾರ್ವತಮ್ಮ : ಅಲ್ಲೋ ಬಸವಣ್ಣೋ, ನೀನೂ ಹತ್ತು ಮತ್ತೆ. ಅವರೆಲ್ಲ ಬಿಟ್ಟು ಬಂದ್ರೂ ನೀ ಮಾತ್ರ....

ಬಸವಣ್ಣೆಪ್ಪ : ಅಂತ ನಾ ಬಿಡಾಕಿಲ್ರೀ, ಆ ಕಾಲ್ಮುರಕೊಂಡ ಹೆಣ್ಣುಮಗಳ ಕಂಡೇ ನಂಗೆ ನಮ್ಮ ಬೆಳ್ಳಿ ಹಸೂ ನೆನಪಾಯ್ತಿ. ಕಂಡೂ ಕಂಡೂ ನಾ ಅವರ್ನ ಬಿಟ್ಟು ಬರೋದು ಹ್ಯಾಂಗ?

ಡ್ರೈವರ ದನಿ: ಎಲ್ಲಾ ಪ್ಯಾಸಂಜರ್ಸ ಬಂದ್ರೇನೋ, ದೇಖೋಜಿ, ಕಂಡಕ್ಟರ; ಗಡಾಗಡಾನೆ ಬರ್ರಿ. ಭಾರಿ ಲೇಟಾತು!

ಶಂಕ್ರಪ್ಪ : ಥೂ ನಿನ್ನ, ಅವರು ಬೇವರ್ಶಿ...

ಬಸವಣ್ಣೆಪ್ಪ : ನಾನೂ ಬೇವರ್ಶಿನೇ ಇದ್ದೆ, ಐವತ್ತು ವರ್ಷ ಹಿಂದೆ ನಿಮ್ಮ ತಂದೆ ದೊಡ್ಡ ದಣಿಗಳೇ ತಂದು ಸಾಕಿ ನನ್ನ ಒಬ್ಬ ಮನುಶ್ಯಾನಾಗಿ ಮಾಡಿದ್ರಲ್ಲ. ಛೇ ಛೇ ನಾ ಒಲ್ಲೆ. ನೀವು ಮುಂದಾಗಿ, ನಾ ಮುದುಕ ಸೊಸೆ ಮಕ್ಕಳ ತಾವಿಗೆ ಹೋಗಿ ನೋಡ್ಕೊಳ್ತೀನಿ.

ಪಾರ್ವತಮ್ಮ : ಮತ್ತೆ ನಮ್ಮ ಜತೆ ಶಿವರಾತ್ರೆ ಯಾತ್ರೆ ಮಾಡೋದು ಹ್ಯಾಂಗೊ?

ಬಸವಣ್ಣೆಪ್ಪ : ಅದೆಲ್ಲಿ ತಪ್ತದ್ರಿ? ನಾ ಅವರನ್ನ ಅವರ ಆ ಊರ್ಗೆ ಮುಟ್ಟಿಸಿ ಹಿಂದಾಗಡೆ ಬಂದ ಬಿಡ್ತೀನಿ, ಈಗ ಬಸ್ಸಿಗೇನು ಬರಗಾಲ; ತಾಸಿಗೊಂದು ಬರ್ತೈತಿ. ಪಾಪ ಅವರದಾದ್ರೂ ಏನ....

ಶಂಕ್ರಪ್ಪ : ಕರ್ಮವೊ....

ಬಸವಣ್ಣೆಪ್ಪ : ಅವರ ಕರ್ಮ ನಮ್ಮ ಧರ್ಮ, ಇರ್ಲಿ ಬಿಡಿ.

(ಕಂಡಕ್ಟರನ ಗಂಟೆ,'ಹಾಂ ಗಾಡಿ ಹತ್ರಿ, ಲೇಟಾತು ಹತ್ರಿ, ಹತ್ರಿ,') ಅಮ್ಮಾವ್ರೆ ಮುಂದಾಗಿ, ನಾ ನಿಮ್ಮ ಬೆನ್ನಿಗೆ ಇದ್ದೇನೆ. ಈ ಸಲ ಶಿವರಾತ್ರಿ ತಪ್ಪಿಸೋದಿಲ್ಲ, ನೋಡಿ ನಿಮ್ಮ ಹುಡುಕಿಕೊಂಡು ಬರ್ತೇನೆ-ನೀವು ಇರೋ ಭಟ್ರ ಮನೇ ತಟ್ಟಿಕೋಣಗೆ, (ದನಿ ದೂರ ಆಗುತ್ತಿದ್ದಂತೆ ಬಸ್ ಹೊರಡುವ ಸದ್ದು. ಅವನ ಮಾತಿಗೆ ಗಂಡ ಹೆಂಡತಿ ನಗುತ್ತಿದ್ದಂತೆ ಸದ್ದು ತೇಲಿ ಹೋಗುತ್ತದೆ.)

೩

(ದೃಶ್ಯ ಪಲ್ಲಟ ಸೂಚಕ ಸ್ವರಜತಿ)

(ರಸ್ತೆ ಪಕ್ಕದ ಊರಿನಲ್ಲಿ ಅಪಘಾತಕ್ಕೆ ಬಲಿಯಾದ ಕುಟುಂಬದೊಡನೆ)

ಬಸವಣ್ಣೆಪ್ಪ : ನಾ ಬಂದೆ ಅಜ್ಜಾ, ತಡಿ, ನಿಮಗ ಹೊತ್ತು ತಂದ ಆಳಿಗೆ ಈಟ ರೊಕ್ಕ ಕೊಟ್ಟು ಬರ್ತೇನೆ. ಆ ತನಕ ನಿಧಾನಿಸು, ತಂಗೀ, ಇಕೊ ಬಂದೇ ಬಿಟ್ಟೆ, ಇನ್ನು ಹೆದರಬೇಡ್ರಿ, ನಾನಿದ್ದೇನೆ.

ಅಜ್ಜ : ಎಂಥಾ ಪುಣ್ಯ ಕಟ್ಟಿಕೊಂಡೆಯಪ್ಪಾ. ಆ ಬಸ್ ತುಂಬ ಜನ, ಆದರ ಎಲ್ಲಾ ಹೊರಟೇಹೋದ್ರು. (ನರಳುತ್ತ ಮರುಗುತ್ತ ಮಾತಾಡ್ತಾನೆ ಜತೆಗೆ ಸೊಸೆ ಮಕ್ಕಳ ನರಳಿಕೆ ಅಳು) ನೀನೂ ಹೋಗಿದ್ರೆ ನಮ್ಮ ಗತಿ ಗಂಗವ್ವನ ಕಾಣೋದೆ ಆಗಿತ್ತು...ನೀ ಒಬ್ಬ ಉಳಿದಿ. ಕಂಬಳೀಲ ಹೊರಸಿ ಇಲ್ಲೆ ಮನೆಗೆ ತಂದು ಬಿಟ್ಟಿ ಅಪ್ಪಾ.

ಬಸವಣ್ಣೆಪ್ಪ : ಬಿಡೋದಿಲ್ಲ ಅಜ್ಜಾ, ಇನ್ನು ನಿಮ್ಮ ಒಟ್ಟೇ ಇದ್ದು ಬಿಡ್ತೀನಿ, ಅಯ್ತೋ

ಸೊಸೆ : ಅಬ್ಬಬ್ಬಾ ಹಾಯ್ (ಅಳುವಳು)

ಬಸವಣ್ಣೆಪ್ಪ : ತಂಗೀ, ತಡೆ ಅಳಬ್ಯಾಡ ನಾನೇ ಎತ್ತಿ ಗೋಡೆ ಹಂತಾಗ ಕೂಡಿಸ್ತೇನೆ ಹಾಂ ಈಗ ಹೇಗೆ? ಅರಾಮಾತಲ್ಲಾ ?

ಸೊಸೆ : ಅಯ್ಯೋ ಅಪ್ಪಾ, ಬಾಯಿ ಕೊರಟಾಗ್ಯೆತೆ. ನೀರು.....ನೀರು ಆಂ....ನನ್ನ ಮಕ್ಕಳು,

ಬಸವಣ್ಣೆಪ್ಪ : ಇಲ್ಲೇ ಅವ್ರೆ ಪಾಪ! ಅತ್ತೂ ಅತ್ತೂ ಸುಸ್ತಾಗಿ ಬಿದ್ದವ್ರ ದಾರಿ ಉದ್ದಕೂ ನಿಮ್ ಎಳೆಮಗಳು ನನ್ನ ಹೆಗಲ ಮೇಲೆಯೇ ನಿದ್ದೆ ಮಾಡಿದಳು ಈಗ ಎದ್ದು ಅಳಲಿಕ್ಕೆ ಹತ್ಯಾಳ, ತಡೀರಿ. ಗಡಾನೆ ನೀರು ತಂದು ಕೊಡ್ತೇನೆ, ಅಜ್ಜಾ, ಒಂದಿಷ್ಟು ಗಂಜಿ ಬೇಯಿಸ್ತೇನೆ.

ಅಜ್ಜಾ : ಅಯ್ಯೋಪ್ಪಾ.

ಬಸವಣ್ಣೆಪ್ಪ : ನಾ ಬಸವಣ್ಣೆಪ್ಪ, ಅಯ್ಯಪ್ಪಾಲ್ಲ ಅಜ್ಜಾ. (ನಗುತ್ತಾನೆ)

ಅಜ್ಜಾ : ಯಾರೇ ಇರವಲ್ಲದೇಕೆ. ನಮ್ಮ ಪಾಲಿಗೆ ನೀನೇ ದೇವರಪ್ಪಾ. ನೀನೇ ನನ್ನ ಮಗಾ (ಒಮ್ಮೆಲೆ ಬಿಕ್ಕುತ್ರ) ನನ್ನ ಮಗಾ ಅವಂದೂ ನಿನ್ನದೇ ಹೆಸರು ಬಸಪ್ಪಾ. ಪಾಕಿಸ್ತಾನ ಯುದ್ಧಕ್ಕ ಹೋದಾವ (ಅಳು

ಒತ್ತರಿಸುತ್ತದೆ).

**ಸೊಸೆ :** ಮಾಂವಾ, ಅದೆಲ್ಲಾ ಏನು ಹಳೇ ನೆನಪು ಮಾಡಿಕೊಳ್ತಿ. ಸುಮ್ಮನೆ ಬಿದ್ದುಕೊಂಡಿರು. ಆಗಿ ಹೋದದ್ದಕ್ಕೆ.... (ಅವಳಿಗೂ ಅಳು ಒತ್ತರಿಸುತ್ತದೆ).

**ಬಸವಣ್ಣೆಪ್ಪ :** ಎಲಾ, ಎಲಾ, ಎಲಾ....ನೀನೂ ಶುರು ಮಾಡಿದೆಯಾ? ಮುದಿ ಮಾವಂಗೆ ಸಮಾಧಾನ ಮಾಡೋದು ಬಿಟ್ಟು ನೀನೂ ಗೋಳೋನೆ ಅತ್ತರೆ ನಾನಾರ ಏನು ಮಾಡಲಿ? ಛೇ, ಛೇ ಸುಮ್ಮನಿರಿ ದುಃಖ ಮನುಷ್ಯಾಗೆ ಅಲ್ಲದೆ ಮತ್ತೆ ಮರಕ್ಕ, ಮೊರಡಿಗೆ ಬರ್ತಾವೇನು? ನಾನಿದ್ದೇನೆ ಬಿಡು. ಅಳಬ್ಯಾಡ ತಂಗೀ ಅಜ್ಜಾ ನೀನೂ ತುಸಾ ನಿದ್ದೆಮಾಡಿ. ನಾ ಒಳಗೆ ಹೋಗಿ ಗಂಜಿ ಬೇಯಿಸ್ತೀನಿ. ಮೊದಲ ಹೊಟ್ಟೆ ಚಿಂತೆ, ಆಮೇಲೆ ಮದ್ದುಗಿದ್ದು, ಏನಂತಿ ಬಡೂರಿಗೆ ಬಡವರೆ ಗತಿ, ತಂಗಿ ಬೆಂಕಿ ಪೊಟ್ಣ ಎಲ್ಲ ಐತಿ?

**ಸೊಸೆ :** ಮಾಂವಾ ನೋಡಿದೆಯಾ? ಇಂವಾ ದೇವತಾ ಮನುಶ್ಯಾ. ಎಲ್ಲಿಗೆ ಹೊರಟ, ಎಲ್ಲಿಗೆ ಬಂದ? ಈಗ ನಮ್ಮ ಬಗ್ಗೆ ದುಡೀತಾನೆ ಗೋಕರ್ಣ ಶಿವರಾತ್ರಿಗೆ-

**ಅಜ್ಜಾ :** ಅವನ ಗೋಕರ್ಣ ಶಿವರಾತ್ರೆ ಇನ್ನು ಇಲ್ಲೇ ಆತು ಬಿಡು ಪಾಪ.

## ೪

(ದೃಶ್ಯ ಪಲ್ಲಟ ಸೂಚಕ ಸ್ವರಜತಿ)

(ಹಿನ್ನೆಲೆ : ಗೋಕರ್ಣ ಮಹಾಬಲೇಶ್ವರ ದೇವಸ್ಥಾನ, ಜನಸಂದಣಿ, ಪೂಜಾರ್ಥಿಗಳ ಗಲಭೆ; ಶಿವಯೋಗದ ಪುಣ್ಯದಿನ, "ಹಾಂ ಹಾಂ ಬಾಜೂ ಸರೀರಿ".... "ಹೋಯ್ ಪುರಾಣಿಕರೇ, ಎಲ್ಲಿ ಹೋದ್ರಿ.," "ಮೊದಲು ತಲೆ ಆಣೆ ಪಾಸು... ಪ್ರವೇಶ ತಿಕೀಟು ಪಡೀರಿ ಆ ಅಲ್ಲಿ....ಅಲ್ಲೇ" "ಕ್ಯೂ ಕ್ಯೂ ಸಾಲಾಗಿ ನಿಲ್ಲಿರಿ" "ಏನಪ್ಪಾ ಮುಂದೆಸಾಗು, ಆಚೆ ಈಚೆ ಏನು ಕಣ್ಬಿಡ್ತಿ?" ಇತ್ಯಾದಿ ಕೂಗುಗಳ ಗದ್ದಲದ ಹಿನ್ನೆಲೆ.)

**ಪಾರ್ವತಮ್ಮ :** ಅಲ್ರೀ, ನಮ್ಮ ಬಸವಣ್ಣೀ ಬರಲೇ ಇಲ್ಲ-ಅಲ್ಲ ನಿನ್ನೆ ಸಂಜೆ. ರಾತ್ರಿತನಕ ಕಾದೇ ಕಾದಿದ್ವಿ.

ಶಂಕ್ರಪ್ಪ : ಅವಂದೇನು ಪಾರ್ವತಿ ಬಿಡು. ಅಂವ ಮನಸುಖರಾಯ. ಭಾರಿ ಜಿದ್ದಿ ಆಸಾಮಿ. ಆ ಹಸು ಬಿದ್ದ ಹಳ್ಳಾಗೇ ಬಿದ್ದಿರಬೇಕು. ನೀ ನಿಂದಿರಬ್ಯಾಡ ನೂಕು ನುಗ್ಗಲು ನನ್ನ ಹಿಂದೆ ಬಾ.

ಪಾರ್ವತಮ್ಮ : ಬರಾಕ ಹತ್ತೇನಲ್ಲ, ಅಂವ ಹಾಂಗೆ ಮಾಡ್ತಾನ? ಬಂದೆ ಬರ್ತಾನ-ಮಾತು ಕೊಟ್ಟಾನ ಮತ್ತೆ! ಭಟ್ರೇ ನಮ್ಮ ಆಳ್ರೀ....

ಭಟ್ಟ : ಹಾಂ, ಅವನಿಗೇನು ಧಾಡಿ; ನಿನ್ನೆನೇ ಬಂದು ಬೇರೆ ಭಟ್ರ ಇಳಿದಿರಬೇಕು. ಯಾರೋ ಅವನನ್ನು ತಮ್ಮಲ್ಲಿಗೆ ತಕ್ಕೊಂಡು ಹೋದ್ರು ಹಾಂ! ಇಲ್ಲೆ ಗುಡೀಲಿ ಸಿಗ್ತಾನ ನೋಡಿ, ಇದ್ನೋಡಿ ಗುಡಿಯೊಳ ಬಂದು ಹಾಂ, ಅದೋ ಅಲ್ಲೇ ಆತ್ಮಲಿಂಗ ಅದೆ. ನೀರೂ ಬಿಲ್ವಪ ಹಾಕಿ. ನಾ ಹೋಗಿ ಮತ್ತೊಂದು ಪಾರ್ಟಿ ತರ್ತೇನೆ. ಹಾಂ ಪೂಜ ಮುಗಿಸಿ ಸೀದಾ ಬಿಡಾರಕ್ಕೆ ತಿರುಗಿ ಹೋಗಿ. ಚಂಬು ಹರಿವಾಣ ಶಾಬೀತು ಇರಲಿ ಮತ್ತೆ ಹಾಂ,

ಪಾರ್ವತಮ್ಮ : ಅಯ್ಯಪ್ಪಾ ಏನು ಸೆಕೆರೀ ಇಲ್ಲಿ ಈ ಗರ್ಭಗುಡೀ ಒಳಗ? ಒಂದು ಬಟಾಟೆ ಇಟ್ರ ಇಷ್ಟೊತ್ತಿನಾಗ ಬೆಂದು ಹೋಗ್ತಿತ್ತು ನೋಡ್ರಿ.

ಶಂಕ್ರಪ್ಪ : ಕೋಳಿ ತತ್ತಿ ಇಟ್ರೆ ಅದು ಈ ಕಾವಿಗೆ ಮರಿಹಾಕಿ ಆ ಮರಿನೂ ಸತ್ತು ಹೋಗ್ತಿತ್ತು.

ಪಾರ್ವತಮ್ಮ : (ಗಾಬರಿ) ಸಾಕು ಬಾಯ್ಮುಚ್ರಿ. ದೇವರ ಗುಡೀ ಒಳಗ ಕೋಳಿ ತತ್ತಿಯ ನೆನಪಾಯ್ತೇ? ಭಸ್ಮದುಂಡೆ ಮಾತಾಡ್ರಿ.... ಅಭದ್ರ, ಅಮಂಗಲ ಶಿವ ಶಿವ....

ಶಂಕ್ರಪ್ಪ : ಅಮಂಗಲಾ ಅಂದಿ, ಅಲ್ನೋಡು ಆ ಜುಟ್ಟದ ತಲೆಗಳಾಚೆ-ಅಂವ ನಮ್ಮ ಬಸವಣ್ಣ ಅಲ್ವೇನೆ?

ಪಾರ್ವತಮ್ಮ : ಹೌದು, ಹೌದು: ಅಂವನs-ಇಕಾ ನಮಕಿಂತ ಮುಂದೆ ಯಾವಾಗ ಬಂದ್ನೋ ಏನೋ;

ಶಂಕ್ರಪ್ಪ : ಬಸವಣ್ಣಪ್ಪಾ, ಏ ಬಸವಣ್ಣ.

ಪಾರ್ವತಮ್ಮ : ಏನ ಒದರತೀರಿ ಸುಮ್ನೆ? ಗದ್ದಲದಾಗ ಏನೂ ಯಾರಿಗೂ ಕೇಳಿಸೋದಿಲ್ಲ, ಹೋಗಲಿ ಬಿಡ್ರಿ, ಗುಡಿ ಹೊರಗಡೆ ಹೋದಾಗ ಸಿಕ್ಕೇ ಸಿಕ್ತಾನ ಮತ್ತೆ!

ಶಂಕ್ರಪ್ಪ : ಪಕ್ಕಾ ಆಸಾಮಿ. ಬಂದೇ ಬಿಟ್ಟ ಕೊನೆಗೆ, ಎಲ್ಲಿ ಇಳಿದಾನೋ! ಬಾ, ಲಗೂ ಮುಗಿಸಿ ಹೋಗೋಣ-ಹೊರಗಡೆ-ಉಶ!

ಪಾರ್ವತಮ್ಮ : ನೀವೇ ಅಂದೀರಿ ಜಿದ್ದಿನ ಮನುಷ್ಯಾ ಅಂತ. (ಹಿಂದಿನಿಂದ ಜನ ಒತ್ತಿ ಬರುತ್ತಾರೆ) ಅಯ್ಯಪ್ಪಾ, ಇದೇನು ಯಮದಾಟ ಅಂತೀನಿ, ಹೋಗ್ರಿ, ಮುಂದಾಗ್ರೀ

(ಹಿನ್ನೆಲೆ : ಭಜನೆ ಮಂಡಳಿ : "ಶಿವಾಯ ನಮ ಓಂ, ಶಿವಾಯ ನಮ ಓಂ, ನಮಃ ಶಿವಾಯ...")

ಶಂಕ್ರಪ್ಪ : ನೀ ಬಾ ನನ್ನ ಬೆನ್ನಿಗೇ. ಓಂ ನಮಃ ಶಿವಾಯ,

ಪಾರ್ವತಮ್ಮ : ಸಾಂಬ ಶಿವಾರ್ಪಣ ಮಸ್ತು.

ಶಂಕ್ರಪ್ಪ : (ನಕ್ಕು) ಮಸ್ತಾಯ್ತು ಬಿಡು. ಆ ಪೋಲಿಸನ ತಲೆ ಮ್ಯಾಲ ನೀರ ಎರೆದಿ.

ಪಾರ್ವತಮ್ಮ : ಇರ್ಲಿ ಬಿಡ್ರಿ... ನಮ್ಮ ಶ್ರದ್ಧಾಮುಖ್ಯ-ಶಿವ ಅಲ್ಲೇ ತಲೆ ಒಡ್ಡಾನ. ನಡೀರಿ ಒಮ್ಮೆ ಗುಡಿ ಹೊರಗೆ ಬೀಳೋಣಂತ.

೫

(ದೃಶ್ಯ ಪಲ್ಲಟ ಸೂಚಕ ಸ್ವರಜತಿ)

(ಹಿನ್ನೆಲೆ : ನಿವೇದಕ : ಮಾಘ ಬಹುಳ ಚತುರ್ದಶೀ ಮರುದಿನ ಅಮಾವಾಸ್ಯೆ. ಸಮುದ್ರ ತೀರದಲ್ಲೇ ಸಾವಿರ ಗಟ್ಟಲೇ ಜನಸ್ತೋಮ. ಸಮುದ್ರ ಸ್ನಾನ ಸಾಗರೇಶ್ವರ ಪೂಜೆ, ಪಿತೃತರ್ಪಣಾದಿ ಪುಣ್ಯ ಕರ್ಮಗಳಿಗಾಗಿ ಜನರ ನುಗ್ಗಾಟ, ನಡುವೆ ದಾರಿಯುದ್ದಕ್ಕೂ ಬೈರಾಗಿ ಭಿಕ್ಷುಕರ-ಕೂಗಾಟ ವಿವಿಧ ಧ್ವನಿಗಳು;

"ಸಂಕಲ್ಪದ ನೀರು ಬಿಡಿ....ಹಾಂ...ಗೋಕರ್ಣಮಂಡಲೇ, ಗೋರಾಷ್ಟ್ರ ದೇಶೇ ಶತಶೃಂಗ ಪರ್ವತೋಪಾಂತೆ" (ನಡುವೆ ಗದ್ದಲ) ಸ್ನಾನಾ ನಂತರ ತರ್ಪಣ ಕರ್ಮ ಮಹಂ ಕರೀಷ್ಯೇsss "ಭೂದೇವಾನ್ ತರ್ಪಯಾಮಿ, ಭುವರ್ದೇವಾಂಸ್ತರ್ಪಯಾಮಿ "ಹಾಂ ಈಗ ಹೋಯಿಗೆ ಲಿಂಗ ಮಾಡಿ. ಸಾಗರೇಶ್ವರ ಪೂಜಾಂ ಅಹಂ ಕರೀಷ್ಯೇs ಹೂ ಅಕ್ಷತೆ ಏರಿಸಿ"

ಸುವರ್ಣ ಪುಷ್ಪಂ ದಕ್ಷಿಣಾಂ ಸಮರ್ಪಯಾಮಿ, ಇಲ್ಲೇ ಕೊಡಿ ದಕ್ಷಿಣೆ ರೊಡ್ಡು."

"ಸರ್ವದುರಿತೋಪಶಮನಂ ಶಂಭೋ ಪಾದೋದಕಂ ಶುಭಂ ತೀರ್ಥಕುಡೀರಿ" ಇವೆಲ್ಲ ಧ್ವನಿಗಳು ಬೇರೆ ಬೇರೆ ತೀವ್ರ ಮಂದ್ರ ಕಂಠಗಳಿಂದ ಬೇರೆ ಬೇರೆ ಅಂತರದಲ್ಲಿ, ಹಿನ್ನೆಲೆಗೆ ಕಡಲ ಭೋರ್ಗರೆತ, ತೆರೆಗಳ ಮೊರೆತ)

ಭಟ್ರು : ಬನ್ನಿ, ಬನ್ನಿ ಅವರು ಬಿಕ್ಕ ಬೇಡೋ ಪರದೇಶಿಗಳು, ಅವರಿಗೆ ಹಾಕ್ತಾ ನಿಂತ್ರೆ ಹಣ ಸಾಲ್ದು ಹಗಲೂ ಸಾಲ್ದು, ಬನ್ನಿ ಲಗೂನೆ ಕಮಾನ್ (ತಿರುಕರ ಪಿಡುಗು)

ಪಾರ್ವತಮ್ಮ : ಇಲ್ಲಿ ನೋಡ್ರೀ ಪಾಪ; ಎಂಥೆಂಥ ಅವಸ್ಥೆ ಈ ಭಿಕಾರಿಗಳದು.

ಶಂಕ್ರಪ್ಪ : ಹೂಂ, ನಮ್ಮ ಬಸವಣ್ಣೀ ಇದ್ರೆ ಇಲ್ಲಿ ನಿಂತೇ ಬಿಡಾಂವಾ, ಇವರಿಗೆ ಬಿಕ್ಕೆ ಹಾಕ್ತಾ.

ಪಾರ್ವತಮ್ಮ : ಅಂದ್ಹಾಂಗ ಆ ಪುಣ್ಯಾತ್ಮ ಎಲ್ಲಿ ಹೋದ ಅಂತೀನಿ. ನಿನ್ನೆ ಇಡೀ ದಿನ ಭೆಟ್ಟಿ ಇಲ್ಲ ಅವಂದು.

ಶಂಕ್ರಪ್ಪ : ಇಕಾ ನಮ್ಮ ಭಟ್ರು ಬಂದ್ರು. ನನ್ನ ಹುಡುಕೋತ, ನಾವು ರೆಡಿ ಭಟ್ರೇ;

ಭಟ್ರು : ರೆಡೀನಾ? ಆಲ್‌ರೈಟ, ಬನ್ನಿ ಕಮಾನ್! ಹಾಂ!

ಪಾರ್ವತಮ್ಮ : ಇದೇನು ಭಟ್ರೇ, ಮಡೀಲೆ ಇದ್ದೀರಿ. ಪುಣ್ಯ ಪರ್ವದ ಕಾಲ ಮತ್ತೆ ಇಂಗ್ಲೀಷ ಪಿಸಿ ಪಿಸಿ ಮಾತಾಡ್ತೀರಿ.

ಭಟ್ರು : ಈಗ ಶಿವರಾತ್ರಿಲಿ ಮಡಿ-ಮೈಲಿಗೆ ಏನೂ ಇಲ್ಲ. ಹಾಂ, ದೇವಸ್ಥಾನದ ಮುಂದೆ ಧ್ವಜಗಂಬಕ್ಕೆ ಗರುಡ ಕಟ್ಟಿದ ದಿವಸದಿಂದ ಕುಲಗೋತ್ರ ಜಾತಿ ಮೇಲು-ಕೀಳು ಏನೂ ಇಲ್ಲ ಹಾಂ. ಈ ಕ್ಷೇತ್ರದಲ್ಲೇ ಹಾಂ ಕಳೆದ ವರ್ಷ ನಾನೇ ಇಬ್ಬರು ಬಿಳಿ ಮೋರೆ ಫಿರಂಗಿ ಜೋಡಿಯನ್ನು ದೇವರ ಪೂಜೆ ಮಾಡಿಸಿದ್ದೆ. ವ್ಹಾಯಿಟ ಜಂಟಲ್ ಮ್ಯಾನ! ಹಾಂ! ಏನಂತೀರಿ?

ಶಂಕ್ರಪ್ಪ : ಅನ್ನೋದೇನು? ದೇವರ ಪ್ರಾರಬ್ಧ.

ಪಾರ್ವತಮ್ಮ : ಅಲ್ರಿ, ಅಲ್ಲೇ ನೋಡ್ರಿ ಅಲ್ಲೇ! ಕಡಲ ಅಂಚಿಗೆ ಅಲ್ಲೇ ಕಾಣ್ತಾನಲ್ಲ ಅಂವ ನಮ್ಮ ಬಸವಣ್ಣೀ ಅಲ್ಲೇನು ?

ಶಂಕ್ರಪ್ಪ : ಹೌದು ಮತ್ತೆ, ಸಾಗರೇಶ್ವರ ಲಿಂಗ ನೀರಿಗೆ ಚಲ್ಲಿ ಮುಳಕ ಹಾಕಾಕ ಹತ್ತಿದ್ದಾನೆ.

ಭಟ್ರು : ಹಾಂ, ಹೋಗಿ ನೀವೂ ಅಲ್ಲಿಗೇ, ನಡೀರಿ ನಾನೂ ಬಂದೆ.

ಪಾರ್ವತಿ : ಬಸವಣ್ಣೀ ಏ ಬಸವಣ್ಣೆಪ್ಪಾ.

ಶಂಕ್ರಪ್ಪ : ಏ ಹುಚ್ಚಿ ಕೂಗಿ ಗಂಟಲಾ ಹರಕೋತಿಯೇಕೆ? ಕಡಲ ಅಬ್ಬರ! ಎದ್ರು ಗಾಳಿ, ನಿನ್ನ ದನಿ ಅವನಿಗೇನು ಕೇಳೂದು?

ಭಟ್ರು: ಹಾಂ, ಹಿಡಿದ ವಿಧಿ ಮೊದಲು ಮುಗಿಸಿರಿ. "ಸಮುದ್ರ ತೀರೆ ರತ್ನಾಕರೆ, ಸ್ನಾನಂ ಅಹಂಕರಿಷ್ಯೇ ತದಂಗ ಭೂತಾಂ ಸಾಗರೇಶ್ವರ ಪೂಜಾಂ...(ಇತರ ಗದ್ದಲ ಭಟ್ಟರ ಮಂತ್ರವನ್ನು ಮುಳುಗಿಸುತ್ತದೆ. ತೆರೆಗಳ ಅಬ್ಬರ ತೀವ್ರ ಕೇಳಿಸುತ್ತದೆ.) ಹೂಂ ಬನ್ನಿ ನೀರಲ್ಲೇ ನಿಲ್ಲಿ ಹೆದರಬೇಡಿ ಪಾರ್ವತಮ್ಮನೋರೆ.

ಅಕಾ ಅಲ್ನೋಡು, ಬಸವಣ್ಣೀ ಆ ಗುಂಪಿನ ಜತೆ ಸಮುದ್ರ ಸ್ನಾನ ಮುಗಿಸಿ ಹೊಂಟ ತಿರುಗಿ, ಏ ಬಸವಣ್ಣೀ sss

ಪಾರ್ವತಮ್ಮ : ಹೋಗಲಿ ಬಿಡಿ, ಮೊದಲು ನಮ್ಮ ಸಮುದ್ರ ಸ್ನಾನ ಮುಗಿಸೋಣ. ಅಯ್ಯಪ್ಪಾ ಹ್ಯಾಂಗ ತೆರಿ ಬಂದು ಬಡೀತಾವ ಇವು. ಕಾಲsಕುಸಿತಾವ,

ಶಂಕ್ರಪ್ಪ : ಹೆದರಬೇಡಲೇ ಬಾ, ಕಡಲಿಗೆ ಬಂದು ತೆರೆಗೆ ಅಂಜಿದ್ರೆ ಹೇಗೆ?

ಪಾರ್ವತಿ : ಹಂಗ ಬ್ಯಾಡ್ರಿ, ನನಗೆ ಹೆದರಿಕೆ ಆಗ್ತದ, ನಾ ಒಲ್ಲೆ ಅಯ್ಯಯ್ಯೋ....

(ಇಬ್ಬರೂ ನಗುತ್ತ, ಪಾರ್ವತಿ ಹೆದರಿ ಚೀರುತ್ತಿದ್ದಂತೆ)

೬

(ದೃಶ್ಯ ಪಲ್ಲಟ ಸ್ವರಜತಿ)

(ಹಿನ್ನೆಲೆ: ರಥೋತ್ಸವದ ಕೋಲಾಹಲ. ಜನ ಜಾತ್ರೆ ಗದ್ದಲ ವಾದ್ಯಗಳ ಮೊರೆತ. ದೂರದ ಅಂಗಡಿಯಿಂದ ಹಳೇರಿಕಾರ್ಡ, "ತೇರನೆಳೆಯುತಾರ ತಂಗೀ"- ಮಲ್ಲಿಕಾರ್ಜುನ ಮನ್ಸೂರ ಅವರದು)

ಭಟ್ಟ : ಹಾಂ ಶಂಕ್ರಪ್ಪನೋರೆ, ಪಾರ್ವತಮ್ಮ ಎಲ್ಲಿ? ಹಾಂ ಇಲ್ಲೇ ಇಲ್ಲೇ ಈ ಮಾಳಿಗೆ ಕಟಾಂಜನಾ ಹಿಡಿದು ನಿಲ್ಲಿ, ಆಲ್‌ರೈಟ. ಅದೋ ತೇರು, ಹಾಂ! ದೇವರ ರಥಾರೋಹಣ ರಥ ಹೊರಟಿದ್ದು ಎಲ್ಲ ಇಲ್ಲಿಂದ ಚೊಕ್ಕಕಾಣ್ತದೆ. ಹಾಂ ನಿಮ್ಮ ಬಸಪ್ಪ ಕಂಡ್ರೂ ಕಂಡ, ಆಂ ಏನಂತೀರಿ?

ಪಾರ್ವತಮ್ಮ : ಅಬ್ಬಾ, ಇದೆಂಥ ರಥಾನ್ರಿ-ದೆವ್ವದಂಥ ಗಾಲಿ. ಅಲ್ರೀ ಒಂದಲ್ಲ ಎರಡಲ್ಲ ಆರುಗಾಲಿಗಳು.

ಶಂಕ್ರಪ್ಪ : ಲೇ ಹುಚ್ಚಿ, ಬರಿ ಗಾಲೀನೇ ನೋಡ್ತಾ ನಿಂತಿಯೇನು? ಅಲ್ಲೆ ಮೇಲ ಮಂಟಪದಾಗ ದೇವರ ನೋಡು. ಇಕೋ ದೇವರಿಗೆ ಬಾಳೆಹಣ್ಣು ಹೊಡಿ.

ಪಾರ್ವತಮ್ಮ : ಇಶ್ ನಾ ಒಲ್ರಿ, ಹೊಡೆಯೋಕೆ ಬರವಲ್ದು. ಸುಮ್ನsss ಹಣ್ಣು ಹಾಳಾಗ್ತಾವ.

ಶಂಕ್ರಪ್ಪ : ಮತ್ತೇನು? ಬರೇ ನುಂಗಾಕ ಬರ್ತಾವೇನು ಬಾಳೆಹಣ್ಣು - ಆ ಬಸವಣ್ಣ ಹಾಂಗ? ಎಲಾ ಇದೇನು ಕಣ್ಣಾಗ ನೀರು?

ಪಾರ್ವತಮ್ಮ : (ಅಳುವ ದನಿಯಲ್ಲಿ) ಅಂವ ಎಲ್ಹೋದ? ಜತೆಗೆ ಶಿವರಾತ್ರಿ ಯಾತ್ರಿ ಮಾಡೋಣ ಅಂತ ಆಣಿ ಮಾಡಿ ಹೇಳಿದ್ದ-ಬಂದ್ರೂ ಕಾಣದೇ ಉಳಿದೇ ಬಿಟ್ಟ! ಬಸವಣ್ಣೀ! (ಬಿಕ್ಕುತ್ತ) ಎಲ್ಲಿ ಹೋದನೋ ಏನೋ? ನಮ್ಮನ್ಯಾಕ ಹೀಂಗ ಬಿಟ್ಟು ಉಳಿದಾನ?

ಶಂಕ್ರಪ್ಪ : ಲೇ ಹುಚ್ಚೀ ಈ ಉತ್ಸವದ ಹೊತ್ನಾಗ ಇದೇನು ಶುರುಮಾಡಿಬಿಟ್ಟೆ ನಿನ್ನ ಈ ರಾಗ? ಹಳೇ ಹುಚ್ಚಿ, ಹೋಗಲ್ಲೆ ಕಣ್ಣುಜ್ಜಿಕೋ. ಆ ಬಸವಂಣ ಹಾಂಗೇನೇ,-ಯಾವಾಗಲೂ ಎಲ್ಹೋದ್ರೂ ಊರ ಉಸಾಬರಿ ಉಸ್ತವಾರಿ! ಬರೋ ಜತೆ ಇನ್ನಾರನ್ನೋ ಗಂಟಿಕ್ಕಿಕೊಂಡು ಬಂದಿರಬೇಕು. ಹೂಂ ಹಿಡಿ ಬಾಳೆಹಣ್ಣು ಹೊಡಿ ಹೂಂ.

ಪಾರ್ವತಮ್ಮ : ನಾ ಎಲ್ರಿ, ನಾ ಒಲ್ಲೆ ಊ ಹೂಂs (ಶಂಕ್ರಪ್ಪನ ಒತ್ತಾಯ) ಹೋಗಲಿ ಕೊಡ್ರಿ ಅಲ್ಲಾ ನನಗೆಲ್ಲಿ ಗುರಿ ಐತಿ? ಇಕಾ, ಅಯ್ಯೋ ಆ ಭಟ್ಟರ ಹೊಟ್ಟೆಗೆ ಬಡದು ಪಿಚಕ್ ಆಯ್ತಲ್ರೀ-ಈಗೇನು ಮಾಡ್ಲೀ ಅವಯ್ಯss

ಶಂಕ್ರಪ್ಪ : ಏನಿಲ್ಲ, ಇನ್ನೊಂದು ಹೊಡಿ ಅವರ ಬಾಯಿಗೇ ಬೀಳಲಿ. ಇಕೋ ನಾ ಹೊಡ್ದೆ ನೋಡು!

ಪಾರ್ವತಮ್ಮ : (ಕಿಲಕಿಲನೆ ನಕ್ಕು) ನಿಮದೇನ್ಮತ್ತ ಮಹಾ ಕೆಲಸ! ಅದೋ ಗಾಲಿಗ ತಾಗಿ ಕೆಳಗೆ ಆ ಮುಂಡಾಸದ ಮೇಲೆ ಬಿತ್ತು-ಅಕಾ ಅಂವ ತಲೆ ಎತ್ತಿ ನೋಡ್ತಾನ-ಅರೇ ಅವ ನಮ್ಮ ಬಸವಣ್ಣ ಅಲ್ಲ?

ಶಂಕ್ರಪ್ಪ : ಎಲಾ ಇವನs ಇಲ್ಲಿ ಇಷ್ಟು ಹತ್ರ ಕಣ್ಮುಂದೆ ಇದ್ದಾನ ಪಾಪಿ. ಏ ಬಸವಣ್ಣೀ ಎಲೇ ಬಸ್ಯಾ-ಛೇ ಅವಂಗೆ ಕೇಳೋದೇ ಇಲ್ಲ!

ಪಾರ್ವತಮ್ಮ : ಎಂಥ ಗದ್ಲ, ಅದ್ನೋಡಿ. ಪಾಪಿ ಅಲ್ಲ ಅವ ಪುಣ್ಯಾತ್ಮ ರಥಾ ಎಳೀತಾನ

ಆ ಅಂಥ ಗಾತ್ರದ ಹಗ್ಗ ಜಗ್ತಾನ.

( 'ಹರ ಹರ ಮಹದೇವ' ಹೋ ಹೋ ಹೋ ಗರ್ಜನೆ' )

**ಶಂಕ್ರಪ್ಪ :** ರಥಾ ಹೊರಟಿತು ಬಾ ಕೆಳಗಡೆ ಹೋಗೋಣ, ರಸ್ತೇಲಿ ಸಿಕ್ತಾನ ನಿನ್ನ ಪುಣ್ಯಾತ್ಮ! ಹಾಗೇ ಸಂಜೆ ಬಸ್ಸು ಹಿಡಿಯೋದು!

**ಪಾರ್ವತಮ್ಮ :** ನಾ ಒಲ್ಲೆ.

**ಶಂಕ್ರಪ್ಪ :** ಯಾಕೆ ಮತ್ತೆ? ಸಮುದ್ರಕ್ಕೆ ಹೋಗಿ ಆ ಉಪ್ಪು ನೀರಲ್ಲಿ ಕಣ್ಣೀರ್ ಬಿಡ್ತೇ ಕೂಡ್ರುವಾಕಿ ಏನು - " ಬಸವಾ....ಬಸವಾ"...ಅಂದ್ಕೋತಾ?

**ಪಾರ್ವತಮ್ಮ :** ಸಾಕು ಸುಮ್ನಿರಿ. ರಾತ್ರೆ ಕೋಟಿ ತೀರ್ಥದಾಗ ತೆಪ್ಪೋತ್ಸವ ಐತಿ. ಅದನಿಷ್ಟು ನೋಡಿದ್ರೆ ಶಿವರಾತ್ರಿಯ ಯಾತ್ರಾ ಸಾಂಗ ಆದ್ಹಾಂಗ ಆಗ್ತದ.

**ಶಂಕ್ರಪ್ಪ :** ಹಾಂಗಾದ್ರೆ ಹಾಗೆ, ನೀ ತೋರಿದ್ದೇ ಧೋರಣ! ನೀಕಟ್ಟಿದ್ದೇ ತೋರಣ!

## ೭

(ದೃಶ್ಯ ಪಲ್ಲಟ ಸ್ವರಜತಿ)

(ಹಿನ್ನೆಲೆ : ಮರುದಿನ ಮುಂಜಾನೆ ಮತ್ತೆ ಬಸ್ಸಿನಲ್ಲಿ ಮರಳಿ ಊರಿಗೆ ಹೊರಟಾಗ)

**ಶಂಕ್ರಪ್ಪ :** ನೋಡಿದ್ದೇನೇ ನಿನ್ನೆ ರಾತ್ರಿ ನಾಟಕಾ ?

**ಪಾರ್ವತಮ್ಮ :** (ದಿಗಿಲು) ನಾಟಕಾ? ನಾವು ನೋಡಿದ್ದು ದೇವರ ಉತ್ಸವಾ-ಜಲಕ್ರೀಡೆ; ಏನ ಆ ಬಾಣಾ ಬಿರುಸು-ಬಾಜಂತ್ರಿ!

**ಶಂಕ್ರಪ್ಪ :** ಅದು ಸರೀನೆ ಆದರೆ ಅಲ್ಲೆ ನಡೀತಲ್ಲ-ನಮ್ಮ ಬಸಣ್ಣಿ ನಾಟಕ!

**ಪಾರ್ವತಮ್ಮ :** ಅದೆಂಥ ಧಿಮಾಕೊ ಅವಂದು ಅಂತೇನಿ! ನಾವು ಕೆರಿ ದಂಡೇಲಿ ನಿಂತಿದ್ರ ಅಂವ ದೇವರ ದೋಣಿಲೇ ಕೂತು ತೀರ್ಥ ಸುತ್ತು ಹಾಕ್ತಿದ್ದ!

**ಶಂಕ್ರಪ್ಪ :** ಮತ್ತ ನೀ ಅವಂಗೆ ಕಣ್ಣೀರ ಹಾಕ್‌ದಿ ಅಲ್ಲ. ಅವನಿಗೆ ಅದೇನು ಜಂಭಾನೋ! ಮುದಿ ಹುಂಬ, ದೇವರ ಮುಂದೇ ಇದ್ದಾನ-ಶಿವನ ಮುಂದೆ ಬಸವಾ.

**ಪಾರ್ವತಮ್ಮ :** ಕೋಟಿ ತೀರ್ಥದ ಆ ನೀರ ಮಂಟಪದಾಗೂ ಅವ ಹೋಗಿ ನಿಂತ. ದೇವರ ಆರತಿ ಪ್ರಸಾದ ತಗೊಳ್ತಿದ್ದ. ಖರೇ ಹೇಳೊದಾದ್ರೆ ಅಂವದೇ ಶಿವರಾತ್ರಿ ಕ್ಷೇತ್ರ ಯಾತ್ರಿ, ಅವಂಗೇ ದಕ್ಕು ನೋಡ್ರಿ!

ಶಂಕ್ರಪ್ಪ : ಹೋಗಲಿ ಬಿಡು, ಕೊನೆಗೂ ಎಲ್ಲಿ ಹೋಗ್ತಾನ? ಮನೆಗೇ ಬರ್‍ತಾನ! ಹಾದಿ ತಪ್ಪಿದ ಹೋರಿ ಹಟ್ಟಿಗೆ ಬರ್‍ತದ, ಬರ್ಲಿ ಹೇಳ್ತೀನಿ.

ಪಾರ್ವತಮ್ಮ : ಏನ್ ಹೇಳ್ತೀರಿ? ಆಂ ಇದೇನು ಬಸ್ಸು ನಿಂತು ಬಿಡ್ತಲ್ಲ! (ಬಸ್ಸು ನಿಂತ ಸದ್ದು)

ಶಂಕ್ರಪ್ಪ : ಯಾರೋ ನಿಂದಿರ್ಸಿದರು.

( "ನಿಂದಿರ್ಸಿ ನಿಂದಿರ್ಸಿ" ಕೂಗು, 'ನಮ್ಮ ಯಜಮಾನ್ರು ಇಳಿತಾರ್ರಿ' ಬಸವಣ್ಣೆಯದೇ ದನೀ, ಇದೇನು? 'ನಮ್ಮ ಬಸ್ಯಾನದೇ ದನಿ, ಅವನೇ ನಿಂದಿರ್ಸಿದ್ದು. ನಮ್ಮ ಬಸ್ಸು ಇದು ಅದೇ ಊರು ಬರುವಾಗ ಆತ ಇಳಿದದ್ದು.

ಬಸವಣ್ಣೆಪ್ಪ : (ಗಾಡಿ ಹೊಕ್ಕು) ಯಜಮಾನರೇ, ತಾಯವ್ರೆ ಶರಣರಪ್ಪಾ. ಇಳೀರಿ, ಇಳೀರಿ. ನೀವು ಇಲ್ಲೇ ಇಳಿಲೇ ಬೇಕು. ಅದು ನಮ್ಮ ಅಜ್ಜ ಬಂದಾನೆ, ಅವರದೇ ಆಗ್ರಹ.

ಅಜ್ಜ : (ಕೆಳಗಿಂದ) ಹೂನ್ರಿ ರಾಯರೇ, ಇಲ್ಲೆ ಇಳಿಲೇಬೇಕು. ನಮ್ಮಲ್ಲಿ ಬಂದು ಹೋಗಲೇಬೇಕು.

ಬಸವಣ್ಣೆಪ್ಪ : ಹಾಂ ಏಳ್ರಿ ಬಾಯವ್ರು. ಬ್ಯಾಗು ಗೀಗು ನಾ ಎತ್ಕೊಂಡೀನಿ

ಶಂಕ್ರಪ್ಪ : ಏನೋ, ನಿನ್ನ ತಗಾದೆ ಯಾವಾಗ ಬಂದೀ? ಇಲ್ಲೇಕೆ ಇಳಿಯೋದು?

ಬಸವಣ್ಣೆಪ್ಪ : ಅದೆಲ್ಲ ಹೇಳ್ತೀನಿ ಕತೆ.·ಕಂಡಕ್ಟರ ತಗಾದೇನೆ ಇಲ್ಲಿ ಹೆಚ್ಚು (ಗಂಟೆಯ ಮೇಲೆ ಗಂಟೆ) ಮೊದಲು

ಅಜ್ಜ : ನಮಸ್ಕಾರ ರಾಯ್ರೇ, ಶರಣ್ರಿ ಬಾಯವ್ರೇ. ಯಜಮಾನ್ರಿಗೆ ಕೈ ಮುಗೀರಿ ಮೊಮ್ಮಕ್ಕಳೇ ಹುಂ.

ಮಕ್ಕಳು : ನಮಸ್ತೇ, ನಮಸ್ತೇ

ಶಂಕ್ರಪ್ಪ : ನಮಸ್ತೇ, ಇದೆಲ್ಲ ಏನೋ ನಮ್ಮ ಅವಸ್ಥೆ.....? ನಮಸ್ಕಾರ

ಬಸವಣ್ಣೆಪ್ಪ : ಬನ್ನಿ, ಗಾಡಿ ಹತ್ತಿ..... ಎಲ್ಲಾ ಹೇಳ್ತೀನಿ.

## ೮

(ದೃಶ್ಯ ಪಲ್ಲಟ-ಸ್ವರಜತಿ)

(ಹಿನ್ನೆಲೆ : ಗಾಡಿಯಲ್ಲಿ, ಗಾಡಿಗಾಲಿ ಎತ್ತಿನ ಗಂಟೆಗಳ ಸದ್ದಿನ ಹಿನ್ನೆಲೆಗೆ ಹಾದಿಯುದ್ದಕ್ಕೂ ಹಕ್ಕಿ, ದನ, ನಾಯಿಗಳ ಸದ್ದುಗಳು)

**ಶಂಕ್ರಪ್ಪ :** ಅಜ್ಜಾ, ಹೇಗೆ ನಿಮ್ಮ ಮನೆ ಮಂದಿ ಎಲ್ಲ ಕ್ಷೇಮಾನೇ? ಸೊಸೀ ಕಾಲು....

**ಅಜ್ಜ :** ಎಲ್ಲ ನಿಮ್ಮೀ ಬಸವಣ್ಣೆಪ್ಪನೋರ ಕಾಲಗುಣ-ಕೈಗುಣ ನೋಡ್ರಿ ಆದಿನ ಅಂವಲ್ಲದಿದ್ರೆ ನಮ್ಮ ಪಾಡು ಹಾದೀಲೆ ಬಿದ್ದು ಸಾಯೋದೆ.

**ಬಸವಣ್ಣೆಪ್ಪ :** ಅದಿರ್ಲಿ ಯಜಮಾನರೇ, ಹ್ಯಾಗಾತು ಶಿವರಾತ್ರಿ ಜಾತ್ರೆ, ಭೂ ಕೈಲಾಸದಿಂದ ಶಿವ-ಪಾರ್ವತಿ ಇಳಿದು ಬಂದ ಹಾಗೆ ಬಂದೀರಿ.

**ಪಾರ್ವತಮ್ಮ :** ಸಾಕು ಸುಮ್ನಿರು ಭಾಳ ಶಾಣ್ಯಾ ನೀನು, ನಮಗಿಂತ ಮುಂದೆ ಅಲ್ಲಿ ಮೆರದಾಡಿ ಇಲ್ಬಂದು ಸೇರ್ಕೊಂಡಾನ ಮತ್ತ !

**ಬಸವಣ್ಣೆಪ್ಪ :** ಇಲ್ಬಂದು ಸೇರ್ಕೊಂಡೆ.....ನಾನು ಎಲ್ಲಿಂದ?

**ಪಾರ್ವತಮ್ಮ :** ಮತ್ತ ಧಿಮಾಕ ಬೇರೆ ಮಾಡ್ತಿ? ಬಸವಣ್ಣೆ ನಮ್ಮ ಬೆನ್ನಿಗೇ ಗೋಕರ್ಣಕ್ಕೆ ಬಂದಿ. ಹೋದಲ್ಲೆಲ್ಲಾ ಕಣ್ಮುಂದೆ ಕುಣಿದಾಡ್ತಾ ಇದ್ದಿ !

**ಬಸವಣ್ಣೆಪ್ಪ :** ಏನೇನು, ಏನ ಹೇಳ್ತೀರಿ ಬಾಯವರೇ?

**ಶಂಕ್ರಪ್ಪ :** ಅಲ್ಲೋ ಕದೀಮಾ, ಅಲ್ಲೇ ಮಹಾಬಲೇಶ್ವರನ ಗುಡಿಯಾಗ ಸಮುದ್ರ ತೀರದಾಗ, ರಥೋತ್ಸವದಾಗ ನೀನೇ.....

**ಪಾರ್ವತಮ್ಮ :** ರಾತ್ರಿ ತೆಪ್ಪೋತ್ಸವದಾಗs ಎಲ್ಲಿ ಹೋದ್ರೂ ನೀ ಇದ್ದಿ...ನಮ್ಮ ಮುಂದೇನ, ನಾವೆಷ್ಟು, ಕೂಗಿದ್ವಿ, ಕರೆದ್ವಿ.

**ಶಂಕ್ರಪ್ಪ :** ನೀ ಎಲ್ಲಿ ಕೇಳ್ತಿದ್ದಿ. ನಿನ್ನ ತಂಡದೊಂದಿಗೆ ನಡೆದಿತ್ತು ನಿನ್ನ ತಾಂಡವಾ.

**ಬಸವಣ್ಣೆಪ್ಪ :** ಎಲಾ, ಎಲಾ; ಇದೇನ ಹೇಳ್ತೀರಿ, ಧಣೀರ! ಏನೂ ತಿಳಿಬಲ್ಲದ್ದು! ಕೇಳ್ದಿ ಏನೋ ಅಜ್ಜಾ?

**ಪಾರ್ವತಮ್ಮ :** ಹೌದಪ್ಪಾ, ದೊಡ್ಡ ಮನಶಾ ಅದೀ ನೀನು. ಮನಿಗೆ ಮಾರಿ, ಪರೋಪಕಾರಿ.

**ಅಜ್ಜ :** ಹಂ, ಹಂ ಬಾಯವ್ರೆ, ಹಾಗೆನ್ನಬೇಡಿ. ನಮ್ಮ ಬಸವಣ್ಣೆಪ್ಪ

ಪರೋಪಕಾರೀ ಖರೆ, ನೂರು ಸಲಾಂ ಹೇಳ್ರಿ. ಆದರೆ ಮನೆಗೆ ಮಾರಿ..ಭೇ ಭೇ, ಹಾಗಂದ್ರೆ ಶಿವ ಮೆಚ್ಚಾ.

**ಶಂಕ್ರಪ್ಪ :** ಅಲ್ರೀ ಅಜ್ಜಾ. ಈ ನಿಮ್ಮ ಪರೋಪಕಾರಿ ನಮ್ಮ ಜತೆ ಇದ್ದಂವ ನಮ್ಮ ಹಿಂದೆ ಬಂದು ನಮ್ಮುಂದೆ ಸುಳಿದಾನ, ಗೋಕರ್ಣಯಾತ್ರೆ ಮುಗಿಸಿ ಇಲ್ಲೆ ಬಂದು ಹಾಜರು ಮತ್ತೆ.....ಸಂಭಾವಿತನ್ಹಾಂಗ ನಮ್ಮ ಸ್ವಾಗತಕ್ಕೆ!

**ಬಸವಣ್ಣೆಪ್ಪ :** ಇದೇನು ಸಿಕ್ಕಾಪಟ್ಟೆ ಹೇಳ್ತೀರಿ. ಧಣೇರೆ? ನಿಮ್ಮ ಪಾದ ಮುಟ್ಟಿ ಹೇಳ್ತೀನಿ. ನಾನು ಅಂದು ಈ ಊರಿಗೆ, ಈ ಮಂದೀನ ಹೊತ್ಕೊಂಡು ಬಂದವ ಈ ತನಕ ಈ ತಾವ ಬಿಡಲಿಲ್ಲ.

**ಅಜ್ಜ :** ನಾವೆಲ್ಲಿ ಬಿಡ್ತೇವೆ? ಅವ ಸಾವಿರ ಹೇಳ್ದ ಗೊಕರ್ಣಕ್ಕೆ ಹೋಗೋದೈತಿ ಅಂತ. ಆದರೆ.....

**ಬಸವಣ್ಣೆಪ್ಪ :** ಹೌದಜ್ಜ ನಿಮ್ಮ ಅವಸ್ಥೆ. ನಿಮ್ಮ ಕಷ್ಟ ಕಣ್ಣಾರೆ ಕಂಡು ನಾ ಹ್ಯಾಂಗ ಬಿಟ್ಹೋಗಲಿ?

**ಪಾರ್ವತಮ್ಮ :** ಅಂದ್ರೆ ಇದೇನಂತಿ ನೀನು? ನೀನು ಬಂದೇ ಇಲ್ಲೇನು ಗೋಕರ್ಣಕ್ಕೆ?

**ಅಜ್ಜ :** ಬಾಯವ್ವೆ, ಬಸವಣ್ಣೆ ನಮ್ಮ ಮನೆ ಬಿಟ್ಟು ಕಳೆದ ನಾಲ್ಕು ಐದು ದಿನ ಹೊರಗೆ ಕಾಲ ಹಾಕಿಲ್ಲ, ನನ್ನ, ಸೊಸೆ...... ಮೊಮ್ಮಕ್ಕಳ...ಉಪಚಾರ ಉಣಬಡಿಸೋದ್ರಾಗ ಕಳೀತು ಅವನ ಕಾಲ.

**ಬಸವಣ್ಣೆಪ್ಪ :** ಹೌದು ಯಜಮಾನರೇ, ಈ ಬಾರಿಯೂ ನಂಗೆ ಗೋಕರ್ಣ ಯಾತ್ರೆ ಕೂಡಿ ಬರಲಿಲ್ಲ. ನನ್ನ ಶಿವಪೂಜೆ ಶಿವಯೋಗ ಎಲ್ಲಾ ಇಲ್ಲೇ ಈ ಅಜ್ಜನ ಮನೆ ಮಂದಿ ಸಂಗಾತೇ ಮುಗೀತು.

**ಅಜ್ಜ :** ಹಂ ಹೋಗಲಿ ಬಿಡಿ, ಒಳಬನ್ನಿ. ಇವಳೇ ನಮ್ಮ ಸೊಸೆ. ಈ ಮಕ್ಕಳ ತಾಯಿ.

**ಸೊಸೆ :** ನಮಸ್ಕಾರ ಬನ್ನಿ ಒಳಗೆ. ಹಾಂ ಮಕ್ಕಳೇ ಸಮಾನು ಇಳಿಸಿ. (ಅಜ್ಜನ ಮನೆಯಲ್ಲಿ)

**ಶಂಕ್ರಪ್ಪ :** ಅಜ್ಜಾ, ಬಸವಣ್ಣೆ ಎಲ್ಲಿ?

**ಅಜ್ಜ :** ಅಂವೆಲ್ಲಿ ಒಂದ ಕಡೆ ಕೂಡ್ರಾಂವ? ಹೋದ ನೀರು ಜಗ್ಗಲಿಕ್ಕೆ. ಆಕೋ ಮಕ್ಕಳ ಜತೆ. ಬಾಳೆಗೆ ನೀರು ಹಾಕ್ತಿದಾನ. (ಮಕ್ಕಳ ಕೂಡ ಗಿಡಕ್ಕೆ ನೀರು ಹಾಕುವ ಸದ್ದು).

**ಸೊಸೆ :** ಬಾಯವ್ರೆ. ನನ್ನ ಮಕ್ಕಳನ್ನ ಛಾಳ ಹಚ್ಕೊಂಡಾನ್ರಿ. ನಮ್ಮ ನಿಮ್ಮ ಬಸವಣ್ಣೆಪ್ಪ.

**ಪಾರ್ವತಮ್ಮ :** (ನಕ್ಕು) ಹಿಂದೆ ನಂಮವ ಇದ್ದಾ, ಈಗ ಅಂವ ನಿಮ್ಮವನೇ ಅಲ್ಲೇನ್ರಿ?

**ಶಂಕ್ರಪ್ಪ :** ಹೂಂ ಅಲ್ಲ, ಅದೆಂಥ ಪವಾಡ ಅಂದೆ. ಶಿವರಾತ್ರೆಯಾತ್ರೆಯ ಮೂರುದಿನ ಈ ಪುಣ್ಯಾತ್ಮ ಇಲ್ಲೇ ಇದ್ದ. ಆದರೆ ನಮಗೆ ಅಲ್ಲಿ ಗೋಕರ್ಣದಾಗ ಪೂಜೀಲಿ ಸ್ನಾನದಾಗ ತೇರಿನ ಮುಂದೆ ಎಲ್ಲ ಕಾಣ್ತಿದ್ದನಲ್ಲ;

**ಪಾರ್ವತಮ್ಮ :** ಅಲ್ಲೇ ಗೋಕರ್ಣದಾಗ ನಾವು ಸಾವಿರಗಟ್ಲೆ ಯಾತ್ರಿಕರು ಒದ್ದಾಡಿದ್ವಿ. ಆದರೆ ಖರೇ ಶಿವಯೋಗ ಸಿದ್ಧಿ ಇವಗ ಆತು.

**ಶಂಕ್ರಪ್ಪ :** ಧನ್ಯನಪ್ಪಾ ನೀ. ಹೆಸರೆತ್ತಿದಾಗ ಬಂದೇ ಬಿಟ್ಟೆ ಬಸವಣ್ಣೆ. ನೀನೇ ಧನ್ಯ! ಅಲ್ಲೋ-ಈ ಊರಾಗ. ಈ ಮನೆಯಾಗ ದುಡಿತಾ ಇದ್ದಾಗಲೇ ನೀ ಅಲ್ಲೇ ಗೋಕರ್ಣದ ಮಹಾಶಿವರಾತ್ರಿಗೂ ಹೇಗೆ ಬಂದಿ?

**ಅಜ್ಜ :** ನಾ ಹೇಳ್ತೀನಿ. ನಮ್ಮ ಬಸವಣ್ಣನವರೇ ಹೇಳ್ಯಾರ; "ಇಲ್ಲಿ ಸಲ್ಲುವವರು ಅಲ್ಲಿ ಸಲ್ಲುವರಯ್ಯ" ಅಲ್ಲೇನೋ ಬಸವಣ್ಣೆ? ನಮ್ಮ ಮನೆಗೆ ಭಾಗೀರಥಿ ಬಂದ್ಹಾಂಗ ನೀ ಬಂದಿ. ನಮ್ಮ ಕುಲಾ ಉದ್ಧಾರ ಮಾಡಿದಿ (ಗದ್ಗದ).

**ಬಸವಣ್ಣೆಪ್ಪ :** ಛೇ, ಛೇ ಹಾಂಗನ್ನಬೇಡಿ ಅಜ್ಜ; ಇದೆಲ್ಲ ದೊಡ್ಡ ಮಾತಾತು. ನೋಡಿ ಯಜಮಾನ್ರೆ, ಬಾಯವ್ರೆ ನಾ ಇಲ್ಲಿ ಸಿಕ್ಕಿ ಬಿದ್ದೆ. ದುಡೀತಿದ್ದೆ. ಆದರೆ ನಿಮಗೆ ಅಣೆಮಾಡಿ ಮಾತು ಕೊಟ್ಟಿದ್ನಲ್ಲಾ-ನಿಮ್ಮ ಜತೆ ಶಿವರಾತ್ರೆ ಯಾತ್ರೆಗೆ ಬರ್ತೀನಂತ. ನನ್ನ ಆತ್ಮಕ್ಕೆ ಅದೇ ಹಂಬಲ. ಅದೇ ಹಳಹಳಿ.

**ಅಜ್ಜ :** ಅಂದಾಗ ನಿನ್ನ ದೇಹ ಇಲ್ಲೇ ಇದ್ದರೂ ನಿನ್ನ ಜೀವಾ ನಿನ್ನ ಆತ್ಮ ಇವರ ಬೆನ್ನಿಗೆ ಗೋಕರ್ಣ ಶಿವರಾತ್ರಿಗೆ ಹೋಗಿರಬೇಕು.

**ಸೊಸೆ :** ಮಾಂವಾ ಈ ಕಲಿಕಾಲದಲ್ಲೂ ಪವಾಡಾ ಆಗ್ತಾವಂತ ಆತು.

**ಶಂಕ್ರಪ್ಪ :** ನಮ್ಮ ಬಸವಣ್ಣ ಅವತಾರ ಮಾಡಿದ್ದು ಇದೇ ಕಲಿಕಾಲದಲ್ಲೇ ತಂಗೀ. ದಯಾ ಸೇವಾ ಸಜ್ಜನಿಕೆ-ಇದ್ದಲ್ಲಿ ಯಾವಾಗಲೂ ಸತ್ಯಯುಗ, ಅಲ್ಲೇನೇ ಯಜಮಾನೀ?

**ಪಾರ್ವತಮ್ಮ :** ಹೌದು, ಅಂದು ಶಿವರಾತ್ರೆ ಮಹಾತ್ಮೆ ಕೇಳಿದ್ವಲ್ಲ. ಆ ಬ್ಯಾಡ ಚಿಗರೀ ಕೊಲ್ಲಾಕ ಹೋದ. ಆ ಚಿಗರಿ ಎಲ್ಲಾ ನಾ ಮುಂದ ತಾ ಮುಂದ ಅಂತ ಬ್ಯಾಡನ ಬಾಣಕ್ಕೆ ಬಲಿ ಆಗಾಕ ಬಂದವು.

ಸೊಸೆ : ಹೌದ್ರೀ, ಅವು ಬೇಡಗೆ ವಚನ ಕೊಟ್ಟಿದ್ದು ಮನೆಗೆ ಹೋಗಿ ಮರಿಗಳಿಗೆ ಹಾಲುಣಿಸಿ ಹೇಳಿಕೊಂಡು ಬರ್ತೇವೆ ಅಂತ.

ಪಾರ್ವತಮ್ಮ : ಹೌದು ತಂಗಿ, ಬಡಮೃಗ ನಡಕೊಂಡ ಸತ್ಯಕ್ಕೆ ಆ ಬ್ಯಾಡನ ಕರುಳು ಕರಗಿತು. ಅವಗ ಶಿವರಾತ್ರಿ ವ್ರತಾ ಅಲ್ಲೇ - ಆ ಮರದಡಿಗೆ ಫಲಿಸಿತು.

ಬಸವಣ್ಣೆಪ್ಪ : ಹೌದು ಬಾಯವ್ರ. ಆ ವ್ಯಾಧ ಅಂದದ್ದೇ ಸತ್ಯ-

ಹಿನ್ನೆಲೆಯಲ್ಲಿ : "ಏತೇ ಧನ್ಯಾ ಮೃಗಾಶ್ಚೈವ ಜ್ಞಾನ ಹೀನಾಃ ಸುಸಂಮತಾಃ

ಸ್ವೀಯೇನೈವ ಶರೀರೇಣ ಪರೋಪಕರಣೇ ರತಾ"

ಮನುಷ್ಯ ಜನ್ಮ ಪಡೆದ ನಾವೇನು ಸಾಧಿಸಿದಾಂಗ ಆತು?

ಶಂಕ್ರಪ್ಪ : ಅಜ್ಜ : ಹೌದಪ್ಪ ನಾವೇನು ಸಾಧಿಸಿದಾಂಗ ಆತು?

ಹಿನ್ನೆಲೆ : "ಪರಕಾಯಾಂಚ ಸಂಪೀಡೆ, ಶರೀರಂ ಪೋಷಿತಂ ವೃಥಾ ಕುಟುಂಬಂಪೋಷಿತುಂ ನಿತ್ಯಂ ಕೃತ್ವ ಪಾಪಾಣಿ ಅನೇಕಶ

ಕೌವಾಂ ಗತಿಂಗಮಿಷ್ಯಾಮಿ ಘಾತಕಂ ಜನ್ಮತಃ ಕೃತಂ

ಇದಾನಿಂ ಚಿಂತಯಾ ಮ್ಯೇವಂ ಧಿಕ ಧಿಕ ಚ ಜೀವಿತಂ ಮಮ"

ಪಾರ್ವತಮ್ಮ : ಖರೇ ಅಂದ್ರ ಶಿವಯೋಗ ಸಿದ್ಧಿ ಪರೋಪಕಾರಿಗೆ ಸುಮ್ಮನs ಶಿವರಾತ್ರಿ ಜಾತ್ರೆ ಮಾಡಿ ಬಂದ್ರೆ ಏನು ಬಂತು?

ಶಂಕ್ರಪ್ಪ : "ದಯೇಯೇ ಧರ್ಮದ ಮೂಲವಯ್ಯಾ" ನಮ್ಮ ಬಸವಣ್ಣ ನುಡಿದದ್ದು ಖರೇನೇ ಅಜ್ಜಾ.

ಅಜ್ಜ : ಮತ್ತ ರಾಯ್ರೇ ಅದರಂತೆಯೇ ನಡೆದ ನಿಮ್ಮ ಬಸವಣ್ಣೆಪ್ಪ, ಇದೇನು ಸುಳ್ಳೇ?

(ಮಕ್ಕಳ ಚಪ್ಪಾಳೆ : "ಖರೇನೆ ಖರೆ" ಎಲ್ಲರ ಕಿಲಕಿಲ ನಗು)

ಗೌರೀಶ ಕಾಯ್ಕಿಣಿ ಸಮಗ್ರ ಸಾಹಿತ್ಯ

# ೩

## ಆಕಾಶ ನಾಟಕಗಳು



ಅಕ್ಷರ ಪ್ರಕಾಶನ ಸಾಗರ, ಕರ್ನಾಟಕ

೧೯೮೨

# ಅಗ್ನಿಕನ್ಯಾ - ದ್ರೌಪದಿ

## ಪಾತ್ರ ಪರಿಚಯ

ನಿವೇದಕ
ದ್ರುಪದ
ಯುಧಿಷ್ಠರ
ಪ್ರತಿಕಾಮಿ
ಯಾಜ
ಉಪಯಾಜ
ಕುಂತಿ
ಧೃಷ್ಟದ್ಯುಮ್ನ
ಭೀಮ
ಅರ್ಜುನ
ಕೃಷ್ಣ
ದುಃಶಾಸನ
ಶಕುನಿ
ದುರ್ಯೋಧನ
ಬ್ರಾಹ್ಮಣ
ಸಖಿ
ದ್ರುಪದನ ರಾಣಿ
ಸಭಾಧ್ವನಿಗಳು ೧, ೨, ೩, ೪
ಗಂಡು, ಹೆಣ್ಣು

೧

ನಿವೇದಕ : ಅರಗಿನ ಮನೆಯಿಂದ ಪಾರಾಗಿ ಬಂದ ಪಂಚಪಾಂಡವರು ತಾಯಿ ಕುಂತಿದೇವಿಯೊಂದಿಗೆ ಬ್ರಾಹ್ಮಣರ ವೇಷದಲ್ಲಿ ಏಕಚಕ್ರವೆಂಬ ಪಟ್ಟಣದಲ್ಲಿ ವಾಸಿಸುತ್ತಿದ್ದಾರೆ. ಬಕಾಸುರನ ವಧೆ ಆದ ನಂತರ ಒಂದು ದಿನ ಪಾಂಚಾಲದೇಶಕ್ಕೆ ಹೊರಟ ಬ್ರಾಹ್ಮಣರೊಬ್ಬರು ಪಾಂಡವರ ಬಿಡಾರಕ್ಕೆ ಬಂದು ಅತಿಥಿ ಸತ್ಕಾರ ಪಡೆದು ತಮ್ಮ ಪಯಣದ ವಿಚಾರ ಕುಂತಿಯೊಡನೆ ಮಾತಾಡುತ್ತಾರೆ,

ಬ್ರಾಹ್ಮಣ : ಅಮ್ಮಾ, ಪಾಂಚಾಲದ ದೊರೆ ದ್ರುಪದನು ತನ್ನ ಮಗಳು ಯಾಜ್ಞಸೇನಿಯ ಸ್ವಯಂವರವನ್ನು ಏರ್ಪಡಿಸಿದ್ದಾನೆ. ನಾವು ಅಲ್ಲಿಗೆ ಹೊರಟೆವು. ನಿಮ್ಮ ಕುಮಾರರಿಗೂ ಬರಹೇಳಿ. ಭೂರಿ ದಕ್ಷಿಣೆ ಮೃಷ್ಟಾನ್ನ ಭೋಜನಕ್ಕೆ ಯಾವ ತೊಂದರೆಯೂ ಇಲ್ಲ. ತಿಳಿತ್ತೋ ಇಲ್ಲೋss!

ಕುಂತಿ : ಏನಂದಿರಿ? ದ್ರುಪದನಿಗೆ ಮಗಳೇ?

ಬ್ರಾಹ್ಮಣ : ಅರೆ, ನಿಮಗೆ ಗೊತ್ತೇ ಇಲ್ವೇ ! ಅದೊಂದು ದೊಡ್ಡ ಅದ್ಭುತ ಕಥೆ ಅಮ್ಮಾ! ದ್ರುಪದ ಯಜ್ಞ ಸೇನನು, ತಿಳಿತ್ತೋ ಇಲ್ಲೋ! ಗಂಗಾದ್ವಾರದಲ್ಲಿ ಭಾರದ್ವಾಜ ಋಷಿಯ ಆಶ್ರಮದಲ್ಲಿ ಅವನ ಮಗ, ದ್ರೋಣಾಚಾರ್ಯನೊಡನೆ ಬ್ರಹ್ಮಚರ್ಯದಲ್ಲಿ ಹನ್ನೆರಡು ವರ್ಷ ಶಸ್ತ್ರಾಸ್ತ್ರ ವಿದ್ಯಾಭ್ಯಾಸ ಮಾಡಿದ.

ಕುಂತಿ : ಗೊತ್ತು ಬಿಡಿ, ವಿಪ್ರೋತ್ತಮರೇ. ಆಮೇಲೆ ದ್ರುಪದ ತಂದೆಯ ಪಟ್ಟಕ್ಕೆ ಬಂದಾಗ ಹಳೆಯ ಗೆಳೆಯನೆಂದು ಸಹಾಯಬೇಡಲು ಬಂದ ಬಡ ದ್ರೋಣನನ್ನು ಗುರುತಿಸಲೇ ಇಲ್ಲ.

ಬ್ರಾಹ್ಮಣ : ಹೌದು ತಾಯೀ, ಅದಕ್ಕಾಗಿ ದ್ರುಪದನಿಗೆ ಬುದ್ಧಿ ಕಲಿಸಿ ಕಣ್ಣು ತೆರೆಯಿಸಬೇಕೆಂದು ಪಂಥ ತೊಟ್ಟು ಮುಂದೆ ಹಸ್ತಿನಾಪುರವನ್ನು ಸೇರಿ ಕೌರವ ಪಾಂಡವರಿಗೆ ಧನುರ್ವಿದ್ಯೆ ಕಲಿಸಿ ಗುರುದಕ್ಷಿಣೆಯೆಂದು ಅರ್ಜುನನಿಂದ ದ್ರುಪದನನ್ನು ಸೋಲಿಸಿ ಅರ್ಧರಾಜ್ಯ ಅವನಿಗೆ ಬಿಟ್ಟುಕೊಟ್ಟು ಅವನೊಂದಿಗೆ ಸಮಾನಸ್ಕಂದನಾದ, ತಿಳಿತ್ತೊ ಇಲ್ಲೊ.

**ಕುಂತಿ :** ಹೂಂ. ಅದೂ ಗೊತ್ತು, ಮುಂದೆ ?

**ಬ್ರಾಹ್ಮಣ :** ಮುಂದೆ ಆ ದ್ರೋಣನನ್ನು ಗೆಲ್ಲುವ ಮಗನನ್ನು ಪಡೆಯಬೇಕೆಂದ
ದ್ರುಪದ ಪ್ರತಿಜ್ಞೆ ಹೊತ್ತು ಯಜ್ಞ ಆರಂಭಿಸಿದನು.

(ಯಜ್ಞ ಶಾಲೆಯ ಕಲಕಲ, ಸ್ವಾಹಾಕಾರದ ಮಂತ್ರಘೋಷಗ
ಹಿನ್ನೆಲೆಯಲ್ಲಿ ಮುಂದಿನ ಸಂಭಾಷಣೆ).

**ದ್ರುಪದ :** ಈ ದ್ರುಪದನ ಪ್ರತಿಜ್ಞೆ ಈಡೇರಬಹುದೆ? ಏನು ಯಾಜೋ
ಪಯಾಜರೇ, ಯಜ್ಞ ಸಾಂಗವಾಗುವುದೇ? ನನ್ನ ಕಾಮೇ
ಫಲಿಸೀತೆ? ಏನು ಉಪಯಾಜರೇ.

**ಉಪಯಾಜ :** ದ್ರುಪದ ಮಹಾರಾಜಾ, ನಂಗೇನು ಕೇಳ್ತೀರಾ? ನಮ್ಮಣ್ಣಂಗೇ ಎ
ಗೊತ್ತು. ಯಜಣ್ಣನಿಗೇ ಕೇಳಿ, ಅಣ್ಣ ಬಸವ, ನಾ ಬಾಲ ಹೂ
ಈ ಪುತ್ರಕಾಮೇಷ್ಟಿ ನನ್ನ ಅಭಿಪ್ರಾಯವಲ್ಲ! ಮಕ್ಕಳಿ
ಮಹಾರಾಜನಿಗೆ ಮತ್ತೆ ಪುತ್ರ ಕಾಮ ಅದಕ್ಕೆ ಮತ್ತೆ ಇಷ್ಟ.

**ಯಾಜೋಪಯಾಜ :** ಸಾಕು ಸುಮ್ಮನಿರು. ಸ್ವಾಹಾಕಾರ ನಡೆಯಿಸು ಆಗ್ನಯೇ ಸ್ವಾಹ
'ಇದಂ ನಮಮ' ಹೇಳಿ ಮಹಾರಾಜರೇ.....

**ದ್ರುಪದ :** ಇದಂ ನಮಮ. ಯಾಜಾಚಾರ್ಯರೇ.....

**ಯಾಜೋಪಯಾಜ :** (ನಸ್ಯ ಏರಿಸುವ ದನಿಗೆ ಪಿಟೀಲು ಕಮಾನಿನ ದನಿ ಜೋಡಣ
ಮಹಾರಾಜರೇ, ಇದೀಗ ಪ್ರಧಾನ ಯಾಗ ಮುಗಿಯಿತು. ಆಮೇ
ಪೂರ್ಣಾಹುತಿ. ಮಹಾರಾಣಿಯರನ್ನು ಕರೆಯಿರಿ ಇ
ಮಹಾರಾಣಿಯವರೇ, ಇದು ಯಜ್ಞ ಶಿಷ್ಟ ಹವಿ. ಅಮ್ಮ
ಪಾಯಸ. ಇದನ್ನು ಸ್ವೀಕರಿಸಿ, ಸೇವಿಸಿ, ಇಬ್ಬರು ಮಕ್ಕಳನ
ಪಡೆಯುವಿರಿ!

**ಮಹಾರಾಣಿ :** ನಾ ಒಲ್ಲೆ, ಯಾಜಭಟ್ಟರೇ ನಾ ಒಲ್ಲೆ, ನನ್ನ ಮೈ ಕೈ ಬಾಯಿ ಎ
ಮೈಲಿಗೆ.

**ಯಾಜ :** (ನಸ್ಯ) ಹಾಗನ್ನಬೇಡಿ ಅಮ್ಮಾ, ಇದು ದಿವ್ಯ ಹವಿಸ್ಸ
ಬೇಡವೆನ್ನಬಾರದು. ಹೂಂ, ಬೇಡವಾದರೆ ಬಿಡಿ. ನಾ
ಅಗ್ನಿಕುಂಡಕ್ಕೆ ಚೆಲ್ಲುತ್ತೇನೆ. ಹೂಂ ಆದದ್ದಾಗಲಿ, ಹುತಾಶನಾ
ಸ್ವಾಹಾ.

ದ್ರುಪದ : ಇದಂ ನಮಮಃ
(ಒಮ್ಮೆಲೆ ಕೋಲಾಹಾಲ ತೀವ್ರವಾಗುತ್ತದೆ)

ಎಲ್ಲರೂ ದನಿ ೧ : ಅಬ್ಬಾ, ಇದೇನು ಮಹಾಜ್ವಾಲೆ! ಆಕಾಶಕ್ಕೆ ಮುಟ್ಟಿತು.

ದನಿ ೨ : ಅಗ್ನಿಯ ಆರ್ಭಟ ! ನಮೋ ನಮೋ ಅಗ್ನಿನಾರಾಯಣ!

ದನಿ ೩ : ಅರೆರೇ ಅದ್ಭುತ, ಯಜ್ಞಶಾಲೆ ಎಲ್ಲ ಕತ್ತಲು.

ಯಾಜೋಪಯಾಜ : ಅಗ್ನಿದೇವಾ ಸಂಹರಿಸಿ, ಕೋಪವನ್ನು ಪರಿಹರಿಸು !

ದ್ರುಪದ : ಇದೇನು ಅಭದ್ರ ಬೊಗಳುವಿರಿ? ಸಂಹಾರವೇನು ಬಂತು ಈ ಮಂಗಲ ಕಾರ್ಯದಲ್ಲಿ

ಯಾಜ : ಹಾಗಲ್ಲ ಮಹಾರಾಜಾ, ಸಂಹರಿಸು ಅಂದರೆ ಅಂಕೆಯಲ್ಲಿ ತಾ ಎಂದು. ಚಂಡಿಯ ಬಿಚ್ಚಿದ ಮಂಡೆಯಲ್ಲಿ ಅಗ್ನಿಜ್ವಾಲೆಗಳೂ ಚೆಲ್ಲಾಡುತ್ತಿವೆ, ಹೂಂ!

ದನಿ ೧ : ಇದೇನಾಶ್ಚರ್ಯ! ಅಗ್ನಿಕುಂಡದಿಂದ ಈ ದಿವ್ಯ ಪುರುಷ!

ದನಿ ೨ : ಅಬ್ಬಬ್ಬಾ ಎಂಥ ಉಗ್ರ ಮುದ್ರೆ! ಬೆಂಕಿಯ ಪಿಂಡ!

ದನಿ ೧ : ಕವಚ ಕುಂಡಲ ಕಿರೀಟ ಸಹಿತ ಎದ್ದು ಬಂದಾನೆ ಭದ್ರಾಕಾರ !

ದನಿ ೨ : ಖಡ್ಗ ತುಣೀರ ಧನುರ್ಧಾರಿ! ಯುದ್ಧ ಸನ್ನದ್ಧ !

ಎಲರೂ : ಇವನಾರು ! ಇವನಾರು!

ಅಶರೀರವಾಣಿ : (ಗುಡುಗು ಮಿಂಚಿನೊಂದಿಗೆ) ದ್ರುಪದ ಮಹಾರಾಜ, ಇವನೇ ನಿನ್ನ ಮಗ ಧೃಷ್ಟದ್ಯುಮ್ನ. ಇವನಿಂದಲೇ ದ್ರೋಣಾಚಾರ್ಯನ ವಧೆ!

ದ್ರುಪದ: ಧನ್ಯೋಸ್ಮಿ ಧನ್ಯೋಸ್ಮಿ ನನ್ನ ಅಭೀಷ್ಟ ಫಲಿಸಿತು.

ಎಲ್ಲರೂ : ಇಲ್ಲ ಮಹಾರಾಜಾ, ಇಲ್ಲ, ಇಕೋ ಇನ್ನೊಂದು ದಿವ್ಯಾಕೃತಿ ಯಜ್ಞ ಕುಂಡದಿಂದ ಎದ್ದಿದೆ.

ದ್ರುಪದ : ಇವಳಾರು ಜ್ವಾಲಾಮಾಲಿನಿ.

ದನಿ ೧ : ಎಂಥ ತೇಜಸ್ವಿನಿ!

ದನಿ ೨ : ಕೃಷ್ಣ ಸುಂದರಿ !

ದನಿ ೪ : ಮೋಡದ ಮೈ, ಮಿಂಚಿನ ಕಾಂತಿ!

ಅಶರೀರವಾಣಿ : (ಹಿಂದಿನಂತೆ) ರಾಜಾ ಯಜ್ಞಸೇನಾ, ಇವಳು ನಿನ್ನ ಮಗಳು ದ್ರೌಪದಿ, ಅಗ್ನಿ ಕನ್ಯೆ ಯಾಜ್ಞಸೇನಿ. ಇವಳಿಂದ ಕ್ಷತ್ರಿಯ ಕುಲವು ನಾಶವಾಗುವುದು! (ಗುಡುಗು ಮಿಂಚು)

ಎಲ್ಲರೂ : ಆಶ್ಚರ್ಯ, ಮಹದಾಶ್ಚರ್ಯ! ಪರಮಾಶ್ಚರ್ಯ!

೨

ಕುಂತಿ : ಈ ದ್ರೌಪದಿ ಅಗ್ನಿಕನ್ಯೆ. ಅವಳ ಸ್ವಯಂವರವೇ ?

ಬ್ರಾಹ್ಮಣ : ಹೌದು ತಾಯಿ, ಅವಳು ಅರ್ಜುನನನ್ನೇ ವರಿಸಬೇಕೆಂದು ದ್ರುಪದರಾಜನ ಇಚ್ಛೆ. ಆದರೆ ಅರ್ಜುನನೆಲ್ಲಿ? ಅವನೂ ಉಳಿದ ಪಾಂಡವರೊಂದಿಗೆ ಅರಗಿನ ಮನೆಯಲ್ಲಿ ಸುಟ್ಟು ಸತ್ತಿರಬೇಕು. ಆದರೂ ಸ್ವಯಂವರಕ್ಕೆ ಸರ್ವದ್ವಿಜರಿಗೂ ಆಮಂತ್ರಣ. ನಿನ್ನ ಮಕ್ಕಳೂ ಬರಲಿ. ಅವರೇನು ಪರಾಕ್ರಮದಲ್ಲಿ ಕಡಿಮೆಯೇ? ಮೊನ್ನೆ ನಿನ್ನ ಒಬ್ಬ ಮಗ ಬಕಾಸುರನನ್ನು ಕೊಂದಿಲ್ಲವೇ? ಉಳಿದವರಲ್ಲಿ ಹೊಸ ಅರ್ಜುನನೇ ಹೊರಡಬಹುದು.

ಕುಂತಿ : ಆಗಲಿ ದ್ವಿಜೋತ್ತಮಾ. ತಮ್ಮ ಇಷ್ಟದಂತೆಯೇ ಆಗಲಿ. ನಾವೆಲ್ಲ ಪಾಂಚಾಲ ನಗರಕ್ಕೆ ಬರುತ್ತೇವೆ.

೩

ನಿವೇದಕ : ದ್ರೌಪದಿಯ ಸ್ವಯಂವರ ಮಂಟಪ. ಭರತ ವರ್ಷದ ಅತಿರಥ ಮಹಾರಥಿಗಳೆಲ್ಲ ನೆರೆದಿದ್ದಾರೆ. ಅಣ್ಣ ಧೃಷ್ಟದ್ಯುಮ್ನನು ವರಮಾಲೆ ಹಿಡಿದುಕೊಂಡು ದ್ರೌಪದಿಯೊಂದಿಗೆ ಪ್ರವೇಶಿಸುತ್ತಾನೆ.
(ಭೇರಿ ಕಹಳೆ ತೂರ್ಯ ನಾಗಸ್ವರಗಳ ಮೊಳಗು)

ಧೃಷ್ಟದ್ಯುಮ್ನ : ಅಭ್ಯಾಗತ ರಾಜಪುತ್ರರೇ, ಇಲ್ಲಿದೆ ಮತ್ಸ್ಯಯಂತ್ರ. ಇಲ್ಲಿವೆ ಧನುರ್ಬಾಣ. ಈ ಯಂತ್ರವನ್ನು ಭೇದಿಸಿ ನನ್ನ ಈ ತಂಗಿ ಯಾಜ್ಞಸೇನಿಯ ವರಮಾಲೆಗೆ ಕೊರಳು ಒಡ್ಡಿರಿ. ತಂಗೀ, ಇದು ನೋಡು

ಇವನು ಕುರುಕುಲಾಧೀಶ್ವರ ದುರ್ಯೋಧನ, ಈತ ದುಃಶಾಸನ, ಈತ ಶಕುನಿ, ಈತ ಕರ್ಣ (ಪ್ರತಿ ಹೆಸರಿಗೂ ತುತ್ತೂರಿ)

ದ್ರೌಪದಿ : ಕರ್ಣನೇಕೆ ಇಲ್ಲಿ? ಸೂತಪುತ್ರನನ್ನು ವೀರಕ್ಷತ್ರಾಣಿ ವರಿಸಲಾರೆ. ಇವನಿಗೆ ಶೀಲಕ್ಕೆ ತಕ್ಕ ಕುಲವಿಲ್ಲ!

ಸಭಿಕರ ಕಲಕಲ : ಶಾಭಾಸ್, ಶಾಭಾಸ್! ಎಂಥ ಧೀರೆ! ಏನು ಕುಲಾಭಿಮಾನ! ಏನಿದು ಘೋರ ಮುಖಭಂಗ! ಮಹಾರಥಿಯ ತೇಜೋವಧೆ!

ಧೃಷ್ಟದ್ಯುಮ್ನ : ಕ್ಷಮಿಸು ಕರ್ಣಾ.

ಕರ್ಣ : ಅಡ್ಡಿ ಇಲ್ಲ ಮಹಾರಾಜಾ, ಮಾಡಬಾರದ್ದು ಮಾಡಿದ್ದೀಯ. ಆಗಬಾರದ್ದು ಆಗದೆ ಹೋಗದು !

(ಒಮ್ಮೆಲೆ ಸಭೆಯಲ್ಲಿ ಗುಜುಗುಜು ಕಲಕಲ ಏರುತ್ತ ಹೋಗುತ್ತದೆ)

ದನಿ ೧ : ಇವನಾರು ಮತ್ತೆ ?

ದನಿ ೨ : ಬ್ರಾಹ್ಮಣರ ಸಮೂಹದಿಂದ ಎದ್ದು ಬಂದ!

ದನಿ ೩ : ಈ ಮಾಣಿ ಮರುಳಾದ ರಾಜಕುಮಾರಿಯ ಮುಖಕ್ಕೆ!

ದನಿ ೪ : ಕೂಗಬೇಡ, ನೋಡು, ಹೇಗೆ ಮದ್ದಾನೆಯಂತೆ ನಡೆದು ಬರುತ್ತಾನೆ! ವೇದ ಮಂತ್ರದವನಿಗೆ ಯಂತ್ರ ಭೇದವೇಕೆ?

ಎಲ್ಲರೂ : ಅರೇರೇ, ಬಿಲ್ಲು ನೆಗೆದು ತಿಬ್ಬೇರಿಸಿ ಬಾಣ ಹೂಡಿಯೇ ಬಿಟ್ಟ.

(ಒಮ್ಮೆಲೆ ಆಶ್ಚರ್ಯ ಆನಂದದ ಗರ್ಜನೆ)

ಬ್ರಾಹ್ಮಣ ವೀರ! ಇಮ್ಮಡಿ ಭಾರ್ಗವ! ಭಾಪು, ಭಾಪು! ದ್ರೌಪದಿಯನ್ನು ಗೆದ್ದ!

೪

ದ್ರುಪದ : ಧೃಷ್ಟದ್ಯುಮ್ನಾ, ಇದೇನಾಯಿತು? ನನ್ನ ದ್ರೌಪದಿಯ ಪತಿ ಅರ್ಜುನನಾಗಬೇಕಿತ್ತು!

ಧೃಷ್ಟದ್ಯುಮ್ನ : ಅಪ್ಪಾ, ಈ ಬ್ರಾಹ್ಮಣ ವೀರ ಅರ್ಜುನನೇ ಆಗಿರಬೇಕು! ಈ ಠೀವಿ ಗಾಂಡೀವಿಯದೆ! ಪಾಂಡವರು ಅರಗಿನ ಮನೆಯಲ್ಲಿ ನಾಶಗೊಂಡಿದ್ದು ಸುಳ್ಳು!

ದ್ರುಪದ : ಹಾಗೆಯೇ ಆಗಲಿ, ನೀನು ಈ ವಧೂವರರನ್ನು ಹಿಂಬಾಲಿ ಅವರ ಬಿಡಾರಕ್ಕೆ ಹೋಗಿ ಅವರ ದಿನಚರ್ಯೆಯನ್ನೇ ನೋಡಿಕೊಂಡು ಬಾ!

ೞ

ನಿವೇದಕ : ಇಂದ್ರಪ್ರಸ್ಥದಲ್ಲಿ ಪಾಂಡವರ ರಾಜವೈಭವ ರಾಜಸೂಯಯಾ ಮುಗಿದು ಅಭ್ಯಾಗತ ಅರಸರೆಲ್ಲ ತೆರಳಿದರೂ ದುರ್ಯೋಧ ಶಕುನಿ ಪ್ರಭೃತಿಗಳು ಹಿಂದೆ ಉಳಿದಿದ್ದಾರೆ. ಇದಾಗ ಮಯವಿರಚಿ ದಿವ್ಯ ಸಭೆಯನ್ನು ಸುತ್ತಾಡಿ ನೋಡುತ್ತಿದ್ದಾರೆ. ಅದೋ ದೂರ ಅಟ್ಟಾಲಿಕೆಯಲ್ಲಿ ಅವರನ್ನೆ ವೀಕ್ಷಿಸುತ್ತ ಸಖಿಯರೊಂದಿಗೆ ದ್ರೌಪದಿ

ಸಖಿ : ನೋಡಿದಿರಾ ಮಹಾರಾಣಿ, ಅಲ್ಲಿ ದುರ್ಯೋಧನ ಮಹಾರಾಜ ಬಾಗಿಲೆಂದು ನುಗ್ಗಿ ಗೋಡೆಗೆ ತಲೆ ಜಪ್ಪಿಕೊಂಡರು! ಹಃ ಹಃ!

ದ್ರೌಪದಿ : ಅವರ ತಲೆ ದಪ್ಪ ಇದೆಯಪ್ಪಾ! ಗೋಡೆಗೇನಾಯಿತೋ! (ನಗ

ಸಖಿ : ಅವ್ವಯ್ಯಾ ? ಇದೇನು, ಶಕುನಿ ಮಾವ ನೆಲವೆಂದು ಅಡಿ ಇ ಆ ಶೋಭೆಯ ಕೊಳದಲ್ಲಿ ಕೊರಳಮಟ ಬಿದ್ದು ಮುಳುಗಿ (ನಗು)

ದ್ರೌಪದಿ : ಅಲ್ಲೇ, ಅತ್ತ ನೋಡೇ, ಅಥವಾ ಬೇಡ. ನೀರೆಂದು ಭಾವಿ ದುರ್ಯೋಧನ ಆ ಅಂಗಳದಲ್ಲಿ ಉಟ್ಟ ವಸ್ತ್ರ ಮೇಲೆತ್ತಿ ತೊ ತೋರಿಸುತ್ತ ನಡೆದಿದ್ದಾನೆ. ಇತ್ತ ಹೊರಳೇ ಮರುಳೇ! ಪಾ ಅಂಧ ಪುತ್ರ! ಇನ್ನೇನು! (ನಗು)

ದುರ್ಯೋಧನ : (ಕ್ರೋಧೋದ್ರಿಕ್ತ) ಅಂಧ ಪುತ್ರ ! ಪಾಂಪ! ಏನಿದು ಈ ದ್ರೌಪದಿ ದರ್ಪ! ಶಕುನಿ ಮಾವ, ಇಂದ್ರಪ್ರಸ್ಥದ ಐಶ್ವರ್ಯ ನನ್ನದಾಗಲೇಬೇಕು. ರಾಜಸೂಯ ಫಲಿಸಲೇಬೇಕು.

ಶಕುನಿ : ಅದಕ್ಕೇನಂತೆ! ನಾಳೆಯೇ ಜೂಜಾಡೋಣ. ಪಾಂಡವರ ಜೂಜಿನಲ್ಲಿ ಗೆಲ್ಲೋಣ, ದೇಶಕೋಶವೆಲ್ಲ ಸೆಳೆದುಕೊಳ್ಳೋ

ದುರ್ಯೋಧನ : ಅಷ್ಟು ಸಾಲದು ಮಾವಾ, ಈ ಕೃಷ್ಣೆ, ಈ ಬೆಂಕಿಯ ಮ ಕಾವು ಪೂರ್ತಿ ಆರಬೇಕು. ನನ್ನ ತೊಡೆ ಕಂಡು ಕೇಕೆ ಹಾ ದುಷ್ಟೆ! ಈ ತೊಡೆಯನ್ನೇರುವ ತೊತ್ತಾಗಬೇಕು.

(ಅವನ ಕಿವಿಯಲ್ಲಿ ದ್ರೌಪದಿಯ ನಗು ಮೊಳಗುತ್ತದೆ)

ಸಖಿ : ಮಹಾರಾಣಿ, ಮಹಾರಾಣಿ ನನಗೆ ಭಯವಾಗುತ್ತದೆ. ಶಕುನಿ ದುರ್ಯೋಧನರು ನಮ್ಮನ್ನೇ ದುರುಗುಟ್ಟುತ್ತಾ ಏನೇನೋ ಗುರುಗುಟ್ಟುತ್ತ ಹೋದರು.

ದ್ರೌಪದಿ : ಹೋಗಲಿ, ವಿನಾಶಕಾಲಕ್ಕೆ ವಿಪರೀತ ಬುದ್ಧಿ !

೬

ದ್ಯೂತ ಸಭೆ.

ದನಿ ೧ : ಹಾ! ಆಗಬಾರದ್ದಾಯಿತು! ಪಾಂಡವರು ಸೋತರು!

ದನಿ ೨ : ಮಾಡಬಾರದ್ದು ಮಾಡಿದರೆ ಮತ್ತೇನು ಆಗಬೇಕು?

ದನಿ ೩ : ಆ ಶಕುನಿ ಮಹಾ ಕಪಟಿ. ಯುಧಿಷ್ಠಿರ ತನ್ನ ಸಾಮ್ರಾಜ್ಯ ಸರ್ವಸ್ವ ಕಳೆದುಕೊಂಡ!

ದನಿ ೧ : ಅಕೋ ಹೆಂಡತಿಯನ್ನು ಪಣಕ್ಕೆ ಒಡ್ಡಿದ ಮೂರ್ಖ.

ದನಿ ೨ : ಅವಳನ್ನೂ ಸೋತ. ಅಯ್ಯೋ, ಇದೆಂಥ ಘೋರ ಕಾಲ ಬಂತು!

ದನಿ ೩ : ಅದೋ ದುರ್ಯೋಧನ ಮಹಾರಾಜರ ಆಜ್ಞೆಯಂತೆ ಪ್ರಾತಿಕಾಮಿ ದ್ರೌಪದಿಯನ್ನು ಕರೆಯಲು ಹೋದ.

೭

ಪ್ರಾತಿಕಾಮಿ : ದೇವಿ, ದ್ರೌಪದೀ, ನಾನು ದೂತ ಪ್ರಾತಿಕಾಮಿ.

ದ್ರೌಪದಿ : ತಿಳಿಯಿತು, ಮತ್ತೆ ಹೇಳಬೇಡ, ಕೇಳಲಾರೆ, ಸಭೆಯಲ್ಲಿ ತಿರುಗಿ ಹೋಗು ಧೃತರಾಷ್ಟ್ರ ಮಹಾರಾಜರಿಗೆ ಕೇಳು.

ದುರ್ಯೋಧನ : ಅವಳದೇನು ಪ್ರಶ್ನೆಯೋ, ಇಲ್ಲಿಗೇ ಬಂದು ಅವಳೇ ಕೇಳಲಿ. ಹೋಗು ಕರೆದುಕೊಂಡು ಬಾ, ಬೇಡ, ದುಃಶಾಸನಾ, ಆ ದಾಸಿಯನ್ನು ನೀನೇ ಎಳೆದು ತಾ !
(ಗಂಡು-ಹೆಣ್ಣು ದನಿಗಳು ಕಳವಳದಿಂದ ರೇಗಾಡುತ್ತವೆ)

ಹೆಣ್ಣು : ಅಯ್ಯೋ ಇಂಥ ಅವಸ್ಥೆ ವೈರಿಗೂ ಬರಬಾರದು!

ಗಂಡು : ಅರೇ ಆ ಪಾಪಿ ದ್ರೌಪದಿಯನ್ನು ದರದರ ಎಳೆದು ತರುತ್ತಿದ್ದಾನ
("ಅಯ್ಯೋ, ಬಿಡು ಪಾಪೀ ಬಿಡು :-" ದ್ರೌಪದಿಯ ಕೂಗು."ನ
ಬಿಡುವುದು ಅಲ್ಲಿ, ಸಭೆಯಲ್ಲಿ ಭಂಡಾಟ ತಡೆ:-" ದುಃಶಾಸ
"ಅಯ್ಯೋ, ಹಾಯ್, ದೇವಾ, ದೇವಾ :-ದ್ರೌಪದಿ")

ಹೆಣ್ಣು ೧ : ಇದೇನು ಅಸಹ್ಯ, ಆ ದುಷ್ಟ, ಮಹಾರಾಣಿಯ ತುರುಬು ಹಿಡಿ
ಎಳೆಯುತ್ತಿದ್ದಾನೆ!

ಗಂಡು ೧ : ಅಯ್ಯೋ ಪಾಪಿ, ಸೆರಗು ಹಿಡಿದು ಸೆಳೆಯುತ್ತಿದ್ದಾನೆ!

ಹೆಣ್ಣು ೨ : ಪಾಽಪ, ದ್ರೌಪದಿ ರಜಸ್ವಲೆ.

ಹೆಣ್ಣು ೧ : ಏಕವಸ್ತ್ರೆ

ಗಂಡು ೨ : ಇದೆಂಥ ದುರ್ಬುದ್ಧಿ ಬಂತೋ ಕೌರವನಿಗೆ!
(ದ್ರೌಪದಿಯ ಚೀತ್ಕಾರ, ದುಃಶಾಸನನ ಕೇಕೆ ಗರ್ಜನೆ ಹಿನ್ನೆಲೆಯ
ನಡೆಯುತ್ತಲೇ ಇರುತ್ತವೆ).

ಗಂಡು ೧ : ಸೈ ಸೈ, ದ್ರೌಪದಿ ಕಟುಕನ ಕೈಯಿಂದ ಪಾರಾದ ಗೋವು-ಧೃತರಾ
ಮಹಾರಾಜನ ಸಿಂಹಾಸನದ ಬುಡಕ್ಕೆ ಓಡಿ ಹೋಗಿ ಬಿ
ಗೋಗರೆಯುತ್ತಿದ್ದಾಳೆ.

ದ್ರೌಪದಿ : ಮಹಾರಾಜಾ, ಈ ನಿನ್ನ ಸೊಸೆಯನ್ನು ಕಾಪಾಡು.

ಧೃತರಾಷ್ಟ್ರ : ಇದೇನು ನಡೆದಿದೆ! ದುಃಶಾಸನ ಬಿಡು ಅವಳನ್ನು ದೂರ ಸ
ಎಂಥ ಅನಾಚಾರ, ನಾನು ಜನ್ಮಾಂಧ, ನೀವು ನನ್ನ ಮಕ್ಕ
ಮದಾಂಧರು!

ದುರ್ಯೋಧನ : ಲೇ ದಾಸೀ, ಇಲ್ಲಿ ನೋಡು, ಅಂದು ನೋಡಿ ನಕ್ಕೆಯಲ್ಲಾ ಅ
ತೊಡೆ. ಇದನ್ನೇರು ಬಾ!

ಧೃತರಾಷ್ಟ್ರ : ಮುಚ್ಚು ಬಾಯಿ, ಮೂರ್ಖ ಮಗನೇ! ದ್ರೌಪದೀ, ನಿನ್ನ ಹೇ
ಏನು? ನಿರ್ಭಯವಾಗಿ ಹೇಳು.

ದ್ರೌಪದಿ : ಕ್ಷಮಿಸು ಮಹಾರಾಜಾ, ಕ್ಷಮಿಸಿ ಸಭಾಸದರೇ, ಆಗಲೇ ನಿಮ್ಮ
ನಾನು ನಮಸ್ಕರಿಸಲಿಲ್ಲ. ನನ್ನ ಕೈಗಳೆರಡೂ ಮರ್ಯಾ
ಮುಚ್ಚಿಕೊಳ್ಳಲು ತೊಡಗಿದ್ದವು. ಇದೋ ಈಗ ನಿಮಗೆ

ವಂದನೆ. ಸ್ವಯಂವರ ಕಾಲದಲ್ಲಿ ಬಿಟ್ಟರೆ ಹಿಂದೆ ಎಂದೆಂದೂ ನಾನು ಹೀಗೆ ಸಭೆಯಲ್ಲಿ ನಿಂತವಳಲ್ಲ. ಇದೀಗ ಅರೆ ಬತ್ತಲೆ ನಿಂತಿದ್ದೇನೆ. ಮೈ ಮುಚ್ಚಿಕೊಳ್ಳಲಾರೆ. ನೀವು ಕಣ್ಮುಚ್ಚಿಕೊಂಡು ಕೇಳಿರಿ.

ಧೃತರಾಷ್ಟ್ರ : ನನ್ನ ಕಣ್ಣು ಮುಚ್ಚಿಯೇ ಇದೆ. ಅದು ಇಂದು ಕ್ಷೇಮವೇ ಆಯಿತು (ನಿಟ್ಟುಸಿರು) ನಿನ್ನ ಪ್ರಶ್ನೆ ಏನು ಮಗಳೇ?

ದ್ರೌಪದಿ : ಹೆಂಡತಿಯನ್ನು ಗಂಡ ಜೂಜಿನಲ್ಲಿ ಪಣಕ್ಕೆ ಹಚ್ಚಬಹುದೇ? ಹೆಣ್ಣು ಒಂದು ಒಡವೆಯೇ? ಅಲ್ಲದೆ ತಾನು ಸೋತು ಸ್ವತ್ವ ಕಳೆದುಕೊಂಡ ಗಂಡ ಹೆಂಡತಿಯನ್ನು ಪಣಕ್ಕೆ ಒಡ್ಡಲು ಸ್ವತಂತ್ರನೇ? ಹೇಳಿರಿ ಗುರುಗಳೇ, ಹಿರಿಯರೇ, ಕುಲವೃದ್ಧರೇ, ಕುರುವೃದ್ಧರೇ ಇದಾವ ನ್ಯಾಯ? ಇದಾವ ಧರ್ಮ?

(ಸಭೆಯಲ್ಲಿ ಕಲಕಲ)

ಭೀಷ್ಮಾಚಾರ್ಯರೇ ಹೇಳಬೇಕು! ದೇವವ್ರತರೇ ನಿರ್ಣಯ ಕೊಡಬೇಕು!

ಭೀಷ್ಮ : ದ್ರೌಪದೀ, ಸೌಭಾಗ್ಯವತೀ, ನಿನ್ನ ಪ್ರಶ್ನೆ ಯೋಗ್ಯವಿದೆ. ಆದರೆ ಅದಕ್ಕೆ ನಾನು ಯೋಗ್ಯ ಉತ್ತರ ಕೊಡಲಾರೆ. ಧರ್ಮದ ಗತಿ ಅತಿ ಗಹನ, ಅತಿ ಸೂಕ್ಷ್ಮ ! ನಿನ್ನ ಪತಿ ಯುಧಿಷ್ಠರ ಸತ್ಯದ ಮರ್ಮವನ್ನು ಬಲ್ಲ ಆತ ಸತ್ಯ ಧರ್ಮದಿಂದ ಎಂದೂ ತಪ್ಪಿ ನಡೆಯುವವನಲ್ಲ.

ದ್ರೌಪದಿ : ಅಂದರೆ ಏನು ಅರ್ಥ?

ಭೀಷ್ಮ : (ವಿಷಣ್ಣನಾಗಿ ನಕ್ಕು) ಅರ್ಥಕ್ಕೆ ಪುರುಷನು ದಾಸನು. ಅರ್ಥವು ಯಾವನಿಗೂ ದಾಸವಲ್ಲ. ಇದಕ್ಕೂ ಹೆಚ್ಚು ನಾನೇನೂ ಹೇಳಲಾರೆ.

ದ್ರೌಪದಿ : ನಾನು ಹೇಳಬಲ್ಲೆ.

ದುರ್ಯೋಧನ : ನೀನೂ ಹೇಳಲಾರೆ. ನೀನು ದಾಸಿ. ದಾಸಿಗೆ ನಾಲಿಗೆ ಇಲ್ಲ. ಒಡೆಯನ ಅಪ್ಪಣೆ ಪಾಲಿಸಲು ಕೈಕಾಲು ಮಾತ್ರ. ಒಡೆಯನ ಇಚ್ಛೆಗೆ ಒಲಿಯಲು ಮೈ ಮಾತ್ರ! (ಗಹಗಹಿಸಿ ನಗುವನು) ಕೇಳು, ಆ ಭೀಮನಿಗೆ.

**ಭೀಮ** : (ಭುಗಿಲೆದ್ದು ಗರ್ಜಿಸುವನು) ಯಾರಾದರೂ ತನ್ನಿರೊ, ಬೆಂಕಿಯನ್ನು ತನ್ನಿ! ಈ ದುಃಶಾಸನನ ಕೈಗಳನ್ನು ಸುಡುತ್ತೇನೆ! ದ್ರೌಪದಿಯ ತುರುಬಿಗೆ-ಸೆರಗಿಗೆ-ಆಃ! ತಾಳೆನು! (ಉಸಿರುಗಟ್ಟಿ) ಅಬ್ಬ! (ನಿಟ್ಟುಸಿರು)

**ದ್ರೌಪದಿ** : ನೀವೇಕೆ ರೇಗಾಡುವಿರಿ ? ಅಸಹಾಯನ ಕೋಪದಷ್ಟು ಕನಿಕರದ ಸಂಗತಿ ಇನ್ನೊಂದಿಲ್ಲ. ಈ ಕೌರವರನ್ನು ಸುಡಲು ಬೇರೆ ಬೆಂಕಿ ಏಕೆ, ಏಕೆ ಬೇಕು? ನಾನೇ ಬೆಂಕಿ. ಬೆಂಕಿಯಿಂದೆದ್ದು ಬಂದ ಜ್ವಾಲೆ, ನನ್ನನ್ನು ಮುಟ್ಟಿದವರು ಜೀವಂತವಿರಲಾರರು. ಮಹಾರಾಜಾ, ನಿನ್ನ ಈ ಸೊಸೆಗೆ ಇಷ್ಟೊಂದು ನೀಡು-ನನ್ನ ಪಂಚ ಪತಿಗಳ ಸ್ವಾತಂತ್ರ್ಯ ಮತ್ತು ಅವರ ಧನುರ್ಬಾಣಗಳು. ಮುಂದಿನ ನಮ್ಮ ದಾರಿ ಅವರ ಬಾಣ ತೋರಿಸುವ ಗುರಿ.

**ಧೃತರಾಷ್ಟ್ರ** : ತಥಾಸ್ತು ಮಗಳೇ, ಕಲ್ಯಾಣಾಮಸ್ತು.
(ಧನ್ಯ! ಧನ್ಯ! ಅಗ್ನಿಕನ್ಯೆ ದ್ರೌಪದಿ ಧನ್ಯ! ಎಂಥ ಮಾತು ! ಎಂಥ ತೇಜ! ಇವಳೊಬ್ಬಳೇ ಈ ಸಭೆಯಲ್ಲಿ ಗಂಡು: ಇತ್ಯಾದಿ ಉದ್ಗಾರಗಳು)

## ೮

**ನಿವೇದಕ** : ವನವಾಸ ಮುಗಿದು ಅಜ್ಞಾತವಾಸದಲ್ಲಿ ದ್ರೌಪದಿಗೆ ಇನ್ನೊಂದು ಕುತ್ತು. ವಿರಾಟನಗರದಲ್ಲಿ ದುರ್ಬಲ ವಿರಾಟನ ಶಾಲಕ ಸರ್ವಾಧಿಕಾರಿ ಕೀಚಕನ ಕಾಮಾಂಧ ಕಣ್ಣಿಗೆ ಆಕೆ ತುತ್ತು. ಅವಳ ಕೈಹಿಡಿದ ಮೂರು ಲೋಕದ ಗಂಡ ಅರ್ಜುನ ಕೈಕಟ್ಟಿಕೊಂಡು ಕೂತ. ಆಗ ಸೈರಂಧ್ರಿ ದ್ರೌಪದಿ ವಲಲ ಭೀಮನನ್ನು ಮೊರೆ ಹೊಕ್ಕಳು.

**ದ್ರೌಪದಿ** : (ಭೀಮನ ಎದೆಯಲ್ಲಿ ಮೊಗವಿಟ್ಟು ಬಿಕ್ಕಿ ಬಿಕ್ಕಿ ಅಳುತ್ತ) ನಾಥಾ ಭೀಮಾ! ಆಪತ್ಕಾಲದಲ್ಲಿ ನೀನೆ ನನ್ನ ಪತಿ. ನಿನ್ನ ಎದೆಯ ವಜ್ರ ಪಂಜರದ ಪಾರಿವಾಳ ನಾನು ! ನನ್ನ ಮರ್ಯಾದೆ ಕಾಪಾಡು (ಬಿಕ್ಕಿ) ಇಲ್ಲವಾದರೆ ನನ್ನ ಬಾಳು ನಾಯಿ ಪಾಡು! (ಮತ್ತೆ ಅಳು

**ಭೀಮ** : ಅಳಬೇಡ, ಕೃಷ್ಣೇ, ನಿನ್ನ ಕಣ್ಣೀರು ನನ್ನ ಎದೆ ಸುಡುತ್ತಿದೆ. ಅಳಬೇಡ

ಇಕೋ ನನ್ನ ಮಾತು, ಅಣ್ಣನಿಟ್ಟ ಗೆರೆಯ ದಾಟಿದೆನು-ದಾಟಿದೆನು! ಈ ಅರ್ಜುನನೇ ಸೀರೆ ಉಟ್ಟು ನಪುಂಸಕನಂತೆ ಕೂತಾಗ ನಿನಗೆ ನಾನೇ ರಕ್ಷಕ! ಇಂದು ರಾತ್ರಿ ಕೀಚಕನನ್ನು ಕೊಲ್ಲುತ್ತೇನೆ. ಹೋ! ನೀನು ಬೆಂಕಿಯ ಮಗಳು, ನಾನು ಗಾಳಿಯ ಮಗ. ಗಾಳಿ ಬೆಂಕಿ ಕೂಡಿದಾಗ ಇದಿರಾಳಿ ಯಾರು ? ಎಲ್ಲರೂ ಸುಟ್ಟು ಸೂರೆ ! ಹಃ ಹಃ

೬

ನಿವೇದಕ : ಜೂಜಿನಲ್ಲಿ ಸೋತ ಶರತ್ತುಗಳಂತೆ ವನವಾಸ ಅಜ್ಞಾತವಾಸಗಳನ್ನು ಮುಗಿಸಿ ಹಸ್ತಿನಾಪುರಕ್ಕೆ ಮರಳಿದಾಗ ಕುರು-ಪಾಂಡವರ ಯುದ್ಧ ತಪ್ಪಿಸಲು ಸಂಧಾನದ ಪ್ರಯತ್ನ ನಡೆಯುತ್ತದೆ. ಶ್ರೀಕೃಷ್ಣ ಸಂಧಾನಕ್ಕೆ ಹೊರಟಾಗ ಕೃಷ್ಣೆಯನ್ನು ಭೆಟ್ಟಿಯಾಗುತ್ತಾನೆ.

ದ್ರೌಪದಿ : ಕೃಷ್ಣ, ಸಂಧಿಬೇಡ, ಸಂಧಾನ ಸಾಧಿಸುವುದು ಬೇಡ. ಕೌರವರು ಸಂಧಿಗೆ ಯೋಗ್ಯರಲ್ಲ. ಲೋಭಿಗಳೂ, ದುಷ್ಟರೂ ಆದ ಕ್ಷತ್ರಿಯರನ್ನು ಸಂಹರಿಸಲೇಬೇಕು. ಯಜ್ಞವೇದಿಯಿಂದ ಹುಟ್ಟಿಬಂದವಳು ನಾನು. ನನ್ನಂತ ಹೆಣ್ಣು ಬೇರೆ ಯಾರು ಉಂಟು? ಮಂತ್ರ ಪೂತ ಜಲದಿಂದ ಮೂರ್ಧಾಭಿಷಿಕ್ತವಾದ ರಾಜಸೂಯದ ಹೋಮ ಧೂಮದ ಧೂಪ ಹಾಕಿದ ಈ ನನ್ನ ಮುಡಿಗೆ ಆ ನೀಚ ದುಃಶಾಸನ ಕೈ ಹಾಕಿದ, ಕೃಷ್ಣಸರ್ಪದ ಕರಾಳ ಹೆಡೆಗೆ ಕೈಚಾಚಿದಂತೆ! ಆತ ಬಿಚ್ಚಿದ ಈ ಕೇಶರಾಶಿಯನ್ನು ನೋಡು. ಕೌರವನೊಂದಿಗೆ ಸಂಧಿಯ ಮಾತು ಆಡುವಾಗ ಈ ತೂರಿದ ತುರುಬನ್ನು ನೆನಪಿಡು! (ದುಃಖ ಗದ್ಗದ) ಭಾರಿ ಸಭೆಯಲ್ಲಿ ನನ್ನ ವಿಡಂಬನೆಯನ್ನು ಮರೆಯಬೇಡ! ಅಣ್ಣಾ, ಮರೆಯಬೇಡ!

ಕೃಷ್ಣ : ತಥಾಸ್ತು ದ್ರೌಪದಿ, ನಿನ್ನ ಹಗೆಗಳ ಹೆಂಡಂದಿರು ಹೀಗೆಯೆ ಹೆಳಲು ಬಿಚ್ಚಿ ಹುಡಿಯಲ್ಲಿ ಹೊರಳಾಡುವುದನ್ನು ನೀನು ನೋಡುವಿ! ತಂಗೀ ಹಿಮಾಚಲವೇ ಅಲ್ಲಾಡಲಿ, ಭೂಮಂಡಲವೇ ನೂರು ಹೋಳಾಗಲಿ, ನನ್ನ ಮಾತು ಸುಳ್ಳಾಗಲಾರದು! ಶೋಕಿಸಬೇಡ, ಸಂಧಾನದ ನಂತರವೇ ಮಹಾ ಸಂಗ್ರಾಮ! ಚಿಂತಿಸಬೇಡ ತಂಗೀ, ನಿನ್ನ ಈ ನೀಲ ಕೇಶರಾಶಿಯ ಸಿರಿಮುಡಿ ಕಟ್ಟುವ ಕಾಲವಿನ್ನೂ

ದೂರವಿಲ್ಲ!

೧೦

ನಿವೇದಕ : ಆ ಕಾಲವೂ ಬಂದು ಹೋಯಿತು. ಭಾರತಯುದ್ಧ ಮುಗಿಯಿತು. ಕ್ಷತ್ರಿಯ ಕುಲ ಸಂಹಾರವಾಯಿತು. ಇದೀಗ ಸ್ವರ್ಗಾರೋಹಣ. ಧರ್ಮ ಸಾಮ್ರಾಜ್ಯ ಒಂದು ವೈಭವಶಾಲಿ ದುರಂತ. ಮುಂದೆ ಯುಧಿಷ್ಠಿರ, ಹಿಂದೆ ಭೀಮಾರ್ಜುನ ನಕುಲ ಸಹದೇವರು ಹಿಮಾಲಯವೇರಿ ಹೊರಟಿದ್ದಾರೆ! ಹಿಂದೆ ಹಿಂದೆ ದ್ರೌಪದಿ.

ದ್ರೌಪದಿ ಅಬ್ಬ, ಏನು ಚಳಿ! ಎಂಥ ಏರಿ! ಹುಶ್, ಏನು ಆಯಾಸ ಬಳಲಿಕೆ ದಾಹ! ಇನ್ನೂ ಎಷ್ಟು ದೂರ, ಯುಧಿಷ್ಠಿರದೇವಾ ?

ಯುಧಿಷ್ಠಿರ : (ನಕ್ಕು) ಪ್ರಿಯೇ ಇನ್ನು ನಡೆದಷ್ಟು ದೂರ! ನಾವು ಹೊರಟಿದ್ದು ವನವಾಸಕ್ಕೆ ಅಲ್ಲ, ಇದು ಸ್ವರ್ಗಾರೊಹಣ. ಸದೇಹ ಹೊರಟಿದ್ದೇವೆ ಸ್ವರ್ಗಕ್ಕೆ !

ದ್ರೌಪದಿ : (ನರಳುತ್ತ) ಹಾ, ತಾಳಲಾರೆ ! ದಾಹ, ಉರಿ, ಉರಿ! ನೀರು ನಾಥಾ! ನನಗೆ ನೀರು ಕೊಡುವವರು ಯಾರೊ! ಅಬ್ಬಾ. ನನಗೆ ಸತ್ತ ಮೇಲೆಯೇ ಸ್ವರ್ಗ! ಪತಿದೇವಾ ನಾ ಸೋ-ತೆ ನಾ ಸ-ತ್ತೆ ಹೋಗಿಬರುತ್ತೇನೆ ನಮಸ್ಕಾರ!

ಭೀಮ-ಅರ್ಜುನ : ನಿಧಾನಿಸು, ಸೈರಿಸು. ನಕುಲ ಸಹದೇವರೆ ಹೋಗಿ ನೋಡಿ ನೀರು ತನ್ನಿ. ಎಲ್ಲ ಮುಗಿಯಿತು! ಅಣ್ಣಾ ಇದೇಕೆ ಹೀಗೆ: ಹೀಗಾಗಬೇಕೇ? (ಮಾತುಗಳನ್ನು ಹಂಚಿಕೊಂಡು ಆಡುತ್ತಾರೆ. ದ್ರೌಪದಿಯ ಮಾತುಗಳ ನಡು ನಡುವೆ)

ಯುಧಿಷ್ಠಿರ : ಭೀಮಾ, ಅರ್ಜುನಾ, ಹೀಗಾಗದೆ ಇನ್ನೇನು ? ಈಕೆ ದ್ವಾಪರ ಯುಗದ ಅಧಿದೇವತೆ. ಇಲ್ಲಿಗೆ ಯುಗ ಸಮಾಪ್ತಿ! ದ್ರೌಪದೀ ನಿನ್ನಿಂದಲೇ ಭಾರತ ಯುದ್ಧ. ನಿನ್ನಿಂದಲೇ ಕ್ಷತ್ರಿಯ ಕುಲ ಸಂಹಾರ. ಅಗ್ನಿ ಕನ್ಯೆಯ ಅವತಾರ ಹಿಮಾಲಯದಲ್ಲಿ ಅವಸಾನ! ಬೆಂಕಿಯ ಜೀವಂತ ಜ್ವಾಲೆ ಈ ಹಿಮದ ತಂಪಿನ ನೆಲೆಯಲ್ಲಿಯೇ ಆರಬೇಕೇ! ಕಾಲಾಯ ತಸ್ಮೈ ನಮಃ
(ಈ ಸನ್ನಿವೇಶದುದ್ದಕ್ಕೂ ಅರಣ್ಯ ಮಾರ್ಗದ ಸದ್ದುಗಳು, ಹಕ್ಕಿಗಳ ಚಿಲಿಪಿಲಿ, ನೀರಿನ ಬಾಳಿಂದಳು, ಗಾಳಿಯ ಉದ್ದುದ್ದ ಸಿಳ್ಳು)

# ಕಿಸಾ ಗೌತಮಿ

(ಬಾನುಲಿ ರೂಪಕ)

## ಪಾತ್ರ ಪರಿಚಯ

ಬುದ್ಧ ದೇವ

ಆನಂದ

ವೈದ್ಯ ಪಂಡಿತ

ಕಿಸಾಗೌತಮಿ

ಅತ್ತೆ

ಕಲ್ಯಾಣಿ

ಪದ್ಮಕ್ಕ

ಉಮಾ

ವಾಸಂತಿ

ಇತರರು

ನಿವೇದಕ

ಜನಸ್ತೋಮ

ಗಂಡು, ಹೆಣ್ಣು ದನಿಗಳು.

**ಸದ್ದುಗಳು** : ತೂರ್ಯ, ನಾಗಸ್ವರ, ನಗಾರಿ, ಬಾವಿಯ ರಾಟೆ ನೀರೆಳೆಯುವ ಸದ್ದು ಇತ್ಯಾದಿ.

೧

ನಿವೇದಕ : ಶ್ರಾವಸ್ತಿಗೆ ಬುದ್ಧದೇವನ ಆಗಮನ. ಬುದ್ಧಭಗವಾನನ ಸ್ವಾಗತಕ್ಕಾಗಿ ಶ್ರಾವಸ್ತೀ ನಗರವೆಲ್ಲ ಉತ್ಸವದ ಸಂಭ್ರಮದಲ್ಲಿ ವಿಜೃಂಭಿಸಿದೆ. ಮಂಗಲವಾದ್ಯಗಳು ಮೊಳಗುತ್ತಿವೆ. ಜನರ ಕಲಕಲ ಕೊಲಾಹಲ! ಆದರೂ ದಿನ ನಿತ್ಯದ ದುಡಿತ ದುಮ್ಮಾನ ನಡೆಯಲೇ ಬೇಕು. ಊರ ನಾರಿಯರು ನೀರಿಗೆ ಹೋಗಲೇಬೇಕು. ಕುಟುಂಬದ ಕಷ್ಟ ಕೋಟಲೆ ತೋಡಿಕೊಳ್ಳಲೇಬೇಕು. ನೆರೆಮನೆಯ ದುಃಖಕ್ಕೆ ಮರುಗಲೇಬೇಕು.

(ನಿವೇದಕನ ಮಾತಿನ ಹಿನ್ನೆಲೆಯಲ್ಲಿ ತೂರ್ಯ, ನಾಗಸ್ವರ, ನಗಾರೆಗಳ ಸದ್ದು ನಡೆದೇ ಇದೆ. ಕ್ರಮೇಣ ಅವೆಲ್ಲ ಮಂದ, ನಗಾರೆಯೊಂದೇ ಮುಂದೆ ಉದ್ದಕ್ಕೂ ಎದೆ ಬಡಿತದಂತೆ ಮಿಡಿಯುತ್ತಲೇ ಇರುತ್ತದೆ. ಬಾವಿಯ ಬಳಿ ನೀರೆಳೆವ ಸದ್ದು)

ಪದ್ಮಾ : ಕೇಳಿದಿಯೇನೇ ಕಲ್ಯಾಣಿ ?

ಕಲ್ಯಾಣಿ : ಕೇಳ್ತಾ ಇದ್ದೀನಲ್ಲ-ಊರತುಂಬ ಸಂಭ್ರಮ ವಾದ್ಯಗಳ ಕೋಲಾಹಲ? ಬುದ್ಧದೇವರು ಬರ್ತಾರಂತೆ ! ಅಲ್ವೇನೇ ಪದ್ಮಾ?

ಪದ್ಮಾ : ಹೌದೆ, ಆದರೆ ಅದಲ್ಲ ನಾ ಕೇಳಿದ್ದು. ನಾ ಹೇಳೋದು ಕೇಳಿದಿಯಾ ಅಂದೆ !

ಕಲ್ಯಾಣಿ : ನೀ ಏನೂ ಹೇಳೇ ಇಲ್ಲವಲ್ಲ. ಕೇಳೋದೇನಿದೆ?

ಪದ್ಮಾ : ಸಾಕು ಬಿಡು ನಿನ್ನ ಶಾಣೇತನ. ನಾ ಹೇಳೋ ಮುಂಚೆಯೇ ನೀನೇನು ಕೇಳ್ತಿ?

ಕಲ್ಯಾಣಿ : ಮತ್ತೆ ಕೇಳಿದಿಯೇನೆ ಎಂದು ಕೇಳ್ದಿಯಲ್ಲ !

ಪದ್ಮಾ : ಸಾಕು ಬಿಡು, ಮುಂದೆ ಕೇಳು, ಊರಿಗೆ ಊರೇ ಹಬ್ಬದಲ್ಲಿ ಹಿಗ್ಗಿ ನಲೀತದೆ. ಆದರೆ....

ಕಲ್ಯಾಣಿ : ಆದರೇನು ?

ಪದ್ಮಾ : ಆದರೆ ನಮ್ಮ ಕೇರಿಯ ಗೌತಮಿ ಇದ್ದಾಳಲ್ಲ.....

ಕಲ್ಯಾಣಿ : ನಮ್ಮ ಕೇರೀಲಿ ಮೂರು ನಾಲ್ಕು ಗೌತಮಿಗಳು ಇದ್ದಾರೆ!

ಪದ್ಮಾ : ಅವರಲ್ಲೇ, ಆ ಕೃಶಾ ಗೌತಮಿ.....

ಕಲ್ಯಾಣಿ : ಓ, ಆ ಕಿಸಾ ಗೌತಮಿಯೇ ?

ಪದ್ಮಾ : ಕಿಸಾ ಅಲ್ಲ ಕೃಶಾ

ಕಲ್ಯಾಣಿ : ಅಂದ್ರೆ ?

ಪದ್ಮಾ : ಆ ಗೌತಮೀನ ನೀನೋಡಿಲ್ಲ? ಹೇಗೆ ಬಡಕಲು ಕಡ್ಡಿ ಹಾಂಗ ಇದ್ದಾಳೆ! ಯಾವಾಗಲೂ ಹಾಗೇನೇ ಸೊರಗಿ ಸುಕ್ಕಾಗಿದ್ದಾಳೆ. ಆದ್ದರಿಂದ ಅವಳಿಗೆ ಎಲ್ಲರೂ ಕೃಶಾ ಅಂತ ಕರೀತಾರೆ. ಮಂದೀ ಬಾಯಲ್ಲಿ ಕೃಶಾ ಕಿಸಾ ಆಯ್ತು.

ಕಲ್ಯಾಣಿ : ಆಗಲಿ ಬಿಡು, ನಾವೂ ಮಂದೀನೆ. (ಇಬ್ಬರೂ ನಗುವರು) ಹೂಂ ಆ ಗೋತಮಿ ಸುದ್ದಿ ಏನು?

ಪದ್ಮಾ : ಅಕೋ ಅವಳೇ ಬರ್ತಿದ್ದಾಳೆ ಇತ್ತ

ಕಲ್ಯಾಣಿ : ಪಾಪ. ನೋಡು. ಹೇಗೆ ಬಡಬಿದ್ದಿದ್ದಾಳೆ. ಅದಕ್ಕೆ ಏನೋ ಅವಳತ್ತೆ ಗಂಡ ಎಲ್ಲ ಅವಳನ್ನು ಹೀನಾ ಮಾನಾ ಕಾಡ್ತ ಇದ್ದಾರೆ.

ಪದ್ಮಾ : ಹೂಂ, ಅವಳಿಂದ ಕೆಲಸಾನೇ ಸಾಗೊದಿಲ್ಲ; ನೀನೋಡೀಯಲ್ಲ ನೀರು ಎಳೆಯೋದು, ಹಿಟ್ಟು ಬೀಸೋದು ಹೇಗೆ ಸುಸ್ತಾಗಿ ಬಿಡ್ತಾಳೆ; ಆ ಗಂಡಂತೂ ಊರು ಬಿಟ್ಟೇ ಹೋಗಿಬಿಟ್ಟ!

ಕಲ್ಯಾಣಿ : ಅವೆಂಥ ಮೂಳ ! ಮದುವೆ ಆಗುವಾಗೇ ಗೊತ್ತಿದ್ದಿಲ್ವೇ, ಗೌತಮಿ ಬಡಕಲು ಹೆಣ್ಣೂಂತs! ಅಲ್ವೇ, ಆತ ಬಿಟ್ಟು ದೇಶಾಂತರಕ್ಕೆ ಹೋಗುವಾಗ ಈಕೆ ಬಸುರಿ

ಪದ್ಮಾ : ಹೂಂ, ಕಳೆದ ಶ್ರಾವಣದಲ್ಲಿ ಒಂದು ಗಂಡುಕೂಸು ಹೆತ್ತಾಳೆ. ಅಂದಿನಿಂದ ಅತ್ತೆ ಗೌತಮೀನ ಚೆನ್ನಾಗಿ ನೋಡಿಕೊಳ್ತೇ ಇದ್ದಾಳೆ. ಇವಳ ತೂಕ ತುಸು ಹೆಚ್ಚಾಗಿದೆ.

ಕಲ್ಯಾಣಿ : ನೋಡು ಬರ್ತಿದ್ದಾಳೆ. ಅವಳ ತೂಕ ಕಾಣ್ತೇ ಇದೆ! ಕಡ್ಡಿ ಆಗಿದ್ದಾಳೆ ಕಿಸಾ! ಪದ್ಮಾ ಹೇಗೆ ಮುಖ ಬಿಳಿಚಿದೆ, ಇವಳಿಗೇನೋ ದುಃಖ!

ಪದ್ಮಾ : ಕಣ್ಣು ಊದಿ ಕೆಂಪಾಗಿದ್ದಾವೆ ಇಕೋ ಗೌತಮಿಗೆ, ನಿಂಗೆ ನೂರುವರುಷ ಆಯುಷ್ಯ ನಿಂದೇ ಮಾತು ಆಡ್ತಿದ್ವಿ.

ಗೌತಮಿ : ಪದ್ಮಕ್ಕಾ, ಕಲ್ಯಾಣಮ್ಮ ಆ ಆಯುಷ್ಯ ನಂಗೆ ಬೇಡ. ನನ್ನ (ಅಳುವ ದನಿ) ಕಂದನಿಗೆ ಕೊಡಿ, ದೇವರಿಗೆ ಬೇಡಿಕೊಳ್ಳಿ.

ಉಮಾ : (ಬಂದು) ಯಾಕೆ ? ಏನಾಯ್ತು ಕಿಸಾ, ನಿನ್ನ ಮಾತು ಕೇಳಿ ಅಂಗಳಕ್ಕೆ ಬಂದೆ ಏನಾತು? ಅಳಬೇಡ, ಹೂಂ.

ಕಿಸಾ : ಏನು ಹೇಳಲಿ? ಉಮಮ್ಮಾ ನನ್ನ ಸುಖ ದೇವರಿಗೆ ನೋಡೋಕೆ ಆಗಲಿಲ್ಲ, ನನ್ನ ಕಂದಮ್ಮನಿಗೆ ಸಕ್ತ ಕಾಯಿಲೆ. ಮೈ ನಿಗಿ ನಿಗಿ ಕೆಂಡ. ಎಚ್ಚರವೇ ಇಲ್ಲ (ಬಿಕ್ಕು)

ಕಲ್ಯಾಣಿ : ಅಳಬೇಡ.

ಪದ್ಮಾ : ಗುಣ ಆದೀತು.

ಉಮಾ : ಹೆದರಬೇಡ, ಮದ್ದು ಗಿದ್ದು ಮಾಡಿಲ್ಲವೆ ?

ಗೌತಮಿ : ಮದ್ದಿಗಾಗಿಯೇ ವೈದ್ಯರ ಮನೆಗೆ ಹೋಗಿದ್ದೆ.

ಮೂವರು : ಏನಂದ್ರು?

ಗೌತಮಿ : ಅವರೇ ಬರ್ತಿದ್ದಾರೆ. ಮದ್ದುಕೊಟ್ರು ಅಮ್ಮ, ನಾ ಮುಂದೆ ಹೋಗ್ತೆ ಉಮಕ್ಕ, ಪದ್ಮಕ್ಕ, ನನ್ನ ಮಗೂನ (ಬಿಕ್ಕು) ಉಳಿಸಿಕೊಳ್ಳಲಿಕ್ಕೆ ಆ ಕಾತ್ಯಾಯಿನಿದೇವಿಗೆ ಹರಕೆ ಹೇಳಿಕೊಳ್ಳಿ! ಮತ್ತೆ ಸಿಗ್ತೇನೆ, (ಹಿನ್ನೆಲೆಯಲ್ಲಿ ಗುಡಿಯ ಗಂಟೆ)

## ೨

(ಮಗುವಿನ ಚೀತ್ಕಾರ, ದೂರದ ಹಿನ್ನೆಲೆಯಲ್ಲಿ ನಾಗಸ್ವರದ ತಾರಸ್ವರಾಲಾಪ)

ಅತ್ತೆ : (ಮುದಿದನಿ) ವೈದ್ಯರೇ, ಮಗು ಏನು ? ಕಿಸಾ ಅಳಬೇಡ ಮಗೂ, ವೈದ್ಯ ಪಂಡಿತರು ಕಂದನ ಕಾಪಾಡುತ್ತಾರೆ.

ವೈದ್ಯ : ಗೌತಮೀ, ಮಗೂನ ತೊಡೆಯಿಂದ ಕೆಳಗೆ ಇಡು. ಹೂಂ ಧೈರ್ಯ ತಾಳು, (ನಿಟ್ಟುಸಿರು) (ಮಗುವಿನ ದನಿ ಕ್ಷೀಣವಾಗುತ್ತಿದೆ.)

ಗೌತಮಿ : ಅತ್ತೆ, ಮಗು ಏಕೆ ಹೀಗೆ? ಉಸಿರುಗಟ್ಟಿದಂತೆ (ಅಳು ದನಿ) ಮಾಡ್ತಿದೆ. ಅಯ್ಯೊ ವೈದ್ಯರೆ.....

ದ್ಯ : ಗೌತಮಿ, ಹೀಗೆ ಗಾಬರಿ ಆದರೆ ಹೇಗೆ? ಮಗುವಿನಿಂದ ದೂರ ಸರಿ. ಇನ್ನು ಅದನ್ನು ಅವಚಿಕೊಂಡು ಏನು ಪ್ರಯೋಜನ?

ತ್ತೆ ಸೊಸೆ : ಅಂದರೆ, ಅಯ್ಯೋss! ನನ್ನ ಕಂದಾ, ಹೇಗಾದರೂ ಉಳಿಸಿ ಬದುಕಿಸಿ, ದೇವರೇ, ನನ್ನ ಪ್ರಾಣತಕೋ.....ವೈದ್ಯರೇ....

ದ್ಯ : ಸೈರಿಸು ತಾಯೀ, ವೈದ್ಯ ನೋವು ಕಡಿಮೆ ಮಾಡ್ತಾನೆ. ಸಾವು ದೂರ ಮಾಡೋದಿಲ್ಲ. ಸಾವಿಗೆ ಮದ್ದಿಲ್ಲ. ಅಮ್ಮಾ ಸಾವಿಗೆ ಮದ್ದಿಲ್ಲ, ಎಲ್ಲ ಭಗವಂತನ ಲೀಲೆ! ಭಗವಂತನ ಇಚ್ಛೆ. (ದೊಡ್ಡ ಅಳುವಿನ ದನಿ. ದೂರದಲ್ಲಿ ವಾದ್ಯಗಳ ಮೊರೆತ)

೩

ವೇದಕ : ಶ್ರಾವ್ತಸಿ ನಗರಕ್ಕೆ ಬುದ್ಧದೇವನ ಆಗಮನ. ನಗರದ ಹೊರಗಿನ ಆಮ್ರವನದಲ್ಲಿ ಶಿಷ್ಯರೊಂದಿಗೆ ಬುದ್ಧದೇವನ ವಾಸ್ತವ್ಯ. ಶ್ರಾವಕರೂ ಶ್ರವಣರೂ ನಾಗರಿಕರೂ ದರ್ಶನಕ್ಕಾಗಿ ಬಂದಿದ್ದಾರೆ, ಭಗವಾನ್ ಬುದ್ಧನ ಪ್ರವಚನಕ್ಕೆ.

ನಸ್ತೋಮ : ಓಂ ನಮೋ ಬುದ್ಧಾಯ, ಓಂ ನಮೋ ನಿತ್ಯ ಶುದ್ಧಾಯ, ಓಂ ನಮೋ ಮಹಾತಪಃಸಿದ್ಧಾಯ, ಓಂ ನಮೋ ಶಾಕ್ಯಮುನಯೇ, ಓಂ ನಮೋ ತಥಾಗತಾಯ, ಬುದ್ಧಂ ಶರಣಂ ಗಚ್ಛಾಮಿ, ಬುದ್ಧಂ ಶರಣಂ ಗಚ್ಛಾಮಿ.

ುದ್ಧ : (ಸ್ನಿಗ್ಧ) ಕಲ್ಯಾಣಮಸ್ತು. ಓಂ ಮಣಿ ಪದ್ಮೆ ಓಂ! (ಗಂಭೀರ ಶಂಖ ಧ್ವನಿ) ಆನಂದ? ಇದೇನು, ಈ ಜನಸ್ತೋಮ. ಮಹಾಸಂಭ್ರಮ? ನನಗೇಕೆ ಈ ಸ್ವಾಗತ?

ಾನಂದ : ಭಗವಾನ್, ತಮ್ಮ ಶುಭಾಗಮನದಿಂದ ಸಮಸ್ತ ಶ್ರಾವಸ್ತಿಗೆ ಹರ್ಷವಾಗಿದೆ, ಚಂದ್ರೋದಯಕ್ಕೆ ಕಡಲು ಉಕ್ಕಿ ಮೊರೆಯುವಂತೆ!

ುದ್ಧ : ಆನಂದ ನೀನು ಕವಿಯೂ ಆದೆಯಾ? (ನಗು) ಕಡಲು ಅಮಾವಾಸ್ಯೆಗೆ ಇನ್ನೂ ಹೆಚ್ಚು ಉಕ್ಕುತ್ತದೆ! ಶುಭವೇನು, ಅಶುಭವೇನು, ತಥಾಗತನ ಆಗಮನ-ನಿರ್ಗಮನ ಒಂದೇ ರೀತಿ ನಿಯತ ಕರ್ಮ-ಸಹಜಧರ್ಮ ಇದಕ್ಕೇಕೆ ಈ ಅಟ್ಟಹಾಸ!

ಆನಂದ : ಗುರುವೇ, ಈ ಜನಕ್ಕೆ ಶರಣಾರ್ಥಿಗಳಿಗೆ ಬೋಧ ವಚನದಿಂ ಆಶೀರ್ವದಿಸಬೇಕು.

ಜನಸ್ತೋಮ : ಹೇ ಗುರೋ ! ಆಶೀರ್ವದಿಸಬೇಕು.

ಬುದ್ಧ : (ನಕ್ಕು) ನಾ ಯಾರು ನಿಮ್ಮನ್ನು ಆಶೀರ್ವದಿಸಲಿಕ್ಕೆ? ನೀವು ಊ ಹಿರಿಯರು. ನನಗಿಂತಲೂ ಹಲವರು ಹಿರಿಯರು. ಅಲ್ಲ ತಿಳಿದವರಿಗೆ ಉಪದೇಶ ಬೇಕಿಲ್ಲ. ತಿಳಿಗೇಡಿಗಳಿಗೆ ಉಪದೇ ಉಪಯೋಗವಿಲ್ಲ. (ಎಲ್ಲರ ನಗು) ಮಹಾ ಜನರೇ, ಇದೀ ನಗರಕ್ಕೆಲ್ಲ ಸಂಭ್ರಮ ಸಂತೋಷದ ಕೋಲಾಹಲ. ಆದರೆ.....ಇದ ನಡುವೆಯೂ ದುಃಖವಿದೆ, ದಾಹವಿದೆ.

ಇಲ್ಲಿ ಮೊಳಗಿದೆ ಮಧುರ ವೀಣಾಲಾಪ!
ಅಲ್ಲಿ ಹಾಹಾಕಾರದ ಕರುಣಾ ವಿಲಾಪ!
ಇತ್ತ ಮುದ್ದಿನ ಚೆಲುವೆ (ಹೆಂಗಳೆಯರ ಕುಲುಕುಲು)
ಅತ್ತ ಮುಪ್ಪಿನ ದೇಹ
ಇಲ್ಲಿ ವಿದ್ವದ್ಗೋಷ್ಠಿ ಅಲ್ಲಿ ಕುಡುಕರ ಕಲಹ
ಆರು ಬಲ್ಲರು ಇದು ಸಂಸಾರವೋ
ಅಮೃತವೋ ವಿಷವೋ ದುಃಸಾರವೋ !

(ಜನ ಪಿಸುಗುಡುವರು : "ಹೌದಪ್ಪ" "ಎಂಥ ಮಾತು!" "ನೀನ ದೇವರಪ್ಪ"! "ದುಃಖ ಬಿಡಿಸು! ಅಮೃತ ಉಣಿಸು")

(ಅಳುತ್ತ ಗೌತಮಿ ಬರುತ್ತಾಳೆ-ಕೂಸಿನ ಕಳೇಬರ ಹೊತ್ತು. ಜನ ಗದ್ದಲ ಹೆಚ್ಚುತ್ತದೆ)

ಗಂಡುದನಿ ೧ : ಯಾರದು, ಯಾರಲ್ಲಿ ಛೇ ಛೇ !

ಗಂಡುದನಿ ೨ : ದೂರ ದೂರ ಸರಿ.

ಗಂಡುದನಿ ೩ : ಎಳೆಯಿರಿ ಅವಳನ್ನು ಹಿಂದೆ, ಹುಚ್ಚಿ!

ಹೆಣ್ಣುದನಿ ೧ : ಅಯ್ಯೋ ಭಗವಂತನ ಪಾದಕ್ಕೆ ಬೀಳ್ತಾಳೆ!

ಹೆಣ್ಣುದನಿ ೨ : ಅಯ್ಯವ್ವಾ ಕೂಸಿನ ಹೆಣ ಹೊತ್ತು ತಂದಿದ್ದಾಳೆ!

ಸಮ್ಮಿಶ್ರ : ಏ, ಏ, ಹುಚ್ಚಿ, ಏ ಕಿಸಾ ಗೌತಮಿ ನಡೆ ಹಿಂದೆ.

ಬುದ್ಧ : ಸುಮ್ಮನಿರಿ, ಶಾಂತಿ! ಆನಂದ, ಈ ದುಃಖಿನಿ ಯಾರು? ವಿಚಾರಿಸು, ಬಾಂಧವರೇ, ನೀವು ಹಿಂದಾಗಿರಿ.

ಆನಂದ : ಯಾರಮ್ಮ ನೀನು ? ಇದೇನು ತಂದಿ? ಇಲ್ಲೇಕೆ ಬಂದಿ ?

ಗೌತಮಿ : ನಾನು ಕಿಸಗೋತಮಿ. ಬಡಹೆಂಗಸು ದೇವಾ. ದೇವಾ ಈ ಕಂದನನ್ನು ಉಳಿಸಿಕೊಡಿ, ನಾ ಅನಾಥೆ. ಈ ಕಂದನಿಲ್ಲದೆ ನಾ ಬದುಕಲಾರೆ, ಬದುಕಲಾರೆ.(ಅಳುವಳು)

ಆನಂದ : ಮಗುವಿಗೆ ವೈದ್ಯರ ಚಿಕಿತ್ಸೆ.....

ಗೌತಮಿ : ಎಲ್ಲಾ ಆಯಿತು. ಅವರೇ ಅಂದರು-ಭಗವಂತನೆ ಬದುಕಿಸಬೇಕೆಂದು. ಅದಕ್ಕೆ ಇಲ್ಲಿಗೆ ಬಂದೆ. ನಾಳೆ ಗಂಡ ದೇಶಾಂತರದಿಂದ ಬಂದರೆ ಏನು ಹೇಳಲಿ? ಮಗು ಎಲ್ಲಿ? ಅಂದಾಗ ಮೋರೆ ಹೇಗೆ ತೋರಿಸಲಿ? ಮನೆದೀಪ ಆರಿತು ಅಯ್ಯೋss. ಏನು ಮಾಡಲಿ? ಹೇಗೆ ಬಾಳಲಿ? ಬುದ್ಧದೇವಾ, ದೇವಾ (ಬಿಕ್ಕಿ ಬಿಕ್ಕಿ ಅಳುವಳು)

ಆನಂದ : ಇದೇನು ಆಕ್ರೋಶ ತಾಯೀ? ನಮ್ಮ ಗುರುಗಳು ಧನ್ವಂತರಿಗಳೇ? ಸತ್ತ ಕೂಸನ್ನು ಬದುಕಿಸಲು ಸಾಧ್ಯವೇ?

ಗೌತಮಿ : ಆನಂದರೇ ಬೇಡಿ, ಹಾಗನ್ನಬೇಡಿ. ಬುದ್ಧದೇವಾ ಭಗವಂತ. ಮರಣಕ್ಕೆ ಮದ್ದು ಭಗವಂತನೇ ನೀಡಬಲ್ಲ-ವೈದ್ಯರು ಸುಳ್ಳಾಡುವರೆ? ದೇವಾ, ಬುದ್ಧದೇವಾ....

ಬುದ್ಧ : ಅಮ್ಮ, ಗೌತಮಿ, ಸೈರಿಸು. ಈ ಹತಭಾಗಿನಿಯನ್ನು ಹೇಗೆ ಸಾಂತ್ವನೆಗೊಳಿಸಲಿ? ಅಮ್ಮ ಅಳು ನುಂಗು.

ಗೌತಮಿ : ದೇವಾ, ನನ್ನನ್ನೇ ಅಳು ನುಂಗಿದೆ, ದೇವಾ, ಇನ್ನು ನೀನೇ ನನ್ನ ಆಧಾರ, ನಿನ್ನಿಂದಲೇ ಉದ್ಧಾರ! ಈ ಕಂದನನ್ನು ನೀನೇ ಎಬ್ಬಿಸಬೇಕು. ಇಲ್ಲವಾದರೆ ಇಕೋ ನಾನೇ ನಿನ್ನ ಪಾದದಲ್ಲಿ ದೇಹಪಿಡುವೆನು.

(ಹಣೆ ಜಪ್ಪಿಕೊಳ್ಳಹತ್ತುವಳು. ಜನರಲ್ಲಿ ಕೋಲಾಹಲ, ಕಲ ಕಲ)

ಬುದ್ಧ : ಶಾಂತಿ! ಅಮ್ಮ ತಡೆ. ಸಭಿಕರೇ, ಇವಳನ್ನು ಇಲ್ಲಿ ಬಿಟ್ಟುಹೊರಟು ಹೋಗಿರಿ.

ಆನಂದ : ಹೌದು ಮಹಾಜನರೇ, ದಯಮಾಡಿ ಹೋಗಿ ಹೋಗಿ, (ಜನರೆಲ್ಲ ಎದ್ದು ಹೋಗುವರು).

ಬುದ್ಧ : ಗೌತಮೀ ತಾಳು, ಏಳು. ನಿನ್ನ ಕಂದ ಏಳಬೇಕು.

ಗೌತಮಿ : (ಹಿಗ್ಗಿ) ಹೌದು ಭಗವಂತನೇ, ಬಾಳಿನ ಗುಟ್ಟು ಬಲ್ಲನೀನು ಸಾವಿಗೆ ಮದ್ದು ಬಲ್ಲೆ, ನನಗೆ ಗೊತ್ತು. ದಯಮಾಡು ದೇವಾ....

ಬುದ್ಧ: ಗೌತಮೀ, ನಿನ್ನ ಕಂದ ಬದುಕುವನು. ಅಹುದು-ತಥಾಗತನು ಅದನ್ನು ಬದುಕಿಸಬಹುದು.

ಕಿಸಾ: ನಾ, ಧನ್ಯೆ ನನಗೆ ಗೊತ್ತು ಅದಕ್ಕೇ......

ಬುದ್ಧ : ಆದರೆ....

ಗೌತಮಿ : ಆದರೇನು ಹೇಳಿ?

ಬುದ್ಧ : ಅದಕ್ಕೆ ಒಂದು ಕೆಲಸ ಆಗಬೇಕು.

ಗೌತಮಿ : ಹೇಳಿ, ಅದಾವ ಕೆಲಸ?

ಬುದ್ಧ : ಅದಕ್ಕೆ ಒಂದು ವಸ್ತು ಬೇಕು.

ಗೌತಮಿ : ಅದಾವ ವಸ್ತು? ಎಂಥ ಬೆಲೆ ತೆತ್ತೂ ನನ್ನನ್ನು ಮಾರಿ ನನ್ನ ಜೀವವನ್ನು ಕೊಟ್ಟುಕೊಂಡು ತರುತ್ತೇನೆ. ಅಸ್ತು ಅನ್ನಿ, ಅದಾವ ವಸ್ತು?

ಬುದ್ಧ : (ನಕ್ಕು) ಅಂಥ ದೊಡ್ಡ ವಸ್ತುವೇನೂ ಅಲ್ಲ. ಒಂದು ಹಿಡಿ ಸಾಸಿವೆಬೇಕು.

ಗೌತಮಿ : ಅಯ್ಯೋ ಸ್ವಾಮಿ ಇಷ್ಟೆ ತಾನೇ, ಮನೆಯಲ್ಲಿದೆ ಓಡಿ ಹೋಗಿ ತರ್ತೇನೆ.

ಬುದ್ಧ : ನಿಲ್ಲು ಓಡಬೇಡ, ನಿಮ್ಮ ಮನೆಯ ಸಾಸಿವೆ ಆಗದು. ನಿಮ್ಮಲ್ಲಿ ಸಾವು ಒದಗಿದೆ.

ಗೌತಮಿ : ದೇವಾ, ಮತ್ತೆಲ್ಲಿಂದ ತರಲಿ ಹೇಳಿ, ತಡವಾದಷ್ಟು ನನ್ನ ಮಗು ಮರವಟ್ಟು (ಬಿಕ್ಕುವಳು).

ಬುದ್ಧ : ಅಳಬಾರದು. ಊಂಹೂ. ನನಗೆ ಸಾವಿಲ್ಲದ ಮನೆಯ ಸಾಸಿವೆ ಬೇಕು. ಎಷ್ಟು ತಡವಾದರೂ ಸರಿ. ನೋಡಿ ಬೇಡಿ ತಾ. ಸಾವಿಲ್ಲದ

ಮನೆಯ ಸಾಸಿವೆ!

ಗೌತಮಿ : ಅದೇನು ಮಾಹಾ? ಕೇರಿ ಕೇರಿ ಸುತ್ತಿ ಮನೆಮನೆ ಹುಡುಕಿ ತರುತ್ತೇನೆ (ಓಡುವಳು)

೪

(ಕೇರಿಯಲ್ಲಿ)

ಪದ್ಮಾ : ಕೇಳಿದೆಯೇನೆ ಕಲ್ಯಾಣಿ?

ಕಲ್ಯಾಣಿ : ಕೇಳದೇ ಏನು ಪದ್ಮಾ ಪಾಪ, ಬಡಗೌತಮಿ ತಲೆಕೆಟ್ಟು ಕೂಸಿನ ಕಳೇಬರ ಹೊತ್ತು ಬುದ್ಧನ ದೇವನ ಪಾದಕ್ಕೆ ಇಟ್ಟಳಂತೆ

ಪದ್ಮಾ : ಅಷ್ಟೇ ಅಲ್ಲ, ಅದನ್ನ ಬದುಕಿಸಿಕೊಡು ಎಂತ ಹಲುಬಿದಳಂತೆ- ಅದೋ ತಿರುಗಿ ಬರ್‍ತಾ ಇದ್ದಾಳೆ.

ಕಲ್ಯಾಣಿ : ಆದರೆ ಅವಳ ಕೈಯಲ್ಲಿ ಕೂಸಿಲ್ಲ.

ಪದ್ಮಾ : ಅದನ್ನು ಮಣ್ಣು ಮರೆಮಾಡಿ ಬಂದಿರಬಹುದು. ಬುದ್ಧದೇವನ ಮಾತು ಕೇಳಿ,

ಗೌತಮಿ : ಪದ್ಮಕ್ಕ ನಿಲ್ಲು ತುಸು ನಿಲ್ಲು. ಒಳಗೆ ಹೋಗ ಬೇಡ.

ಪದ್ಮಾ : ಏಕೆ ಕಿಸಾ, ಏನು ಬೇಕು?

ಗೌತಮಿ : ಇಷ್ಟು ಸಾಸುವೆ ಬೇಕು.

ಪದ್ಮಾ : ಸಾಸಿವೆಯೇ? ನಿಲ್ಲು ತರ್‍ತೇನೆ ಒಳಗೆ ಹೋಗಿ. ಅಲ್ಲೆ, ಸಾಸುವೆಯೇಕೆ ಬೇಕು?

ಗೌತಮಿ : ಸಾಸುವೆ ತಂದು ಕೊಟ್ಟರೆ ಬುದ್ಧದೇವಾ ನನ್ನ ಕೂಸನ್ನು ಬದುಕಿಸಿ ಕೊಡ್ತಾರಂತೆ.

ಪದ್ಮಾ : ಹೌದೇ? ತಾಳು ತರ್‍ತೇನೆ.

ಗೌತಮಿ : ಅಲ್ಲೆ, ಪದ್ಮಕ್ಕ, ತುಸು ತಡೆ, ನಿಮ್ಮ ಮನೆಯಲ್ಲಿ ಯಾರೂ ಸತ್ತಿರಕೂಡದು!

ಪದ್ಮಾ : ಏ ಹುಚ್ಚಿ, ಇದೇನು ಹಲುಬುತ್ತೀಯೇ? ಹಾಗೆ ಇರೂದಾದರೂ

ಉಂಟೇನೇ? ಕಳೆದ ವರ್ಷ ನನ್ನ ಅತ್ತೆ ಮಾವ ಇಬ್ಬರು ತೀರಿಕೊಂಡ್ರು.

**ಗೌತಮಿ :** ಹಾಗಾದರೆ ಬೇಡ ಅಕ್ಕಾ, ಕಲ್ಯಾಣಕ್ಕ ಇದ್ದಾಳೆ ಅವಳಿಗೆ ಕೇಳ್ತೇನೆ ಕಲ್ಯಾಣಮ್ಮ-

**ಕಲ್ಯಾಣಿ :** ಏನೇ ಕಿಸಾ?

**ಗೌತಮಿ :** ನೀನಾದರೂ ಕೊಡ್ತಿಯೇನೇ ಒಂದು ಹಿಡಿ ಸಾಸಿವೆ. ಆದರೆ ನಿವ ಮನೆಯಲ್ಲಿ ಸಾವು.....

**ಕಲ್ಯಾಣಿ :** ಹೋಗೆ, ಹೋಗೆ, ಇದೇನು ಚೇಷ್ಟೇ ಮಾಡ್ತೀಯೇ? (ಅಳ ಮೂರು ತಿಂಗಳ ಹಿಂದೆ ನನ್ನ ತಮ್ಮ - ಅಯ್ಯೋ ಇದೇನ ಕೇಳ್ತೀಯೇ ಪಾಪಿ?

**ಗೌತಮಿ :** ಹೌದು ಕಲ್ಯಾಣಮ್ಮ ನಾ ಪಾಪಿಷ್ಠೆ, ನಿನಗೆ ಅಳಲು ಹಚ್ಚಿದ ಕ್ಷಮಿಸು ಹೋಗಲಿ ಬಿಡಿ. ಅದೋ ವಾಸಂತಿ-ಮನೆ ಬಾಗಿಲಿ ಬಂದಿದಾಳೆ. ವಾಸಂತಿ.... ವಾಸಂತಮ್ಮ ಸಾವಿಲ್ಲದ ಮನೆಯ ಸಾಸಿವೆ ನಂಗೆ ಬೇಕು ಕೊಡ್ತೀರಾ?

**ವಾಸಂತಿ :** ನಿಂಗೇನು ತಲೆ ಕೆಟ್ಟಿದೆಯಾ? ಅಥವಾ ಮಗೂ ಸತ್ತ ನೀನು ನಂಗ ಗೋಳಾಡಿಸ್ತಿಯೋ? ನೋಡು, ನನ್ನ ಹಣೆ ನೋಡು. ಕಳೆ ಮಳೆಗಾಲದಲ್ಲಿ ನಮ್ಮ ಯಜಮಾನ್ರು,.... ಅಯ್ಯೋ ಏನ ಗೋಳುಹೊಯ್ತೀಯೋ (ದೊಡ್ಡ ದನಿ ತೆಗೆದು ಅಳು)

**ಗೌತಮಿ :** ಅಯ್ಯೋ ವಾಸಂತಮ್ಮ ತಪ್ಪಾಯ್ತು, ಕ್ಷಮಿಸಿ. ನನ್ನ ಕಷ್ಟದಲ್ಲಿ ನಿವ ದುಃಖ ಮರೆತೇ ಬಿಟ್ಟೆ! ನನ್ನ ತಲೆ ಕೆಟ್ಟಿದ್ದೇ ನಿಜ.

**ಉಮಾ :** (ಪ್ರವೇಶಿಸಿ) ಏನು ಕೃಶಾ ಏನು ಗದ್ದಲ? ವಾಸಂತಿ ಏಕೆ ಅಳ ಇದ್ದಾಳೆ?

**ಗೌತಮಿ :** ಉಮಮ್ಮಾ ನನಗೆ ಸಾಸಿವೆ ಬೇಕು-ಸಾವಿಲ್ಲದ ಮನೆಯ ಸಾಸಿವ ವಾಸಂತಮ್ಮನಿಗೆ ಕೇಳಿದ್ದೇ ತಪ್ಪಾಯ್ತು. ನೀಕೊಡ್ತಿಯಾ (ದೈನ್ಯದಿಂದ) ನನ್ನ ಮಗೂನ ಉಳಿಸಲಿಕ್ಕೆ ಬೇಕು ಬುದ್ಧದೇವರಿಗ

**ಉಮಾ :** ನಿನ್ನಂತೆ ಬುದ್ಧದೇವನ ತಲೆಯೂ ಕೆಡ್ತೇ? ಅಲ್ವೇ, ಸಾಸಿ ಕೊಡಲಿಕ್ಕೇನು? ಆದರೆ ಸಾವಿಲ್ಲದ ಮನೆ ಈ ಊರಲ್ಲಿ ಉಂಟೇ

ಎಲ್ಲಾದರೂ ಉಂಟೇ? ಕಳೆದ ಶ್ರಾವಣಕ್ಕೆ (ಅಳುವದನಿ) ನನ್ನ ಹಿರೇಮಗನ್ನ ಕಳಕೊಂಡೆ ಇದೇನು ಹಂಬಲ ಮಾಡಿಕೊಟ್ಟಿತೇ? ಹೊಯ್ಯಾಲೀss(ದೊಡ್ಡ ದನಿ ತೆಗೆದು ಅಳುವಳು ಆ ದನಿ ತೇಲಿ ದೂರ ಹೋದಂತೆ)

ತಮಿ : (ಕಳವಳ) ಏನು ಮಾಡಲಿ? ಎಲ್ಲಿ ಹೋಗಲಿ? ಅಯ್ಯೋs ಯಾರನ್ನ ಕೇಳಲಿ? ನಿಮ್ಮಲ್ಲಿದಿಯೇ ಸಾವಿಲ್ಲದ ಮನೆಯ ಸಾಸಿವೆ. ದೇವಕಮ್ಮಾ? ನಿಮ್ಮಲ್ಲಿದೆಯೇ? ಸಾವಿಲ್ಲದ ಮನೆಯ ಸಾಸಿವೆ ಜಯಮ್ಮಾ? ನಿಮ್ಮಲ್ಲಿದಿಯೇ.....

(ಎಲ್ಲಾ ಕಡೆಗಳಿಂದಲೂ ಅಣಕಿಸುವ ದನಿಗಳು: ಏ ಹುಚ್ಚಿ! ಎಲ್ಲಿ ಸಾವಿಲ್ಲ? ಸಾವಿಲ್ಲದ ಮನೆಯಂತೆ! ಎಲ್ಲಿ ಸಾವಿಲ್ಲ? ಈ ಕಿಸಾಳಿಗೆ ತಲೆ ಕೆಟ್ಟಿದೆ! ನಿನ್ನ ಬುದ್ಧಿ ಮಂಕಾಗಿದೆ. ಹುಚ್ಚೀs ಹುಚ್ಚೀs!!! ಈ ದನಿಗಳು ಕರ್ಕಶವಾಗಿ ಕಿವಡುಗಟ್ಟುತ್ತವೆ.)

ೌತಮಿ : ಅಯ್ಯೋ ಸಾಕು, ಇನ್ನು ಕೇಳೆ.... ತಾಳೆ......ದೇವಾ, ಬುದ್ಧದೇವಾ (ಕೂಗೂತ್ತ ಓಡುವಳು)

೫

ುದ್ಧ : ಆನಂದ!

ನಂದ : ಗುರುದೇವಾ

ುದ್ಧ : ಕಿಸಾಗೌತಮಿ ಇನ್ನೂ ಬಂದಿಲ್ಲ!

ನಂದ : ಶ್ರಾವಸ್ತಿ ದೊಡ್ಡ ನಗರ. ಮನೆ ಮನೆಗೆ ಸುತ್ತುತ್ತಿರಬೇಕು.

ುದ್ಧ : ಪಾಪ! ಸಾಸಿವೆ ಸಿಕ್ಕಿಲ್ಲವೇನೋ!

ನಂದ : ಅಲ್ಲ ದೇವಾ, ಸಾವಿಲ್ಲದ ಮನೆ ಸಿಕ್ಕಿರಲಿಕ್ಕಿಲ್ಲ. ಇಕೊ ಸ್ವಾಮಿ ಬಂದೇ ಬಿಟ್ಟಳು.

ೌತಮಿ : (ಪ್ರವೇಶಿಸಿ) ದೇವಾ, ದೇವಾ.... ಊರೆಲ್ಲ ಸುತ್ತಿ ಬಂದೆ,

ಬುದ್ಧ : ಸಾಸಿವೆ ತಂದೆಯಾ?

ಗೌತಮಿ : ಇಲ್ಲ ಭಗವನ್.

ಬುದ್ಧ : ಅದೇಕೆ?

ಗೌತಮಿ : ಏಕೆಂದು ಏಕೆ ಕೇಳುವಿರಿ? ನನ್ನ ಪರೀಕ್ಷೆ ಮಾಡುವಿರಾ? ಪ್ರಭೊ ಸಾಸಿವೆ ಇದ್ದಲ್ಲಿ ಸಾವೂ ಇದೆ. ಸಾವಿಲ್ಲದ ಮನೆಯೇ ಸಿಗಲಿ

ಬುದ್ಧ : ಅಂದರೇನು ಕಿಸಾ?

ಗೌತಮಿ : ಇನ್ನೇನು? ಎಲ್ಲಿ ಹೋದರೂ ಅಲ್ಲಿ ಯಾರಾದರೂ ಸತ್ತಿದ್ದೇ ವ್ಯ ಸಾವಿನದೇ ಕಥೆ. ಇಲ್ಲಿ ತಂದೆ ಸತ್ತರೆ ಅಲ್ಲಿ ತಾಯಿ. ಇಲ್ಲಿ ಗಂ ಸತ್ತರೆ ಅಲ್ಲಿ ಮಗ.

ಬುದ್ಧ : ಅಂದರೆ ಮಗನನ್ನು ಕಳೆದುಕೊಂಡವಳು ನೀನೊಬ್ಬಳೇ ಅಲ್ಲ..

ಗೌತಮಿ : ಅಲ್ಲ ದೇವಾ ಅಲ್ಲ. ಒಂದು ಮನೆ ಇದಿರು ಹೋದೆ. ಒಳಗಿಂ ಸತ್ತ ಕೂಸಿನ ಕಳೇಬರ ಹೊತ್ತು ಹೊರಗೆ ತಂದರು. ಆ ಕೂಸು.. ಆ ಕೂಸು ನನ್ನ ಕಂದನಂತೆಯೇ ಇತ್ತು, (ನಿಟ್ಟುಸಿರು)

ಬುದ್ಧ : ಹಾಗಾದರೆ......

ಗೌತಮಿ : ಹಾಗಾಗಿದ್ದೇ ಸರಿ ಗುರುವರ್ಯ. ಸಾವು ಅನಿವಾರ್ಯ ಅಪರಿಹಾರ್ಯ. ಸಾವಿಗೆ ಮದ್ದಿಲ್ಲ. ಸಾಸಿವೆ ಹುಡುಕಿತರಲ ಕಳುಹಿಸಿ, ಭಗವನ್, ಈ ಮಹಾಸತ್ಯದ ಶೋಧಮಾಡಲ ಹಚ್ಚಿದಿರಿ.

ಆನಂದ : ಬುದ್ಧದೇವಾ, ಕಿಸಾಗೌತಮಿಗೇ ಜ್ಞಾನೋದಯವಾಯಿತು.

ಬುದ್ಧ : ಅಹುದು ಕಿಸಾ, ನೀನು ಧನ್ಯೆ. ಸಾವಿಲ್ಲದೆ ಬಾಳಿಗೆ ಅರ್ಥವಿ ನಿನ್ನ ಮಗು ಮಾತ್ರವಲ್ಲ, ಕಿಸಾ, ನೀನೂ ನಾವೂ ಎಲ್ಲರು ಬಾಳಿನುದ್ದಕ್ಕೂ ಸಾವಕಾಶ ಸಾಯುತ್ತಲೇ ಇರುತ್ತೇವೆ. ಸಾವಿನೊಡ ಸರಸ ಬಲ್ಲವನೇ ಈ ಬಾಳಿಗೆ ಅರಸ. ಹುಟ್ಟಿನ ಬೆನ್ನಿಗೆ ಸಾ ಜೀವದ ಬೆನ್ನಿಗೆ ನೋವು, ಇದೇ ಈ ಲೋಕದ ಕರ್ಮಭೋ ಧರ್ಮಚಕ್ರ. ಇದರಿಂದ ಪಾರಾಗುವ ಹಾದಿ ಹಿಡಿ.

ಗೌತಮಿ : ಅದಕ್ಕೆ ಬೆಳಕು ತೋರಿಸು.

ಓ ತಂದೆ ನಾ ಬಂದೆ ನಿನ್ನ ಹಿಂದೆ
ಬುದ್ಧಂ ಶರಣಂ ಗಚ್ಛಾಮಿ
ಧರ್ಮ ಶರಣಂ ಗಚ್ಛಾಮಿ
ಸಂಘಂ ಶರಣಂ ಗಚ್ಛಾಮಿ

(ಆನಂದ ಉಚ್ಚರಿಸಿದಂತೆ ಗೌತಮಿ ಹೇಳುವಳು.)

ಬುದ್ಧ : ಓಂ ಮಣಿಪದ್ಮೇ ಓಂ.

# ಸಂಕ್ರಾಂತಿ

(ಬಾನುಲಿ ರೂಪಕ)

## ಪಾತ್ರ ಪರಿಚಯ

ಭಟ್ಟರ ಧ್ವನಿ: ಕರ್ಣಕಠೋರ, ಸರಾಗ,

ಒಂದನೇ ಧ್ವನಿ: ಚತುರ ಚಾಟು ಪ್ರಾಯ.

ಎರಡನೇ ಧ್ವನಿ: ಗೊಗ್ಗರು, ಸ್ಥೂಲ ಕಂಠದ್ದು.

ಮೂರನೇ ಧ್ವನಿ: ಅಂಜು ಬುರುಕ, ಅಳುಬುರುಕ, ದುರ್ಬಲ.

ನಿರ್ದೇಶಕ

ನಿರ್ದೇಶಕ: ಗ್ರಾಮ ದೇವರ ಗುಡಿಯ ಪೌಳಿಯಲ್ಲಿ ಮುದುಕ ಮಾರ್ತಾಂಡ ಭಟ್ಟರ ಪಂಚಾಂಗವಾಚನ ನಡೆದಿದೆ. ಅಂದು ಸಂಕ್ರಾಂತಿಯ ದಿನ. ಮಕರ ಸಂಕ್ರಮಣ ಫಲವನ್ನ ಭಟ್ಟರು ಹೇಳುತ್ತಿದ್ದಾರೆ.

(ಕಿಸರಬಿಟ್ಟ ಶೀರು ಧ್ವನಿಯಲ್ಲಿ ಭಟ್ಟರ ಪಂಚಾಂಗ ಶ್ರವಣ ಸಾಗುತ್ತದೆ. ಹಿನ್ನೆಲೆಯಲ್ಲಿ ದೇವ ದರ್ಶನಕ್ಕೆ ಬಂದು ಹೋಗುವ ಭಜಕ ವೃಂದದ ವಿವಿಧ ಸದ್ದುಗಳು ನಡದೇ ಇರುತ್ತವೆ. ಚಿಕ್ಕ ದೊಡ್ಡ ಗಂಟೆಗಳ ಸದ್ದುಗಳು "ಜೈ ಶಂಕರ" "ಹರ ಹರ ಮಹಾದೇವ" ಇತ್ಯಾದಿ ಘೋಷಗಳು. ಶಿವನ ಎದುರಿನ ನಂದಿಯ ಕೋಡುಗಳಿಗೆ ಬೆರಳಿರಿಸಿ ಮಾಡಿದ ಡಮರು ಧ್ವನಿ (ಬಾಯಿಯಿಂದ) ಇವೆಲ್ಲ ಒಮ್ಮೆ ಸ್ಪಷ್ಟ, ಒಮ್ಮೆ ಅಸ್ಪಷ್ಟ)

ಭಟ್ಟರ ಧ್ವನಿ : (ನಸ್ಯ ಸೇದಿ ಸೀತು ಮೂಗು ಒರೆಸಿಕೊಳ್ಳುವ ಸದ್ದು. ಈ ಸದ್ದಿಗೆ ಸಮಶ್ರುತಿಯಲ್ಲಿ ಪಿಟೀಲಿನ ಕಮಾನು ತಂತಿಯ ಮೇಲೆ ಎಳೆಯ ಬೇಕು.) "ಅದ್ಯ ಶಾಲಿವಾಹನ ಶಕೆ ಸರ್ವಧಾರಿ ಸಂವತ್ಸರೇ ಪೌಷ್ಯ ಮಾಸೇ ಶುಕ್ಲಪಕ್ಷೆ ತ್ರಯೋದಶ್ಯಾಮ ತಿಥೌ ಗುರುವಾಸರೇ ರವೇ ಮಕರರಾಶಾ ಸಂಕ್ರಮಣಃ" (ಮುಂದಿನ ಮಾತುಕತೆಗಳು ಮತ್ತು ನಡು ನಡುವೇ ಬರುವ ಭಟ್ಟರ ಧ್ವನಿ ಅನುಕ್ರಮವಾಗಿ ಹತ್ತಿರ ಮತ್ತು ದೂರ ತೇಲುತ್ತ ಹೋಗಬೇಕು.)

ಒಂದನೆಯ ಧ್ವನಿ : (ರಹಸ್ಯವಾಗಿ) ಅದೋ ನೋಡಿರಿ, ಸಕ್ಕರಿ ಸಾಟಿ ಎಳ್ಳಪ್ಪನವರೇ, ಭಟ್ಟರು ಬಾಯಿ ತೆಗೆದದ್ದೇ ತಡ, ಬಂದೇ ಬಿಟ್ಟಿತು ಸಂಕ್ರಾಂತಿ.... ಗುಡಿಯಲ್ಲಿ ಕಾಲಿಟ್ಟಿತು.

ಎರಡನೇ ಧ್ವನಿ : ಅದೆಲ್ಲಿ ಮತ್ತೆ? ಅದೇ ಆ ಶಿವನಮುಂದಿನ ಹೋರಿಯ ಹಂತೀಲೆ ನಿಂತವಳೇನು?

ಮೂರನೆಯ ಧ್ವನಿ : ಹೌದು, ಇತ್ತ ನಮ್ಮ ಕಡೀಗೆ ನೋಡುತ್ತಾಳೆ... ಹೋರಿಯ ಹಾಂಗೆ ಕಣ್ಣೆಟ್ಟು! ಆಕೆಯೇ ಏನು?

ಒಂದನೇ ಧ್ವನಿ : ಹೌದು ಮಕ್ರಪ್ಪನವರೇ! ಮಕರ ರಾಶೌ ಸಂಕ್ರಮಣ ಎನ್ನಲಿಲ್ಲವೆ ಭಟ್ಟರು? (ನಗುತ್ತ) ಅದೇ ಅದೇ, ಆ ಸಂಕ್ರಾಂತಿ ಭಟ್ಟರ ಮಗಳು ಹೇಗೆ ಬೆಳೆದು ನಿಂತಾಳೆ ನೋಡಿ, ಇನ್ನೂ ದಾಟಿಸಿಲ್ಲ.

ಎರಡನೇ ಧ್ವನಿ : ಆಕೆಯ ಹೆಸರೇನು?

ಭಟ್ಟರ ಧ್ವನಿ : "ವಾರ ನಾಮ ನಂದಾ। ನಕ್ಷತ್ರ ನಾಮ ರಾಕ್ಷಸೀ ಜಾತಿಃ ಮೃಗ"

ಮೂರನೇ ಧ್ವನಿ : ಸರಿ ಹೋಯ್ತು ಬಿಡಿ. ಭಟ್ಟರ ಪಂಚಾಂಗದಲ್ಲಿ ಮಗಳ ಮಹಾತ್ಮ್ಯೆ ಬರೆದ್ಹಂಗೆ ಕಾಣ್ಸತ್ತದೆ. ಅಂದರೆ ಈಕೆಯ ಹೆಸರು ನಂದಾ. ಯಾವ ಕೆಟ್ಟ ನಕ್ಷತ್ರಕ್ಕೆ ಹುಟ್ಟಿದಳೋ, ರಾಕ್ಷಸಿಯಂತೆ ಕೊಬ್ಬಿ ಬೆಳೆದಾಳೆ ನನ್ನ ಮಾತು ಹದಿನಾರು ಆಣೆ ನಿಜ ನೋಡು ವೆಂಕಪ್ಪಾ!

ಒಂದನೇ ಧ್ವನಿ : ಅಲ್ಲದೇ ಮತ್ತೆ, ಭಟ್ಟರ ನಕ್ಷತ್ರಕ್ಕೆ ಇದೊಂದು ರಾಕ್ಷಸಿಯೇ ಅಂಟ ಕೊಂಡಿದ್ದಾಳೆ. ಪಂಚಾಂಗ ಹೊಗಳುವಂತೇಯೇ ಒಂದು ಜಾತಿ ಮೃಗ ಹುಟ್ಟುಮೃಗದ ಜಾತಿ!

ಎರಡನೇ ಧ್ವನಿ : ಹಂಗನ್ನ ಬೇಡ ವೆಂಕಪ್ಪ, ಅವರವರ ಸ್ಥಿತಿಗತಿ ಅವರವರ ದುಃಖ ಅವರಿಗೆ.

ಮೂರನೇ ಧ್ವನಿ : ಹೌದು, ಎಳ್ಳಪ್ಪನವರೇ, ನನಗೂ ಆಕೆಯ ಬಗ್ಗೆ ಏಕೋ ಕೊಂಚ ಕನಿಕರ ಹುಟ್ಟುತ್ತದೆ.

ಭಟ್ಟರ ಧ್ವನಿ : ಷಷ್ಠಿ ಯೋಜನ ವಿಸ್ತೀರ್ಣ ಲಂಬೋಷ್ಠೀ ದೀರ್ಘ ನಾಸಿಕಾ

ಒಂದನೇ ಧ್ವನಿ : ಕೇಳಿದಿರಾ ಎಷ್ಟು ಯೋಜನ ವಿಸ್ತೀರ್ಣ! ಎಷ್ಟೋ ಯೋಜನ ಮಾಡಿದರೂ ಈಕೆಯ ಪಾಡು ಬಗೆಹರಿಯುವದೇ ಇಲ್ಲ ಮದುವೆಯೇ ಆಗುವದಿಲ್ಲ. ಅದೋ ಇತ್ತ ಕಡೆಗೇನೇ ಬಂದು ಬಿಟ್ಟಳು; ತಂದೆಯ ಮುಂದೆ ಹರಿವಾಣ ತಂದು ಇಟ್ಟಳು. ಲಂಬೋಷ್ಟಿ ಅಹುದು. ದೀರ್ಘ ನಾಸಿಕಾನೆ ಕಾಣಿಸುತ್ತದೆ.

ಮೂರನೇ ಧ್ವನಿ : ಹೌದು, ನಕಾಶ ತೋರಿಸೋ ಸುರುಳಿಯಂತೆ!

(ತನ್ನ ವಿನೋದಕ್ಕೆ ತಾನೇ ನಗುವನು)

ಎರಡನೇ ಧ್ವನಿ : ನೀ ಹುಟ್ಟ ಮೇಸ್ಟ್ರು ನಿಜ. ನೋಡು ಮಕ್ರಪ್ಪಾ. ಯಾವ ಲೋಕಕ್ಕೆ ಹೋದರೂ ನಕಾಶ ತೋರಿಸುವವನೇ.... ನಿನ್ನ ನಾಲಿಗೆ ಆ ಬಡ ನಂದಾಳ ಮೂಗಿಗಿಂತಲೂ ಉದ್ದ ಅದೆ! ಅವಳ ರೂಪ ಅವಳ ತಪ್ಪೇ?

ಭಟ್ಟರ ಧ್ವನಿ : ಏಕ ವಕ್ತ್ರಾ ವನ ಭುಜ ಸಂಕ್ರಾಂತಿಃ ಪುರುಷಾಕೃತಿಃ.

ಒಂದನೇ ಧ್ವನಿ : ನೋಡಿ ಪಂಚಾಂಗ ಮೊಳಗುವ ಮುಂದಿನ ಮಾತನ್ನು ಕೇಳಿ ಬರಿದೇ ವಕೀಲಿ ಮಾಡಬೇಡಿ ಎಳ್ಳಪ್ಪನವರೇ! ಎಷ್ಟೊಂದು ಆ ಹಿಡಿಂಬಿಯ ಪಕ್ಷ ಹಿಡಿದು ವಾದಿಸ್ತೀರಿ. ಯಾವ ಕಪ್ಪು ಎಳ್ಳಿಗೂ ಬಿಳಿ ಸಕ್ಕರೆ ಸವರಿ ಸವಿ ಮಾಡಿ ಕಾಣಿಸುವ ಈ ವಕೀಲಿಯ ಕಸುಬು ಎಂದು ಕಲ್ತಿರಿ?

ಮೂರನೇ ಧ್ವನಿ : ಅದಿರ್ಲಿ, ಇಂದು ಎಳ್ಳು ಸಕ್ಕರೆ ಹಂಚುವ ದಿನವೇ, ಪಂಚಾಂಗ ಯಾವ ಮಹಿಮೆ ಸಾರಿತು? ಆಕೆಗೆ ಒಂದೇ ಬಾಯಿಯಂತೆ!

ಂದನೇ ಧ್ವನಿ : ಎಲೋ ಶಾಲೋಪಯೋಗಿ ಪ್ರಾಣಿಯೇ! ಅರ್ಥ ತಿಳಿಯಲಿಲ್ಲವೇ? ಆಕೆಯ ಬಾಯಿ ಮೋಟಾರ ಸ್ಟೆಂಡಿನ ಎದುರು ಕೂಗುವ ಇರಾಣೀ ಹೊಟ್ಲಿನ ಫೋನೊ ಹಾರ್ನಿನಂತೆ! ಆಕೆಯ ಬಾಯಿ ಬೇರೆ ಯಾರ ಮಾತನ್ನು ನಡೆಯಗೊಡಸಲಿಕ್ಕಿಲ್ಲ.

ರಡನೇ ಧ್ವನಿ : ಅಂಥ ಬಾಯಿಯಿಂದಲೂ ಫಾಯಿದೆ ಇದೆ. ಇಂದಿನ ಯುಗವೇ ಬಾಯಿಯಿದ್ದವರದು, ಬಾಯಿಬಲವೆಂದರೆ ಬಾಯ್ಬಲ್ (Bible)ಇದ್ದಂತೆಯೇ! ಹೌದಲ್ಲರೀ ಶಾಲಾ ಮಾಸ್ತರ ಮಕ್ರಪ್ಪನವರೇ?

ಮೂರನೇ ಧ್ವನಿ : ಒಪ್ಪತಕ್ಕ ಮಾತು! ಶಾಲಾ ಮಾಸ್ತರರ ಬಾಯಿ ಸಂಸಾರ ಸಾಗರದಲ್ಲಿ ಈಸುಗುಂಬಳಗಾಯಿ. ನಾವಂತೂ ಕಂಠಗತ ಪ್ರಾಣರೇ! ಗಂಟಲಿರುವ ತನಕವೂ ನನಗೆ ಗಂಟು!

ಂದನೇ ಧ್ವನಿ : ಹಾಗಿದ್ದರೆ ಇವಳಿಗೆ ನಿಮ್ಮದೇ ಗಂಟು ಯೋಗ್ಯ. ಇವಳ ಕಂಠಕ್ಕೆ ಮಿಕ್ಕವರೆಲ್ಲ ಗತಪ್ರಾಣರೇ!

ರಡನೇ ಧ್ವನಿ : ಆದರೂ ಇವಳ ಗುಣ ಕೇಳಲಿಲ್ಲವೇ? ಈ ನಂದಾದೇವಿಯ...

ಮೂರನೇ ಧ್ವನಿ : (ಶಿಕ್ಷಕ ನಾಡಿ ಜಾಗ್ರತವಾದಂತೆ) ಇದು ಹಿಮಾಲಯದಲ್ಲಿಯ ಅತ್ಯುನ್ನತವಾದ ಶಿಖರ. ಸಮುದ್ರ ಸಪಾಟಿಯಿಂದ.... (ಅವನ ಜಾಜ್ವಲ್ಯ ಕಂಠವನ್ನು ಎರಡನೇ ಧ್ವನಿಯವನು ಮೆಚ್ಚುವನು)

ರಡನೇ ಧ್ವನಿ : ಆಯ್ತು ನಮ್ಮ ಬದ್ಧಿ ಸಪಾಟಾಯ್ತು! ನಿಮ್ಮ ಕಂಠಪಾಠಕ್ಕೆ ನಾವು ಶಿಖರದಿಂದ ಸಮುದ್ರಕ್ಕೆ ಬಿದ್ದಂತೆಯೇ! ನಂದಾದೇವಿ ಅಂದ್ರೆ ಈ ಭಟ್ಟರ ಹುಡುಗಿ ಉಪವರಳಾಗಿ....

ಟ್ಟರ ಧ್ವನಿ : "ಉಪವಾಹನ ಮುಷ್ಟ! ವಾಹನಂ ಮಹಿಷ!"

ಂದನೇ ಧ್ವನಿ : ಕೇಳಿದಿರಾ ಮೇಷ್ಟ್ರೆ! ಉಪವಾಹನ ಅಂದ್ರ ತಕ್ಕವಾಹನ ಆಕೆಗೆ ಮೇಷ್ಟ್ರೆ ಸರಿ ಎನಿಸುತ್ತದೆ-ಪಂಚಾಂಗ! ನೀವೆ ಈ ಮಹಿಷೆಗೆ ತಕ್ಕ ವಿವಾಹ ವಾಹನರಾದ ಮಹೀಷ!

ರಡನೇ ಧ್ವನಿ : ಅಂದರೆ? ಈ ಮಕ್ರಪ್ಪನವರಿಗೆ ಮದುವೆನೇ ಆಗಿಲ್ಲವೇನು?

ಮೂರನೇ ಧ್ವನಿ : (ದುಃಖದಿಂದ ಅದೇನು ಹೇಳುದು? ಯಾವದೋ ಕವಿ ಏನೋ ಹೇಳಾದ್ದಾನಲ್ಲ... ಹಾಂಗಾಗಿದೆ. ಹೆಂಡತಿಯು ಸತ್ತು ಷಷ್ಟಬ್ದಿ ಪೂರ್ತಿಯಾಯಿತು.

ಒಂದನೇ ಧ್ವನಿ : (ದೊಡ್ಡ ಧ್ವನಿಯಲ್ಲಿ ನಕ್ಕು) ಷಷ್ಠಬ್ದಿಯೆಂದರೆ ಆರಲ್ಲ, ಅರವತ್ತ ಇರಲಿ, ಎಳ್ಳಪ್ಪನವರೇ, ಮೇಷ್ಟ್ರ ಮಾತು ನಿಜ. ಮನೆತುಂ ಮಕ್ಕಳು ಮಂಗನ ಮರಿಗಳಂತೆ! ತುಂಟರು ಒಂಬತ್ತು ಮಂದಿ

ಎರಡನೇ ಧ್ವನಿ : ಹಾಗಾದರೆ ಪರವಾ ಇಲ್ಲಾ, ಬಿಡಿ. ಭಟ್ಟರ ಪಂಚಾಂಗ ಹೇಳಿಲ್ಲ ವನಭುಜಾ ಎಂದು! ಒಂಬತ್ತು ಮಂದಿ ಮಕ್ಕಳಿಗೆ ಆಕೆ ಭುಜ ಹಾಕುತ್ತಾಳೆ. ಭುಜಕ್ಕೆ ಒಂದೊಂದು ಮಗುವನ್ನು ಎತ್ತಿ ಆಡಿಸುತ್ತಾ ಮನೆಗೆಲಸಕ್ಕೆ ಒಂಬತ್ತು ತೋಳುಗಳಿದ್ದಂತೆ.

ಮೂರನೇ ಧ್ವನಿ : ಅಯ್ಯಪ್ಪಾ ತೋಳಗಳು?

ಒಂದನೇ ಧ್ವನಿ : 'ಳ' ಅಲ್ಲಾ, 'ಳು' ಉಕಾರಾಂತ ನಪುಂಸಕ ಲಿಂಗ ಮೇಷ್ಟ್ರೆ! ಸಂಕ್ರಾಂ ಹಿ ಪುರುಷಾಕೃತಿ ಎಂದು ಬೇರೆ ಸಾರಿದೆ ಪಂಚಾಂಗ!

ಮೂರನೇ ಧ್ವನಿ : ಅದು ಅನರ್ಥಕವಾಗಿ ಅಲ್ಲಾರೀ ಅನ್ವರ್ಥಕವಾಗಿ. ಕಂಡ ಗೊತ್ತಾಗುತ್ತದೆ ಗಂಡ್ರಾಮಿ ಇರುತ್ತಾಳೆ.

ಎರಡನೇ ಧ್ವನಿ : ನಮ್ಮಂಥ ಹೆಣ್ಣು ರಾಮಣ್ಣ ಗಂಡಿಗೆ ಗಂಡ್ರಾಮಿ ಹೆಂಡತಿಯ ಒಪ್ಪುತ್ತಾಳೆ. ನಿಮ್ಮ ಹಳ್ಳಿಯ ಶಾಲೆಗೆ ಇನ್‌ಸ್ಪೆಕ್ಟರ ದೊರೆಗಳ ಬಂದರು...

ಮೂರನೇ ಧ್ವನಿ : (ಹೌಹಾರಿ) ಆs ಬಂದರೆ!... ಎಂದು? ಎಲ್ಲಿ ಇದ್ದಾರೆ? ಗೊಂ ಟೊಪ್ಪಿಗೆಯವರೋ?

ಎರಡನೇ ಧ್ವನಿ : ಬಂದರು.... ಎಂತಾ ತಿ....ಳಿ....ಯಿ...ರಿ! ಹೀಗೆ ಹೆದರಿ ಹೌಹಾ ನೀವು ಹಾಸಿಗೆ ಹಿಡಿದಿರೋ. ಈ ಪುರುಷಾಕೃತಿ ಹೆಂಡತಿಃ ಹೋ ಶಾಲೆ ಸಾಗಿಸಬಹುದು.

ಒಂದನೇ ಧ್ವನಿ : ನಿಮ್ಮ ಪುರುಷಾರ್ಥ ಸಿದ್ಧಿಗೆ ಇವಳೇ ಯೋಗ್ಯ! ಬುದ್ಧಿವಂತ ದಿಟ್ಟಳು

ಭಟ್ಟರು : "ವಯಸಾ ಪ್ರಗಲ್ಭಾ! ನೀಲಾ ಭೂಷಣಂ! ಭಕ್ಷಣಂ ದಧಿಃ!"

ಒಂದನೇ ಧ್ವನಿ : ಸರಿ, ಕೇಳಿದಿರಾ ನಿಮ್ಮ ಭಾಗ್ಯ! ಈಕೆಯ ನೀಲ ಬಣ್ಣ ನ ಮನೆಗೆ ಭೂಷಣ! ಪ್ರಗಲ್ಭಳಾಗಿ ಬೆಳೆದಿದ್ದಾಳೆ. ಯಾವಾಗಲ ಮುಕ್ಕಲಿಕ್ಕೆ ಮೊಸರೇ ಮೊಸರು!

ಮೂರನೇ ಧ್ವನಿ : ಹೌದು ಕವಿ ಬೇಂದ್ರೆ ಹಾಡಿದ್ದಾರೆ! "ಹಾಲೇಹಾಲು, ಮೊಸ ಮೊಸರು! ಯಾರಿಗೂ ಹೇಳೋಣು ಬ್ಯಾಡsss" (ಹಾಡ ಹೆಣಗುವನು)

ಎರಡನೇ ಧ್ವನಿ : ಸಾಕು ಬಿಡಿ. ಬರಿದೇ ಹಾಡು ತ್ರಾಸೇಕೆ? ಆಯ್ತಲ್ಲ, ಮತ್ತೆ ಬೇರೆ ವಿಚಾರವೇಕೆ? ಮೇಷ್ಟೇ ನಿಮಗಾಗಿಯೇ ಹುಟ್ಟಿ ಬೆಳೆದು ಕಾಯುತಾ ನಿಂತಿದ್ದಾಳೆ.

ಭಟ್ಟರ ಧ್ವನಿ : ಅಗಮೇಚ ಭವೇತ್ ಸೌಖ್ಯಂ ಗಮನೇ ದುಃಖ ದಾಯಕಂ!

ಮೂರನೇ ಧ್ವನಿ : (ಗಾಬರಿಯಾಗಿ) ಗಂಡನ ಮನೆಗೆ ದುಃಖದಾಯಕವಂತೆ ವೆಂಕಪ್ಪನವರೇ!

ಒಂದನೇ ಧ್ವನಿ : ಅಲ್ಲ, ಮಂಕಪ್ಪನವರೆ, ಆಕೆ ಬಂದದ್ದೇ ನಿಮ್ಮ ಸೌಖ್ಯಕ್ಕೆ, ಹೋಗಲು ಬಿಟ್ಟರೆ ದುಃಖದಾಯಕವೇ ಸರಿ.

ಮೂರನೇ ಧ್ವನಿ : (ಕೃತಜ್ಞತೆಯಿಂದ) ಆಯಿತು ವೆಂಕಪ್ಪನವರೇ, ಎಳ್ಳಪ್ಪನವರೇ ನಿಮ್ಮ ಮಾತೇ ಆಗಲಿ ನನ್ನ ಮನೆ ತುಂಬಲಿ! ಯಾರೊ ಏನೋ.....

ಎರಡನೇ ಧ್ವನಿ : ಯಾರೂ ಏನೂ ಹೇಳಿಲ್ಲ! ಅದೋ ಭಟ್ಟರೇ ಸಂಕ್ರಮಣ ಫಲ ಹೇಳಿ ಮುಗಿಸುತ್ತಿದ್ದಾರೆ. ನೀವಿಲ್ಲೆ ಇರಿ. ನನ್ನ ಹತ್ತಿರ ಒಂದು ಖೊಟ್ಟಿ ಆಣೆ ಇದೆ.

ಭಟ್ಟರ ಧ್ವನಿ : "ಇತೀದಂ ಸಂಕ್ರಮಣ ಫಲಂ. ಶ್ರುತ್ವಾಲೋಕೋ ಸುಖೀ ಭವೇತ್" (ಆರತಿಯ ಗಂಟೆಯ ಸದ್ದು ಗದ್ದಲ)

ಮೂರನೇ ಧ್ವನಿ : ನಡೀರಿ ವೆಂಕಪ್ಪನವರೇ, ಭಟ್ಟರನ್ನು ಮಾತಾಡಿಸೋಣ! ರೂಪ ತಕೊಂಡು ಮಾಡುವುದೇನು ನಾನು? ತಾನು ಕಾಮನಲ್ಲದವನು ರತಿಯನ್ನು ಬಯಸುವುದು ತಪ್ಪಲ್ಲವೇ?

ಒಂದನೇ ಧ್ವನಿ : ಹದಿನಾರಾಣೆ ಸತ್ಯ, ಕಂಗೆಟ್ಟ ಮೇಷ್ಟ್ರಿಗೆ ಗಟ್ಟಮುಟ್ಟು ಹೆಂಡತಿಯೇ ಯೋಗ್ಯ! ಇಂದೇ ಮಕರ ಸಂಕ್ರಾಂತಿ ಕೊಡಲಿ.

# ನ್ಯೂಟನ್‌ನ ಮೂರನೆಯ ನಿಯಮ

(ಬಾನುಲಿ ರೂಪಕ)

## ಪಾತ್ರಪರಿಚಯ

**ಹೆಣ್ಣು-**

ಲೀಲಾ (ಸ್ತ್ರೀ ಸ್ವಾತಂತ್ರ್ಯವಾದಿನಿ ಪದವೀಧರ ಯುವತಿ)
ಲೈಲಾ (ಲೀಲಾಳ ಆಫೀಸ ಗೆಳತಿ)
ಲಲ್ಲೂ (ಮಗು, ನಾಲ್ಕು ವರ್ಷ)

**ಗಂಡು-**

ಕಾಮೇಶ್ವರರಾವ್ (ಬಾಸ)
ಜವಾನ
ಬಸ್ ಕಂಡಕ್ಟರ
ಪ್ರಯಾಣಿಕರು
ಸದ್ದುಗಳು-ಬಸ್ಸಿನ ಬೀದಿಯ ಸದ್ದುಗದ್ದಲಗಳು.

೧

ಮತಿ : ಇದೇನೇ ಸಿಂಥೆಟಿಕ್ ಫೈಬರ್ಸ ಸಿಂಡಿಕೇಟ ಆಫೀಸು?

ಲಾ : ಮ್ಯಾನೇಜಿಂಗ್ ಡೈರೆಕ್ಟರ ಶ್ರೀ ಕಾಮೇಶ್ವರರಾವ್ ಇದಾರೆಯೇ ಒಳಗೆ?... ಏನಯ್ಯ ಸುಮ್ಮನಿದ್ದೀ?

ವಾನ : ಅಲ್ಲಿ ಬೋರ್ಡು ತೂಗ್ತಾ ಇದೆ. ಕಾಣೋಲ್ವೇ? ಬಾಸ ಒಳಗಡೆ ಇದ್ದಾರ ಅದೋ 'IN' ಎಂದಿದೆ.

ಲಾ : Sorry ಗಮನಿಸ್ಲಿಲ್ಲ. ಒಳಗೆ ಹೋಗಲೇ?

ವಾನ : ತಡೀರಿ. ತಮ್ಮ ಹೆಸರು ಕೆಲಸ ಬರೆದು ಕೊಡಿ.

ಲಾ : ಸರಿ ಇಕೋ ನನ್ನಕಾರ್ಡು. ಲಗು ಒಳಗೆ ಕೊಡು.

ವಾನ : ಇಲ್ಲೇ ನಿಲ್ಲಿ. ಒಳಗೆ ಹೋಗಿ ಬರ್ತೇನೆ. (ಒಳಗಿನ ಬೆಲ್ಲು. ಒಳಗಿಂದ Yes, come in ಒಳಗೆ ಹೋಗಿ ಕೂಡಲೇ ಮರಳುತ್ತಾನೆ. ಆ ತನಕ ಹಾದಿಯ ಟ್ಯಾಕ್ಸಿ, ಕಾರು, ಸ್ಕೂಟರ ಸೈಕಲ್ ಸಾರಿಗೆ ಸದ್ದು) ಅಮ್ಮ ಒಳಗೆ ನಡೆಯಿರಿ. (ಒಳಗಡೆ ಬೆಲ್ಲು ಬಾರಿಸುತ್ತದೆ)

ಮೇಶ್ವರರಾವ್ ; Yes come in (ಬಾಗಿಲು ತೆರೆದು ಮುಚ್ಚುವ ಸದ್ದು)

ಲಾ : ನಮಸ್ಕಾರ ಸರ್.

ಮೇಶ್ವರರಾವ್ : (ಕೃತಕ ವಿನಯ) ನಮಸ್ಕಾರ ಮೇಡಂ. ಬನ್ನಿ. ನೀವು ಮಿಸೆಸ್ ಲೀಲಾರಾವ್ B.A.? ನಿಂತಿರೇಕೆ ಕುಳಿತುಕೊಳ್ಳಿ. ನೀವು ಪದವೀಧರೆ, ಜತೆಗೆ ವಿವಾಹಿತೆ ಕೂಡ.

ಲಾ : ಪದವೀಧರೆ ವಿವಾಹಿತೆ ಆಗುವುದು ತಪ್ಪೇ? ಅಥವಾ ವಿವಾಹಿತೆ ಪದವೀಧರೆ ಆಗಬಾರದೇ? (ತುಸು ಗಾಬರಿಯಿಂದ)

ಮೇಶ್ವರ : (ದೊಡ್ಡದಾಗಿ ನಕ್ಕು) ಛೇ, ಛೇ, ಹೇ. ಹೇ. ವಿವಾಹಿತ ಅವಿವಾಹಿತ ಇದು ನಮ್ಮ ಪ್ರಾಯ್ವೇಟ್ ಅಫೇರ್. ನಮಗೆ ನಿಮ್ಮ ತಾರುಣ್ಯ ಮುಖ್ಯ ಅಂದರೆ (ಕೆಮ್ಮಿ)

ಲಾ : ತಿಳಿಯಿತು ಸರ್, ನಿಮಗಿಂದು ಯುವಶಕ್ತಿ ಬೇಕು.

ಮೇಶ್ವರ: ಹಾಗೆ ನೋಡಿದ್ರೆ ನಾನು ಮ್ಯಾರಿಡ್ ಲೇಡೀಜನ್ನೆ ಹೆಚ್ಚು ಪ್ರಿಫರ್

ಮಾಡೋದು. ನನ್ನ ಲೆಕ್ಕಕ್ಕೆ ಅವಿವಾಹಿತಳಿರೋದು ಒಂ
ಹ್ಯಾಂಡಿಕ್ಯಾಪು? ಯಾಕೆ ಗೊತ್ತೆ?

ಲೀಲಾ : ಗೊತ್ತಾಗಲಿಲ್ಲ ಸರ್.

ಕಾಮೇಶ್ವರ : ಅದು ಹೀಗೆ. ಈ ಅನ್‌ಮ್ಯಾರಿಡ ಹೆಣ್ಣು ಮಕ್ಕಳು ಕೆ
ಚೆನ್ನಾಗಿಯೇ ಮಾಡ್ತಾರೆ. ಕೆಲವರು ಕೆಲಸ ಮಾಡೋರು ಚೆನ
ಇರ್ತಾರೆ. (ತನ್ನ ಜೋಕಿಗೆ ತಾನೇ ನಕ್ಕು) ಆದರೆ ಮುಂದೆ ಅವ
ಆಫೀಸಿನಲ್ಲಿಯೇ ತಮ್ಮ ಕಲೀಗರನ್ನು ಮದುವೆಯಾಗುತ್ತಾ
ಆಮೇಲೆ ಇಬ್ಬರದೂ ಒಂದು ಕ್ಲಿಕ್ ಆಗಿ ಬಿಡುತ್ತದೆ. ಬೇ
ಬ್ರಾಂಚಿಗೆ ಟ್ರಾನ್ಸ್‌ಫರ ಮಾಡುವಾಗ ತೊಂದರೆ ಕೊಡ್ತಾರೆ. ಇ
ಸ್ಟಾಫ್ ದಾಂಪತ್ಯ ನಮಗೊಂದು ಹೆಡೇಕ್

ಲೀಲಾ : (ಆಶೆಯಿಂದ) ಹಾಗಾದ್ರೆ ಸರ್ ತಮ್ಮಲ್ಲಿ ವಿವಾಹಿತ ತರುಣಿ
ಪ್ರಿಫರೆನ್ಸ್ ತಾನೇ!

ಕಾಮೇಶ್ವರ : ಆಫಕೋರ್ಸ್, ಮಿಸೆಸ್‌ರಾವ್. ನೀವು ವಿವಾಹಿತರಿದ್ದರೂ ತು
young ಇದ್ದೀರಿ. ಸ್ಮಾರ್ಟ ಇದ್ದೀರಿ. ನಿಮ್ಮ ಇತರ ಕ್ವಾಲಿಫಿಕೇಶ
ಚೆನ್ನಾಗಿದೆ. ಮಿಸ್-ಆ ಎಮ್ ಸೊರಿ-ಮಿಸೆಸರಾವ್.

ಲೀಲಾ : (ಹರ್ಷ, ಕೃತಜ್ಞತೆ) ಮಿಸ್ ಎಂತಲೇ ಭಾವಿಸಿ, ಪರವಾ ಇ
ಮಿಸ್ ಲೀಲಾ ಎಂತಾನೇ ಕರೀರಿ

ಕಾಮೇಶ್ವರ : ಅಯ್ಯೋ ಹಾಗೇಕಂತೀರಾ?

ಲೀಲಾ : (ನಿಟ್ಟುಸಿರು) ಇದು ಒಂದು ಹೊಸ ಅಧ್ಯಾಯ ನಮ್ಮ ಬಾಳಿನ
ನನ್ನ ದಾಂಪತ್ಯ ಮುಗಿದಂತೆ. (ತುಂಬ ಖಿನ್ನಳಾಗಿ)

ಕಾಮೇಶ್ವರ : ಹೀಗೇನು ಹೇಳ್ತೀರಿ. ಏನು ವಿರಸ ಬಂತು?

ಲೀಲಾ : ನಾ ಮದುವೆ ಆದದ್ದನ್ನೇ ಮರೆಯಬೇಕೆಂದು ಮಾಡಿದ್ದೇನೆ.
(ಹಿನ್ನೆಲೆಯಲ್ಲಿ ಪಿಟೀಲಿನ ಕರುಣಾಸ್ವರ ಆರಂಭ)

ಕಾಮೇಶ್ವರ: ಪಾಸ ಪಸ! ಯಾಕೆ? ಹೇಳಿ ಸಂಕೋಚಬೇಡ. (ಅವಳು ಬಿಕ್ಕುವ
ಹೇಳು ಲೀಲಾ, ಇನ್ನು ನಾನೇ ನಿನ್ನ ಬಾಸ-ಯಜಮಾನ. (ಅವ
ಮೈದಡವುತ್ತ) ಅದೆಷ್ಟು ಹೆದರ್ತೀಯಾ? ಬೆನ್ನೆಲ್ಲ ಬೆವೆತು ಹೋಗಿ
ಹಣೆ ತುಂಬಾ ಬೆವರು. ತಾಳು ಒರಸ್ತಿನಿ. ಹಾಂ, ಈಗ ಹೇ

(ಬೆಲ್) ಏ ಬಾಯ್ ಎರಡು ಕಾಫಿ, ಬಿಸ್ಕೀಟು ತಾ. (ಪಿಟೀಲುವಾದನ ಮುಂದರಿಯುತ್ತದೆ.)

ಲೀಲಾ : ಏನು ಹೇಳಲಿ? ಅದೊಂದು ದೊಡ್ಡ ರಾದ್ಧಾಂತ. (ಒಂದು ದನಿ ಬಿರುಸಾಗುತ್ತಾ ಹಿನ್ನೆಲೆ ಸಂಗೀತ ಉತ್ಕಟ) ನಾನೇನು ಹಳೆಗಾಲದ ಗರತಿ ಅಲ್ಲ. ಹೊಸಕಾಲದ ಕಲಿತ ಹೆಣ್ಣು ಪದವೀಧರೆ. ಆತ್ಮಾಭಿಮಾನಿ. ಗಂಡನ ಕೈಗೊಂಬೆ ಆಗಲಾರೆ. ನನ್ನ ಅಸ್ತಿತ್ವ ಕರ್ತೃತ್ವ ನನ್ನದೇ. ನಾನು ಸ್ವತಂತ್ರವಾಗಿ ಬಾಳಬೇಕೆಂದು ಬಂದೆ.

ರಾಮೇಶ್ವರ : ಸರಿ, ಸರಿ. ಆದರೆ, ಹೀಗೆ ಮನೆ ಬಿಟ್ಟು ಬರಲು ಏನು ಕಾರಣ?

ಲೀಲಾ : ಅದು ಹೀಗಾಯ್ತು ಸರ್. (Flash back)

೨

ಲೀಲಾ : ( ಅದೇ ಬಿರುಸುದನಿಯಲ್ಲಿ ಗಂಡನೊಂದಿಗೆ ಜಗಳಾಡುತ್ತಿದ್ದಾಳೆ. ನಡು ನಡುವೆ ಅವರ ಪುಟ್ಟ ನಾಲ್ಕು ವರ್ಷ ಪ್ರಾಯದ ಮಗು 'ಅಮ್ಮಾ' 'ಅಮ್ಮಾ' ಎಂದು ಮರುಗುತ್ತ ಹಿನ್ನೆಲೆಯಲ್ಲಿ ಅಳುತ್ತದೆ. ಅದಕ್ಕೆ ಸಕ್ತ ಕಾಯಿಲೆ) ನಾನು ಹಳೆಯಕಾಲದ ಮುತ್ತೈದೆ ಗರತಿ ಅಲ್ಲ. ೨೦ನೆಯ ಶತಮಾನದ ಪದವೀಧರೆ. ಆಧುನಿಕ ಹೆಣ್ಣು. ಸ್ತ್ರೀಸ್ವಾತಂತ್ರ್ಯಕ್ಕಾಗಿ ಹೋರಾಡುವವಳು. ಪುರುಷಾರ್ಥ ಮಾಡಿತೋರಿಸುವವಳು.

ಗಂಡ : (ನಕ್ಕು) ಅಲ್ಲೇ, ಹೆಣ್ಣಿಗೆಲ್ಲಿಂದ ಬಂತು ಪುರುಷಾರ್ಥ?

ಲೀಲಾ : ಹಾಗೆಲ್ಲ ಲೇವಡಿ ಮಾಡಬೇಡಿ. ಅದಕ್ಕೆ ನಾನು ಮಣೆಯೋಳಲ್ಲ. ನಿಮ್ಮ ಹಟಕ್ಕೆ ನಾ ಬಗ್ಗೋದಿಲ್ಲ (ಒಳಗೆ ಮಗುವಿನ ಅಳು)

ಗಂಡ : ನನ್ನ ಹಟಕ್ಕೆ ಅಲ್ವೆ, ಅಕೋ ಅಲ್ಲಿ ಮಗು ಕೂಗಿಕೊಳ್ತಾ ಇದೆ 'ಅಮ್ಮಾ' 'ಅಮ್ಮಾ' ಎಂದು. ಅದಕ್ಕೆ ಸಕ್ತ ಜ್ವರ. ನೀ ಹೀಗೆ ಹಗಲೆಲ್ಲ ಹೊರಗೆ ಮೆರೆದಾಡಿದರೆ...

ಲೀಲಾ : ಮೆರೆದಾಡೋದು ಏನು ಬಂತು! ನಾನು ಪದವೀಧರೆ, ಸುಧಾರಿಸಿದವಳು. ಇದು ಮಹಿಳಾವರ್ಷ. ಅಲ್ಲಲ್ಲಿ ಸಭೆ ಸಮ್ಮೇಲನಗಳಲ್ಲಿ ಕರೀತಾರೆ ಭಾಷಣಕ್ಕೆ. ಇದೀಗ ನಾನು

ಹೋಗಬೇಕು. ಟೌನ್‌ಹಾಲಿನಲ್ಲಿ ಬ್ಲಾಕ್‌ಮಟ್ಟದ ಮಹಿಳಾ ಸಮ್ಮೇಲನ. ನಾನು ಅಲ್ಲಿ ಭಾಷಣ....

ಗಂಡ : ಸರಿ ಮಾರಾಯ್ತೀ, ನೀನು ಅಲ್ಲಿ ಭಾಷಣ ಬಿಗಿಯಬೇಕು. ಆದರೆ ಇಲ್ಲಿ ಈ ಬಿಕ್ಕಟ್ಟಿಗೇನುಮಾಡ್ತಿ? ಊರಿಗೆ ನೀನು ಮಹಿಳಾ ಧುರೀಣೆ ಒಪ್ತೇನೆ. ಆದರೆ ಇಲ್ಲಿ ಮನೇಲಿ? ನೀನು ನನ್ನ ಹೆಂಡತಿ. ಈ ಮಗುವಿನ ತಾಯಿ.

ಲೀಲಾ : ತಾಯಿ ಆದರೇನಂತೆ? ನೀವೂ ತಂದೆ ಅಲ್ವೇ? ಕೂಸನ್ನ ಜೋಪಾನ ಮಾಡೋ ಭಾರ ನಮ್ಮಿಬ್ಬರದೂ ಹೊಣೆ. ನೀವು ನೋಡಿಕೊಳ್ಳಿ ನಾ ಹೊರಟೆ.... ಇದು ಮಹಿಳಾವರ್ಷದ ಕೊನೆಯ ಸಭೆ.

ಗಂಡ : ಎಲ್ಲಿಯ ವರ್ಷವೇ? ವರ್ಷ ಮುಗಿದು ಇದು ಎರಡನೆಯ ತಿಂಗಳು ೧೯೭೬ ಫೇಬ್ರವರಿ

ಲೀಲಾ : ವರ್ಷ ಮುಗಿದರೂ ದಶಕ ಇನ್ನೂ ಸುರು. ಇನ್ನೂ ಒಂಭತ್ತು ವರ್ಷವಿದೆ. ನೀವು ಏನು ಮಣ್ಣು ಪೇಪರ ಓತ್ತೀರೋ 'ಯುನೋ' ಸಂಸ್ಥೆ.

ಗಂಡ : I know. I know. ಈ ಕುಟುಂಬ ಸಂಸ್ಥೆಯ ಕೇಂದ್ರ ನಮ್ಮ ಮಗು. ಅದರ ಗತಿ? ಅಲ್ಲ ಲೀಲಾ, ಇಂದಿನ ಸಭೆ ನೀನಿಲ್ಲದೆ ನಡೆಯೋ ಹಾಗೇ ಇಲ್ಲವೇ? ನಾನು ಫೋನ ಮಾಡಿ ಅವರಿಗೆ ತಿಳಿಸ್ತೇನಿ. ಮಗೂ ಮೈ ಕಾದ ಕೆಂಡ. ನೀನು ಅದರ ಹತ್ತಿರ ಉಳಿಯಲೇ ಬೇಕು. 'ಅಮ್ಮಾ' ಅಮ್ಮಾ' ಎಂತ ಕೂಗ್ತಾ ಇದೆ. (ಕೂಸಿನ ಅಳಲ ದನಿ)

ಲೀಲಾ : ಅಮ್ಮನಷ್ಟೇ ಅಪ್ಪಂದೂ ಅಧಿಕಾರ ಈ ಮನೇಲಿ.

ಗಂಡ : (ಸಿಡುಕಿ) ಅಧಿಕಾರದ ಪ್ರಶ್ನೆ ಏನ್ ಬಂತೇ ಮಗುವಿನ ಆರೈಕೆಗೆ

ಲೀಲಾ : ನೀವೂ ಅದರ ಆರೈಕೆಯ ಅರ್ಧ ಭಾರ ಹೊರಲು ಅರ್ಹರು ಮರೀಬೇಡಿ.

ಗಂಡ : ಅಲ್ವೇ ಮಾರಾಯ್ತೀ. ಮಕ್ಕಳ ಆರೈಕೆ ಹೆತ್ತ ತಾಯಿಗೇ ಗೊತ್ತು ನೀ ಅದನ್ನು ಹೊತ್ತು ಹೆತ್ತು ಮೊಲೆಯುಣಿಸಿ..

ಲೀಲಾ : ಶೀಶೀಶೀ ಇದೇನು ಪ್ರಾಣಿ ಶಾಸ್ತ್ರ ಬಿಚ್ತಾ ಇದೀರಿ. ನಾ ಎಲ್ಲಿ ಹಾಲುಣಿಸಿದ್ದೆ? ಮಗು ಬೆಳೆದಿದ್ದು ಪೌಡರ ಹಾಲಿನ ಮೇಲೆ

ನಾ ಏನು ಹಳ್ಳಿ ಹೈದೆಯಲ್ಲ. ಮಗೂನ ಹಾಲುಣಿಸಿ ಮೈಮಾಟ ಕಳೆದುಕೊಳ್ಳಲಿಕ್ಕೆ. ಹ್ಞ, ಸಾಕು ಸುಮ್ನಿರಿ ಹೊತ್ತಾಯ್ತು. (ಒಳಗೆ ಮಗುವಿನ ಆಕ್ರೋಶ ಹೆಚ್ಚುತ್ತ ಹೋಗುತ್ತದೆ.)

ಗಂಡ : ಕೇಳೆ, ಸ್ವಲ್ಪ ಕೇಳೆ. ನೀನೇನು ತಾಯೋ, ಹೆಣ್ಣು ಪಿಶಾಚಿಯೋ?

ಲೀಲಾ : ಸುಮಸುಮ್ನೆ ರೇಗಿಸಬೇಡಿ ನನ್ನ. ಈ ಕಾಯಿಲೆ ಬಿದ್ದ ಮಗು, ಇಲ್ಲಿ ಇರೋದೇ ಬೇಡ. ನಾ ಹೋಗ್ತಾ ಆಸ್ಪತ್ರೆಗೆ ಫೋನ ಮಾಡಿ ಹೋಗ್ತೇನೆ ಅಂಬ್ಯೂಲನ್ಸ್, ಒಬ್ಬ ನರ್ಸು ಕಳಿಸಿ ಒಯ್ಯಲಿಕ್ಕೆ. (ಒಳಗೆ ಮಗುವಿನ ಅಳು.)

ಗಂಡ : ಲೀಲಾ, ನೀ ಹೋಗಕೂಡದು. ನೀ ಇಂದು ಮನೆ ಬಿಟ್ಟು ಹೊರಗೆ ಹೋಗಕೂಡದು ಪ್ಲೀಜ್ ನಿಲ್ಲು. ಒಳಗೆ ಹೋಗಿ ಮಗೂನ ನೋಡ್ಕೋ.

ಲೀಲಾ : ನೀವು ನೋಡಿಕೊಳ್ಳಿ ಈಗಾಗಲೇ Late ಆಯ್ತು.

ಗಂಡ : (ಗಡುಸಾಗಿ) ಲೀಲಾ ನಿಲ್ಲು. ಹೊರಗೆ ಕಾಲಿಡಬೇಡ, ಇಟ್ಟರೇ.....

ಲೀಲಾ : ಇಟ್ಟರೇನು ಮಾಡ್ತೀರಿ? ಇದೇನು ನಿಮ್ಮ ಜುಲ್ಮೆ! ಗಂಡನ ದಬ್ಬಾಳಿಕೆ? ನಾ ಕೇಳೋಳಲ್ಲ ನನಗೆ ನನ್ನ ಸ್ವಾತಂತ್ರ್ಯವಿಲ್ಲವೆ?

ಗಂಡ : ಇಲ್ಲಿ ಸ್ವಾತಂತ್ರ್ಯವೇನು ಬಂತು ಮಣ್ಣು? ಇದು ಮನುಷ್ಯತ್ವದ ಪ್ರಶ್ನೆ. ಮಗುವಿಗೆ ನೀನು ಬೇಕು.

ಲೀಲಾ : ನನಗೆ ಮೀಟಿಂಗಿಗೆ ಹೋಗಲೇ ಬೇಕು. ನನ್ನ ಹಕ್ಕು ನನಗೆ ಬೇಕು. ಮಗುವಿನ ಆರೈಕೆ ನಿಮ್ಮ ಹೊಣೆ. ಅದರ ವ್ಯವಸ್ಥೆ ನಾನು ಸೂಚಿಸಿದ್ದೇನೆ. ಇನ್ನು ನಾ ಹೊರಟೆ.

ಗಂಡ : ಇದೇನು ಹುಚ್ಚು ಹಟ, ಲೀಲಾ! ನಿನ್ನ ಮಗು.

ಲೀಲಾ : ಮತ್ತೆ ಮತ್ತೆ ನನ್ನ ಮಗು, ನನ್ನ ಮಗು. ಅದು ನಿಮ್ಮದೇ ಮಗು. ನಾನೇನು ಮಗು ಬೇಡಿ ಪಡೆದಿದ್ನೇ?

ಗಂಡ : ಅಯ್ಯೋ ಲೀಲಾ, ಇದೆಂಥ ಮಾತು ಆಡ್ತೀಯೇ?

ಲೀಲಾ : ಇದು ಮಾತಿಗೆ ಮಾತು. ನಿಮಗೆ ಪ್ರತ್ಯುತ್ತರ. ನೀವು M.Sc. ಅಂತೆ ನ್ಯೂಟನ್‌ನ ಮೂರನೆಯ ನಿಯಮ ಮರೆತಿರಾ?

ಗಂಡ : ಏ ಮಹಾಪಂಡಿತೇ, ಅದೇಕೆ ಇಲ್ಲಿ ನೆನಪಾಯ್ತು.

ಲೀಲಾ : ಗಂಡುಹೆಣ್ಣು Action and reaction ನಂತೆ Equal an opposite

ಗಂಡ : ಇಲ್ಲಿ ಯಾರು Action ನ್ನು? ಯಾರು Reaction ನ್ನು?

ಲೀಲಾ : (ಆವೇಶ) ನಾವು Action ನೀವು reaction ಗಂಡ ಯಾವಾಗಲೂ ರೀಎಕ್ಶನರಿ ಪ್ರತಿಗಾಮಿ. ನಾವು ಪುರೋಗಾಮಿ.

ಗಂಡ : ಯಾರು ಗಾಮ, ಯಾರು ಗಾಮಿ? ಈ ಹಂಗಾಮಿ ಹರಟೆ ಈಗ ಬೇಡ. ನೀ ಈಗ ಮನೆಬಿಟ್ಟು ಹೊರಬೀಳಕೂಡದು. ಅಕೋ ಮಗು ಕಿರುಚಿಕೊಂಡು ಒಮ್ಮೆಲೆ ಕಾರಿಕೊಳ್ತು. (ಅಂಥ ಸದ್ದು ನೋಡಿಕೋ. ನಾ ಹೋಗಿ ಡಾಕ್ಟರರ ಕರದು ತರ್ತೇನೆ.

ಲೀಲಾ : ನಾನೇ ಕಳಿಸಿಕೊಡ್ತೇನೆ ನೀವು ಇಲ್ಲೆ ನಿಲ್ಲಿ. ನಾ ಹೊರಟೆ.

ಗಂಡ : ಹೊರಟೆಯಾ, ಹೊರಟೇ ಬಿಟ್ಟೆಯಾ?

ಲೀಲಾ : ಹುಂ.

ಗಂಡ : ಹಾಗಾದರೆ ಹೋಗು. ಹೊರಟೇ ಹೋಗು. ಮತ್ತೆ ಈ ಮನೆಯಲ್ಲಿ ಕಾಲಿಡ ಬೇಡ. ನಿನ್ನ ಸ್ವಾತಂತ್ರ್ಯ ನಿನಗೆ. ನನ್ನ ಜವಾಬ್ದಾರಿ ನನಗೆ. ನನ್ನ ಮಗು, ನನ್ನ ಮನೆ ನಾನೇ ನೋಡಿ ಕೊಳ್ತೇನೆ.

(ಲೀಲಾ ಬಿಕ್ಕುತ್ತ ಬಿಕ್ಕುತ್ತ ಮಾತು ಮುಗಿಸುತ್ತಾಳೆ)

ಲೀಲಾ: ಹೀಗದೆ ನನ್ನ ಕರ್ಮ ಕಥೆ ಈಗ ನಾನು ಬೇರೆ ಇದ್ದೇನೆ. ನನಗೀಗ ನೀವೇ ಮಿಸ್ಟರ್ ಕಾಮೇಶ್ವರರಾವ್.

ಕಾಮೇಶ್ವರ : Dont you worry. ನಿನ್ನ ಎಲ್ಲ ಚಿಂತೆಗೆ ಇನ್ನು ಇಲ್ಲಿ ಪೂರ್ಣ ವಿರಾಮ. I welcome you with open arms. ಇಂದಿನಿಂದ ನೀನು ನನ್ನ ಪರ್ಸನಲ್ ಸೆಕ್ರೆಟರಿ. ಹೂಂ ಇನ್ನು ಈ ಅಳುಮೋರೆ ಬೇಡ. ಮುಖ ತೊಳೆದುಕೊಂಡು ಮೇಕಪ್ ತಿದ್ದಿಕೊಂಡು ಬನ್ನಿ. Oh what a girl. ಲೀಲಾ ನಿನ್ನ ಸ್ವತಂತ್ರ ಸ್ವಚ್ಛಂದ ಬಾಳಿಗೆ ಇಂದೇ ನಾಂದಿ.

೩

(ಸಿಟಿ ಬಸ್ ಸ್ಟಾಪ್. ಲೀಲಾ ಬಸ್ ಏರುವಳು. ಕಂಡಕ್ಟರನ ಗೊಣಗು)

ಡಕ್ಟರ : ಅಮ್ಮಾ ಸೀಟು ಫುಲ್. ನಿಂತು ಹೋಗಬೇಕಾದೀತು.

ಲಾ : ಅಡ್ಡಿ ಇಲ್ಲಪ್ಪ. ನಮ್ಮ ಸಭೆ ಮುಗಿಯಲಿಕ್ಕೆ ತಡವಾಯ್ತು. ಈಗ ಮನೆ ಸೇರಲೇಬೇಕು.

ಡಕ್ಟರ : ಹಾಂ ಕೊಳ್ಳಿ ತಿಕೀಟು. (ಗಂಟೆ) ಮುಂದಾಗಿ. ಮುಂದನೋರ ಸರೀರಿ ಹೆಣ್ಣು ಮಕ್ಕಳಿಗೆ ಜಾಗಕೊಡಿ. ಹಾಂ ಮುಂದೆ ಸರೀಮ್ಮಾ

ೀ ಪ್ರಯಾಣಿಕ : ಇವಳಾರು?

ೀ ಪ್ರಯಾಣಿಕ : ಗೊತ್ತಿಲ್ವೇ? ಇವರು ಮಿಸೆಸ್ ಲೀಲಾರಾವ್. ಪ್ರಸಿದ್ಧ ಮಹಿಳಾ ಕಾರ್ಯಕರ್ತೆ. ಉತ್ತಮ ಮಾತುಗಾರ್ತಿ.

ಲಾ : ಏನು ಧಗೆ? ತುಂಬಾ ಸುಸ್ತು. ಬಳಲಿಕೆ ಹುಶ್ ss

ಡಕ್ಟರ : ಓ ರಾಯ್ರೆ, ನಿಮಗಿವ್ರು ಗೊತ್ತು. ಅಂದ್ಹಾಂಗ ಇವರಿಗೆ ತುಸು ಜಾಗ ಬಿಟ್ಟುಕೊಡ್ರಲ್ಲ!

ೀ ಪ್ರಯಾಣಿಕ : ಅಲ್ರೀ, ಇದೊಳ್ಳೆ ನ್ಯಾಯ! ಇದೀಗ ಇವರು ಹೆಂಗಸರ ಸಮಾನ ಹಕ್ಕುಗಳ ಬಗ್ಗೆ ಭಾಷಣ ಮಾಡಿ ಬಂದವರು. ನಾವಲ್ಲಿ ಸ್ಟಾಪನಾಗ ನಿಂತಾಗ ಕೇಳಿದ್ವಿ ಅಲ್ಲ? ನಾವು ನಿಂತಿದ್ದೀವಿ, ಅವರೂ ನಿಂತ್ಕೊಳ್ಳಲಿ ನಮ್ಮಿಬ್ಬರಿಗೂ ನಿಲ್ಲಲಿಕ್ಕೆ ಸಮಾನ ಹಕ್ಕು (ಎಲ್ಲರ ನಗು)

ಣ್ಣುದನಿ : ಅಲ್ರೀ, ಹೆಣ್ಣು ಹೆಂಗಸು ತುಂಬಾ ಬಳಲಿದ್ದರೆ ತುಸು ಸರಿದು ಜಾಗ ಕೊಡ್ರಲ್ಲಾ. ನಿಮಗೆ ಸ್ತ್ರೀ ದಾಕ್ಷಿಣ್ಯವೇಇಲ್ಲ!

ೀ ಪ್ರಯಾಣಿಕ: ದಾಕ್ಷಿಣ್ಯ ಗೀಕ್ಷಿಣ್ಯ ಏನೂ ಇಲ್ರವ್ವಾ ಇಲ್ಲಿ. ಇದು ಶುದ್ಧ ದಕ್ಷಿಣೆಗೆ ತಕ್ಕ ಪ್ರದಕ್ಷಿಣೆ! (ಎಲ್ಲರ ನಗು)

ೀ ಪ್ರಯಾಣಿಕ : ಅದೂ ಸರೀನೇ. ಹಕ್ಕಿಗೆ ಹೋರಾಡೋರು ದಾಕ್ಷಿಣ್ಯಾನೂ ಬಯಸಬಾರದು (ಎಲ್ಲರ ನಗು)

ೀ ದನಿ : ಹೌದು, you can't have it both ways ಏನಂತೀರಿ. (ಎಲ್ಲರೂ "ಹೌದಪ್ಪ ಹೌದು" ಎಂದು ನಗುತ್ತಾರೆ)

ಲೀಲಾ : ಸಾಕು ಬಿಡಿ. ನಿಮ್ಮ ಗಂಡು ಗುಂಡರ ಗೊಡ್ಡು ಸೊ (ಗಂಟೆಬಾರಿಸಿ) ಕಂಡಕ್ಟರ ನಾ ಇಲ್ಲೇ ಇಳೀತೀನಿ. ನಡೆ ಹೋಗ್ತೀನಿ.

(ಅವಳು ಧಡಧಡ ಇಳಿದು ಹೋಗುತ್ತಾಳೆ. ಆಗ ಪ್ರಯಾಣಿಕರು

೧ನೇ : ಇನ್ನು ಹೆಂಗಸರದೇ ಬಸ್ ಓಡಾಡಬೇಕಾತು!

೨ನೇ : ಅರೇರೇ ಹೋಗೇಬಿಟ್ಟಳು!

೩ನೇ : ಎಂಥ ಗಂಡು ಬೀರಿ!

೪ನೇ : ಅಲ್ಲ, ಹೆಣ್ಣು ಬೀರಿ! (ಎಲ್ಲರ ನಗೆ)

(ಮೇಲಿನ ಮಾತುಕತೆ ನಡೆದಾಗ ಬಸ್ಸು ಹೋಗುತ್ತಲೇ ಇರು ಸದ್ದು. ಲೀಲಾ ಇಳಿದ ಮೇಲೆ ಮತ್ತೆ ಗಂಟೆ ಆಗಿ ಬ ಓಡುವುದು.)

೪

ಲೈಲಾ : ನಿಲ್ಲಿ ಲಾಲಾರಾವ್, ನಾನೂ ಬಂದೆ. ನಿಮ್ಮ ಜೊತೆ ನಡೆ ಹೋಗ್ತೇನೆ.

ಲೀಲಾ : ನೀವು? ಆಗ ಬಸ್ಸಿನಲ್ಲಿ ಸ್ತ್ರೀದಾಕ್ಷಿಣ್ಯದ ಮಾತು......

ಲೈಲಾ : ಹೌದು, ಆಡಿದವಳು ನಾನೇ. ನನ್ನ ಹೆಸರು ಲೈಲಾ ಪಿಂಟೊ ನಿಮ್ಮ ಫರ್ಮಿನಲ್ಲಿಯೆ ನಾನೂ ದುಡೀತೇನೆ. ಆದರೆ ನಮ್ಮ ಸೆಕ್ಷ ಬೇರೆ.

ಲೀಲಾ : ತುಂಬ ಥೆಂಕ್ಸ್. ಹೇಗೆ ಜೀವ ತಿಂದಬಿಟ್ರೂ ಆ ಗಂಡಸ್ರೂ.

ಲೈಲಾ : ಹೆಣ್ಣಿನ ಜೀವ ತಿಂದೆ ಇದ್ರೇ ಅವರು ಗಂಡಸ್ರೇ? ಒಬ್ಬೊ ಒಂದೊಂದು ತರಾ! ಅಲ್ಲ ನೀವೇಕೆ ಇಂದು ಫಜೀತಿಗೆ ಸಿ ಕೊಂಡ್ರಿ? ಯಾವಾಗಲೂ ನೀವು ನಮ್ಮ boss ಕಾರ ಓಡಾಡೋರು!

ಲೀಲಾ : (ನಿಟ್ಟುಸಿರು) ಅದೂ ನಿಜ. ಆದರೆ ಈಚೆಗೆ ನಾನು ಅವರ ಕಾರ ಹೋಗೋದು ತಪ್ಪಿಸಿಕೊಳ್ತಾ ಇದ್ದೇನೆ. ಅವರ ಈ ಚಾಕರಿಗ ರಾಜೀನಾಮೆ ನಿನ್ನೇನೆ ಸಲ್ಲಿಸಿದ್ದೇನೆ.

ಲೈಲಾ : ಓ ಆಯ್ ಸೀ... ಅದೇಕೋ?

ಲೀಲಾ : ಅದೊಂದು ಕರ್ಮಾಂತರ. ಇನ್ನೊಮ್ಮೆ ಹೇಳ್ತೇನೆ. ಆದರೆ ಇಷ್ಟೆಲ್ಲ ತಿಂಗಳು ಒಂದೇ ಆಫೀಸಿನಲ್ಲಿದ್ದು ನಿಮ್ಮ ಭೆಟ್ಟೀನೇ ಇಲ್ಲ ಲೈಲಾ.

ಲೈಲಾ : ಅದಕ್ಕೇನಂತೀರಿ. ನಾನು ಬಾನಾಡಿ ಹಕ್ಕಿ. ನನಗೆ boy friends ಬಹಳ. ಆಫೀಸಿನಲ್ಲಿ ಇದೊಂದೆ ಕಡಿಮೆ. ಆದರೆ ಹೊರಗೆ ನಾ free! ಕೆಲಸಕ್ಕೆ ಕಳ್ಳ ಬೀಳೋ ಹಾಂಗಿಲ್ಲ. (ನಗು) ಆದರೂ ನಿಮ್ಮ ಬೀಡಾರಕ್ಕೇ ಹೋಗೋಣ ಆಫೀಸಿಗೆ late ಆದ್ರೆ ಆಗಲಿ. ನಿಮ್ಮ ಕಥೆ ಈಗಲೇ ಕೇಳಬೇಕೆಂದು ಬಲವಾದ ಆಸೆ!

೫

ಲೀಲಾ : ಬನ್ನಿ ಇದೇ ನನ್ನ ಬಿಡಾರ. ಒಳಗೆ ಹೋಗೋಣ. (ಒಳಗೆ ಹೋಗಿ ಕೂತ ಸದ್ದು) ಆ ಸೋಫಾದಲ್ಲಿ ಕೂತಿರಿ ಕಾಫಿಗೆ ಹಾಕ್ತೇನೆ.

ಲೈಲಾ : ಬೇಡ. ನೀವೇ ಕೂತು ಹೇಳಿ. ನಾ ಕೇಳ್ತೇನೆ. ಆಮೇಲೆ ಕಾಫಿ.

ಲೀಲಾ : ಏನು ಹೇಳಲಿ?

ಲೈಲಾ : ನೀವು ನನ್ನಂತೆ ಅಲ್ಲ. ಸ್ತ್ರೀ ಸ್ವಾತಂತ್ರ್ಯದ ಪ್ರತಿಪಾದಕರು. ಆದರೂ ನಮ್ಮ ಬಾಸರ ಕೋಣೆ ಬಿಟ್ಟು ಹೊರಗೆ ಬರ್‍ತಾ ಇದ್ದಿಲ್ಲ! ಅವರ ಬಿಟ್ಟಿರೋದೆ ಅಪರೂಪ!

ಲೀಲಾ : ಏನು ಮಾಡಲಿ? ಅವರದು ಭಾರೀ ಕೋಪ. ಅವರೇ ನನ್ನನ್ನ ಬಿಡ್ತಾ ಇದ್ದಿಲ್ಲ

ಲೈಲಾ : ಅವರು ಯಾರನ್ನೂ ಬಿಟ್ಟವರೇ ಅಲ್ಲ, ಲೀಲಾ. ನೀ ಹೊಸ ಹಸು ಸಿಕ್ಕಿ ಈ ಹಳೇ ಹುಲಿಗೆ. He is a wolf. ಅರೇ ಅಳುವಿಯೇಕೆ? ಏನಾಯ್ತು

ಲೀಲಾ : (ಅಳುತ್ತ) ಆಗೋದೆಲ್ಲ ಆಗೇಹೋಯ್ತು!

ಲೈಲಾ : ಗೊತ್ತಾಯ್ತು ಬಿಡು (ನಿಟ್ಟುಸಿರು)

ಲೀಲಾ : (ಇನ್ನೂ ಬಿಕ್ಕಿ) ಆಗಬಾರದ್ದು ಆಗಿಹೋಯ್ತು. ನಾನು ಮದುವೆ ಆದವಳು.

ಲೈಲಾ : ಹಾಗಿದ್ದರೆ ಯೋಚನೆ ಏಕೆ?

ಲೀಲಾ : ನಾನು ಬೇರೆ ಇದ್ದೇನೆ, ಗಂಡನ ದಬ್ಬಾಳಿಕೆ ಪ್ರತಿಭಟಿಸಿ, ಅವರ ಹಂಗು ಹರಿದೊಗೆದು

ಲೈಲಾ : ಓಹೋ, ಸ್ವಾತಂತ್ರ್ಯ ಸಮಾನಾಧಿಕಾರಕ್ಕಾಗಿ ಗಂಡನ್ನ ಬಿಟ್ಟು ಬಂದ್ರಾ? ಅವರೇನು ಕುಡುಕರಾ?

ಲೀಲಾ : ಊಹೂಂ.

ಲೈಲಾ : ಕೆಟ್ಟೋರಾ?

ಲೀಲಾ : ಛೇ, ಛೇ, ಹಾಗೆ ಅವರು ತುಂಬ ಒಳ್ಳೆಯವರು. ಆದರೆ ನಮ್ಮ ಮಗೂನ ಕಾಳಜಿ ಎಲ್ಲ ನನ್ನ ಮೇಲೆ ಹೋರಿಸ್ತಾರೆ! ತಮ್ಮ ಪಾಲಿನ ಹೊರೆ ಹೊರೋರಲ್ಲಾ.

ಲೈಲಾ : ಮಗು ಬೇರೆ ಇದೆಯಾ?

ಲೀಲಾ : (ಬಿಕ್ಕು) ಹೂಂ ನಾಲ್ಕು ವರ್ಷದ್ದು. ಮುದ್ದು ಮುದ್ದಾಗಿದೆ. ಗಂಡು ಮಗು. ಲಲ್ಲೂ ಎಂದು ಕರೀತೇವೆ. (ಅಳು ಉಕ್ಕಿ) ಈಗ ಮತ್ತೆ.....

ಲೈಲಾ : ಬೇರೆ ಮಗು. ಬೇಡಾದ ಮಗು! ಛೇ ಛೇ.

ಲೀಲಾ : ಆ ಮಗೂನ ಕಾಳಜಿ ಬಗ್ಗೆ ಜಗಳವಾಯ್ತು.

ಲೈಲಾ : ಹಾಗಾದರೆ ಈ ಹೊಸಮಗೂನ ಭಾರ ನಮ್ಮ boss ಹೊರಲು ಸಿದ್ಧವೋ?

ಲೀಲಾ : ಅವರ ಬಣ್ಣ ಈಗ ಬಯಲಾಯ್ತು. ಅವರ ಬಣ್ಣಕ್ಕೆ ನಾನು ಮೈಸುಟ್ಟುಕೊಂಡೆ.

ಲೈಲಾ : ಮುಂದೇನು ಹಾಗಾದರೇ?

ಲೀಲಾ : (ಬಿರುಸಾಗಿ) ನಮ್ಮ ಈ ಕಂದನನ್ನು ನಾ ಹೊತ್ತು ಸಾಕ್ತೇನೆ-ಶಕುಂತಲೆ ಭರತನನ್ನು ಬೆಳೆಸಿದಂತೆ.

ಲೈಲಾ : ಶಕುಂತಲೆಗೆ ಮರೀಚಿ ಋಷಿಯ ರಕ್ಷಾ ಕವಚವಿತ್ತು. ನಿನಗೆ? ಲೀಲಾ, ಒಂದು ಮಾತು ಹೇಳಲೇ? ನಾ ನಿನ್ನಷ್ಟು ಓದಿದವಳಲ್ಲ. ಆದ್ರೂ..

ಲೀಲಾ : ಹೇಳು ಲೈಲಾ, ನನಗಿಂತ ನೀನು ಅನುಭವಸ್ಥೆ.

ೈಲಾ : ಲೀಲಾ, ಈ ಗಂಡಸರೆಲ್ಲ ಒಂದೇ ರೀತಿ. ಮನೆಯ ಗಂಡನ ಹಂಗು ಬೇಡಾದರೆ ಹೊರಗೆ boss ನ ಹಂಗಿಗೆ ಬಲಿ! ಪುರುಷಪ್ರಧಾನ ಸಮಾಜದಲ್ಲಿ ಹೆಣ್ಣಿಗೆ ದಾಸ್ಯ ತಪ್ಪಿದ್ದಲ್ಲ.

ೀಲಾ : ಆದರೂ ಹೊರಗಿನ ಗಂಡಿನ ಹಂಗು ನಮ್ಮದೇ ಆಯ್ಕೆ. ಮನೆಯಲ್ಲಿ ಹಾಗಲ್ಲ.

ೈಲಾ : ಆದರೆ ಇಲ್ಲಿ ಮತ್ತೆ ಈ ತಾಯ್ತನದ ತೊಡಕು ಉಂಟಲ್ಲ!

ೀಲಾ : ಹೌದು, ಅದು ತಪ್ಪುವಂತೆ ಇಲ್ಲ.

ೈಲಾ : ಛೇ, ಅದನ್ನು ತಪ್ಪಿಸಿಕೊಳ್ಳುವುದೂ ಹೆಣ್ಣಿನ ಧರ್ಮವಲ್ಲ. ಹೆಣ್ಣು ತಾತ್ಕಾಲಿಕ ಕಾಂತೆ, ಯಾವಕಾಲಕ್ಕೂ ಮಾತೆಯೇ.

ೀಲಾ : ಸರಿ ಒಪ್ಪಿದೆ ಆದರೆ ಅವಳ ಸ್ವಾತಂತ್ರ್ಯ?

ೈಲಾ : ಹೆಣ್ಣು ನಿಜವಾದ ಅರ್ಥದಲ್ಲಿ ಸ್ವತಂತ್ರಳಾಗಬೇಕೋ? ಹಾಗಾದರೆ ಎಂಥ ಪರಿಸ್ಥಿತಿಯಲ್ಲಿಯೂ ಅವಳ ತಾಯ್ತನವನ್ನು ಸಮಾಜ ಒಪ್ಪಬೇಕು, ಮನ್ನಿಸಬೇಕು. ಹುಟ್ಟಿದ ಕೂಸು - ಹೇಗೂ ಎಲ್ಲೂ ಹುಟ್ಟಿರಲಿ, ಅದು ಸಮಾಜದ ಘಟಕ. ರಾಷ್ಟ್ರದ ಸಂಪತ್ತು, ಶಕ್ತಿ, ಭಾವೀಜನಾಂಗ. ಅದರ ಪೋಷಣೆ ರಕ್ಷಣೆ ಎಲ್ಲ ರಾಷ್ಟ್ರದ ಹೊಣೆ ಆಗಬೇಕು. ಇದನ್ನು ಒಪ್ಪಿದಾಗಲೇ ಹೆಣ್ಣಿಗೆ ನಿಜವಾದ ಸ್ವಾಸಂತ್ರ್ಯ ಸಮಾನಾಧಿಕಾರ.

ೀಲಾ : ಈಗೇನು ಮಾಡಂತೀಯ

ೈಲಾ : ಮರಳಿ ಮನೆಗೆ. ನಿನ್ನ ಮುದ್ದು ಲಲ್ಲು ಇದ್ದಲ್ಲಿ. ನಾನೂ ಬರ್ತೇನೆ. ನಿನ್ನ ಯಜಮಾನರನ್ನು ಕಾಣೋಣ. ಆದೆದೆಲ್ಲ ಅವರಲ್ಲಿ ತೋಡಿಕೊಳ್ಳೋಣ. ಮಮತೆ ಇದ್ದಲ್ಲಿ ಸಮತೆ ಮುಖ್ಯವಲ್ಲ. ಪರಸ್ಪರಾವಲಂಬನವೇ ನಿಜವಾದ ಸ್ವಾವಲಂಬನ, ಸ್ವಾತಂತ್ರ್ಯ. (ಹೊರಗೆ ಕಾರಿನ ಸದ್ದು. ಬಂದು ನಿಂತಿದ್ದು. ಹಾರ್ನು) ಅಕೋ ಲೀಲಾ, ನಮ್ಮ boss ಏ ಬಂದಂತಿದೆ ನಿನ್ನ ಭೇಟ್ಟಿಗೆ

ೀಲಾ : ನಾ ಬಲ್ಲೆ, ಅವರನ್ನು ಅಟ್ಟಿಬಿಡು. ಕುರಿದೊಗಲಲ್ಲಿ ಕೆಟ್ಟ ತೋಳ! ಅಟ್ಟಿಬಿಡು. ಹೊರಗೆ!

(ಅಷ್ಟರಲ್ಲಿ ಅವಳ ಗಂಡನು ಮಗು ಲಲ್ಲೂ ಜೊತೆ ಒಳಬರುತ್ತಾನೆ.)

ಗಂಡ : ಓಹೋಹೋ!ಮತ್ತೆ ನಮಗೆ ಹೊರಗೆ ಹಾಕುವುದೊ? ಏನಪ್ಪಾ ಈ ಹೆಣ್ಣಿನ ಹಟ! ನೋಡು ಮಗೂ ನಿಮ್ಮಮ್ಮ ನಂಗೆ ದೊಡ್ಡ ಗುಮ್ಮ ಆಗಿ ಬಿಟ್ಟಿದ್ದಾಳೆ!

ಲಲ್ಲೂ : ಅಮ್ಮಾ ಬಾ ಹೋಗೋಣ. ನಿನ್ನ ಕರೀಲಿಕ್ಕೆ ಬಂದೀನಿ.

ಲೀಲಾ : ನಿಮ್ಮದಮ್ಮಯ್ಯ. ಹಾಗೆ ಅನ್ನಬೇಡಿ. ಮಗೂ ನಾ (ಅಳುತ್ತ) ಹೇಗೆ ಬರಲಿ?

ಲಲ್ಲೂ : ಹೇಗಂದ್ರೆ? ಕಾರಲ್ಲಿ. ನಿನ್ನ ಬಗ್ಗೆ ಅಪ್ಪ ಕಾರು ಕೊಂಡಾನೆ. ಸಭೆಗಿಭೆ ಎಂತ ಓಡಾಡಲಿಕ್ಕೆ. ನನಗೂ ಒಯ್ತೀಯಾ ಕಾರಲ್ಲಿ?

ಲೀಲಾ : ಇದೇನೂ ಅಂದ್ರೆ. ನಾನೇನೋ ತೋಡಿಕೊಳ್ಳೋದಿದೆ. (ಬಿಕ್ಕಿ ಲೈಲಾ ನೀನೆ ಹೇಳು.

ಗಂಡ : ಯಾರೂ ಏನೂ ಹೇಳಬೇಕಾಗಿಲ್ಲ. ಎಲ್ಲ ನಂಗೆ ಗೊತ್ತು. ಈ ಪತ್ರ ನೋಡು....

ಲೈಲಾ : ಲೀಲಾ; ಯಾವ ಪತ್ರ? ಯಾರ ಪತ್ರ?

ಗಂಡ : ಯಾರೋ ಪರೋಪಕಾರಿಗಳು ಬರೆದ ಬೇನಾಮಿ ಪತ್ರ. ಇದು ನಿನ್ನ ಕಥೆ ಎಲ್ಲ ಬಣ್ಣಿಸಿ ಬಣ್ಣಿಸಿ ಹೇಳಿದೆ. ನೀವೇನು ಮತ್ತ ಹೇಳಬಲ್ಲಿರಿ. ಹೂಂ ಈಗ ಹೊರಡಿ ಲೀಲಾ ನಿನ್ನ ಗೆಳತೀನೂ ಬರಲಿ.

ಲೀಲಾ : ಅಂದರೆ? ಈ ಪತ್ರ ಓದಿದ ಮೇಲೂ?

ಗಂಡ : ಓದಿದ ಮೇಲೆ ಇಕೋ ನಿನ್ನ ಎದುರಿಗೇ ಹರಿದು ಹಾಕ್ತೇನೆ ಯಾರು ಏನೇ ಹೇಳಲಿ ನೀನು ನನ್ನವಳಲ್ಲ. ನಾವಿಬ್ಬರೂ ಈ ಲಲ್ಲೂ ಸೊತ್ತು. ಯಾರು ಏನೇ ಮಾಡಲಿ, ಏನೇ ಆಡಲಿ, ಹೆಣ್ಣು ಕೆಡುವುದಿಲ್ಲ. ಕೆಡಲಾರಳು. ಈಗ ನಡೆ ಹೋಗೋಣ.

# ಮನೆತುಂಬ ಮಕ್ಕಳು

(ಬಾನುಲಿ ರೂಪಕ)

## ಪಾತ್ರ ಪರಿಚಯ

ಹಿರಿಯರು-

ಶ್ಯಾಮಣ್ಣ : ತಂದೆ
ಡಾ. ಭೀಮರಾವ್ : ಗೆಳೆಯ
ಕಾವೇರಮ್ಮ ; ತಾಯಿ

ಮಕ್ಕಳು-

ರಂಗ: ೧೪ ವರ್ಷ
ಗುಂಡ: ೭ ವರ್ಷ
ಪಲ್ಯ : ೩ ವರ್ಷ
ಚಂದ್ರಿ: ೧೨ ವರ್ಷ
ಗಂಗಿ : ೯ ವರ್ಷ
ಪುಟ್ಟಿ : ೧ ೧/೨ ವರ್ಷ
ಕಿಟ್ಟು, ಬಾಪೂ: ಬರೇ ಉಲ್ಲೇಖ

ಆಗಂತುಕರು-

ಕಂಡಕ್ಟರ, ಫೌಜದಾರ, ಬೀದಿಜನ ೧,೨

ಸದ್ದುಗಳು-

ಬಸ್‌ಸ್ಟ್ಯಾಂಡ್ ಧ್ವನಿಗಳು
ಬರಹೋಗುವ ಬಸ್ಸುಗಳ ಸದ್ದು
ಕಾರಿನ ಸದ್ದು, ಹಾರ್ನ್
ಸಿಲೋನ್ ರೇಡಿಯೊ 'ಜಗಹ ನಹೀಹೈ.....' ಇತ್ಯಾದಿ

ಚಂದ್ರಿಯ ಹಾಡು ಸಹಜ ಮನೆಯಲ್ಲಿ ಮೆಲುದನಿಯಲ್ಲಿ ಹಾಡಿದಂತೆ ಇರಬೇಕು. ಅದಕ್ಕೆ ವಾದ್ಯಮೇಳ ಬೇಡ.

೧

(ಬಸ್ ಸ್ಟಾಪ್. ಕಾದುನಿಂತ ಪ್ರವಾಸಿಗಳ ಗಲಾಟೆ. ಹಣ್ಣು ಚಾಕಲೇಟು ಸೋಡಾ ಐಸ್‌ಕ್ರಿಂ ಕ್ಯಾಂ ಮಾರುವವರ ಗದ್ದಲದ ಹಿನ್ನೆಲೆ. ಒಂದು ಬಸ್ಸು ಬಂದು ನಿಧಾನವಾಗಿ ಹೊರಟುಹೋಗುತ್ತದೆ. ನಿಲ್ಲದ 'ಹಾಂ, ತಡೀರಿ, ತಡೀರಿ! ಓ ಮಿಸ್ತರ ಕಂಟಕ್ಟರ ಸಾಬ್', 'ಎಲಾ ಈ ಮುಂಡೆಮಗಂಗೇನು ಸೊಕ 'ಹೋಗಲಿ ಬಿಡಿ, ಅಂವಾದರೂ ಏನ್ ಮಾಡ್ತಾನ್' 'ಬಸ್ಸಿನೊಳಗೆ ಜಡಿದು ತುಂಬಿದಾರ ಪ್ಯಾಸಂಜೆರು ಇತ್ಯಾದಿ ಸದ್ದುಗಳು.)

**ಹೆಂಡತಿ :** ಅಯ್ಯೋ! ನಮ್ಮ ಪ್ರಾರಬ್ಧ! ಬಸ್ಸು ಬಿಟ್ಟೇ ಹೋಯ್ತು. ಆ ಪಾ ಕಂಡಕ್ಟರ ನಿಲ್ಲಿಸಲೇ ಇಲ್ಲ! ಈಗೇನ್ ಮಾಡೋದು? ಈ ನಾಲ ಮಕ್ಕಳನ್ನು ಬೇರೆ ಕಟ್ಕೊಂಡು?

(ಹತ್ತಿರದ ಹಾಟೇಲಿನಿಂದ ಸಿಲೋನ ರೇಡಿಯೋ ದನಿ 'ಜಗ ನಹೀಹೈ.... ' ಇತ್ಯಾದಿ)

**ಗಂಡ :** ಕೇಳ್ತಿಯೇನೇ ಆಕಾಶವಾಣಿ? ಅದು ಆ ಕಂಡಕ್ಟರಂದೇ ಮಾ ತಿಳೀತೆ? ಆ ಬಸ್ಸಿನಲ್ಲಿ ನಮಗೆಲ್ಲಿ ಜಾಗ? ಕೊರಳಿಗೊಂದು ಸೊಂಟಕ್ಕೊಂದು, ಹಿಂದೊಂದು ಮುಂದೊಂದು!

**ಹೆಂಡತಿ :** ಸಾಕು ಬಿಡಿ, (ಪುಟ್ಟ ಅಳುತ್ತಾಳೆ) ಹಾಂ ಹಾಂ ಸುಮಕಿರು ನ ಪುಟಾಣಿ! ಪಾಪ, ಪುಟ್ಟಿ ನಿದ್ದೆಮಾಡ್ದೆ ಹಾಲಿಲ್ದೆ ಎಷ್ಟು ತಾ ಆಯ್ತೋ!

**ಗಂಡ :** ಮತ್ತೆ ಇಂವೇನು ಕಲಿ ಪುರುಷ. ನನ್ನ ಸೊಂಟ ಏರಿ ಕೂತಾ ಸ್ವಲ್ಪ ಸುಮ್ನಿರೊ. ಹಾಗೆ ಒದಿಬೇಡ ಏ ಪಲ್ಯಾ.

**ಪಲ್ಯ :** (ಚಂಡಿ ಬಂದಂತೆ) ಊಂ ಊಂ ಊಂ, ನಾ ಒಲ್ಲೆ. ನಂ ಜರಬತ್ತು, ನಂಗೆ ಜರಬತ್ತು!

**ಗಂಡ :** ಜರಬತ್ತು! ಎಲ್ಲಿ ಬಂತು ಜ್ವರ? ಬಾಯಿಮುಚ್ಚು. ಹಳೇ ಹು ಬಸ್ ಬಂತು. ಮನೆಗೆ ಹೋಗಿ ಮಲಗು ಜರ ಬಂದ್ರೆ. ಜರಬತ್ತಂ ಹೆಂ, ಕೇಳ್ದಿಯೇನೆ!

**ಹೆಂಡತಿ :** ಹಾಗಲ್ಲಾಂದ್ರೆ. ಅವಂಗೆ ಶರಬತ್ತು ಬೇಕಂತೆ.

**ಗಂಡ :** ಶರಬತ್ತೇ, ಮತ್ತೆ ಜರಬತ್ತು ಅಂತಾನೆ ಮಂಗ್ಯಾ.

**ಗುಂಡ :** ಅಪ್ಪಾ, ಅವಂಗೆ ಶ ಕಾರದ ಬದಲು ಜ ಕಾರವೇ ಬಾಯಿ ಬರೋದು.

ಗಂಡ : ನೀ ಚಕಾರ ಮಾತೆತ್ತ ಬೇಡ. ಅಪ್ಪಂಗೆ ಬುದ್ಧಿ ಹೇಳ್ತಾನೆ. ಮಂಗ್ಯಾನ ಮಗ ತಂದು.

ಹೆಂಡತಿ : (ನಗು ತಡೆಯದೆ) ಅಂದರೆ ಮಂಗ್ಯಾ ಯಾರು- ಅಂದೆ? ಪುಟ್ಟೀ?, ಹೊಂ ಅಳಬ್ಯಾಡ ಮರಿ. ಸಾಯಲಿ ಈ ಬಸ್ಸು ಎಷ್ಟು ಹೊತ್ತು ಕಾಯೋದು.

ಗಂಡ : ಅಲ್ನೋಡು. ನೀ ಕೈಹಿಡಿದು ನಿಂತ ಈ ಗಂಗಾ-ನಿಂತಲ್ಲೇ ತೂಕಡಿಸುತ್ತಾಳೆ, ಬಿದ್ದಗಿದ್ದಾಳು.

ಹೆಂಡತಿ : ಮತ್ತೆ ನಿಮ್ಮ ಪಲ್ಯಾ ಏನು? ಒದ್ದಾಡ್ತಾ ಇದ್ದಾನೆ ಟೊಂಕದ ಮೇಲೆ.

ಗಂಡ : ಏ ಸುಮ್ಕಿರೋ. (ದನಿ ಬದಲಿಸಿ) ನಿಂಗೆ ಶರಬತ್ತು ಕುಡಿಸ್ತೀನಿ. ಏ ಗಂಗಿ, ಕಣ್ಣ ತೆರೆ. ನಿಂಗೆ ಐಸ್ ಕ್ಯಾಂಡೀ.

ಗಂಗಿ : ಎಲ್ಲಿ ಎಲ್ಲಿ ಕ್ಯಾಂಡಿ? ನಂಗೆ ಕೊಡು, ಕೊಡು ನಂಗೆ.

ಹೆಂಡತಿ : ಏ ಓಡಬ್ಯಾಡ ಅಪ್ಪನ ಕಡೆ. ಅಕೋ ಮತ್ತೊಂದು ಬಸ್ಸು ಬಂತು. ಗುಂಡಾ ತಡಿ, ಅವನ್ ಹಿಡಿ-

ಗಂಡ : ನಿನ್ನ ಗುಂಡ ದೊಡ್ಡ ಪೈಲವಾನ-ಬಸ್ ಹಿಡಿದಿಡ್ತಾನ. ಈ ಬಸ್ಸು ನಿಲ್ಲಲೇ ಇಲ್ಲ.

ಹೆಂಡತಿ : ನಮ್ಮ ಅದೃಷ್ಟ.

ಗಂಡ : ಅದೃಷ್ಟ ಏನು ಬಂತೇ? ಈ ಇದ್ದಾರಲ್ಲ ಈ ನತದೃಷ್ಟರು. ನಾವಿಬ್ಬರೇ ಇದ್ದರೆ ಆ ಬಸ್ ನಮ್ಮನ್ನು ಬಿಟ್ಟುಹೋಗ್ತಿದ್ದಿಲ್ಲ. ಈ ಪಟಾಲಂ ಬೇರೆ.

ಹೆಂಡತಿ : ಸಾಕು ಸುಮ್ನಿರಿ. ನೀವೇ ಅವರಿಗೆ ಸರ್ಕಸ್ ತೋರಿಸ್ತಿನಿ ಎಂತ ಕರಕೊಂಡು ಬಂದ್ರಿ-ಮ್ಯಾಟನಿ ಶೋಗ.

ಗಂಡ : ಹೂ ತಂದೆ, - ತಂದೆ ಆದ ತಪ್ಪಿಗೆ. ಬೇರೆ ಏನಿದೆ ಅವರಿಗೆ ಮನರಂಜನೇ?

ಗುಂಡ : ಅಪ್ಪಾ ಕಾಲು ಸೋತು ಬಂದ್ವು.

ಗಂಗಿ : ಅಮ್ಮಾ ಮನಗೆ ಹೋಗ್ವಾ.

ಹೆಂಡತಿ : ಅದಕ್ಕೇ ನಿಂತೀವಿ ಬಸ್ ಕಾಯ್ತಾ.

ಹೆಂಡತಿ : ಅಲ್ಲೋ ಮೂಳಾ, ನಿಂತಲ್ಲೆ ಕಾಲು ಸೋತು ಬಂದ್ವು. ಅಂದಾಗ ಮನತನಕ ಹೇಗೆ ಹೋಗಾಂವ ನೀನು?

ಗುಂಡ : ಆ ಬೆಂಚಿನ ಮ್ಯಾಲ ಕೂಡ್ರೋಣ.

ಗಂಗಿ : ಹೂಂ ನಡಿ ಅಮ್ಮಾ ಅಲ್ಲಿ ಕೂತು ಐಸ್ ಕ್ಯಾಂಡೀ....

ಗಂಡ : ಎಲಾ ಇವಳಾ! ಮರೀಲೇ ಇಲ್ಲ ಕ್ಯಾಂಡಿ,

ಹೆಂಡತಿ : ಮರೆಯೋರು ನೀವು ನಿನ್ನೆ ನಮ್ಮ ಕಿಟ್ಟೂನ್ ಬಸ್ಸಿನಲ್ಲೇ ಬಿಟ್ಟು ಬಂದಿದ್ರಿ!

ಗಂಡ : ಇಲ್ಲೇ ಕೈಹಿಡಿದು ಬಂದಿದ್ನಲ್ಲಾ.

ಗುಂಡ : ಅಂವ ನೆರೆಮನೆ ದತ್ತೂ.

ಗಂಡ : (ಗಾಬರಿ) ಅಯ್ಯೋ! ಹಾಗಾದ್ರೆ ಕಿಟ್ಟು? ಬರಲಿಲ್ವೆ? ಪೋಲಿ ಸರಿಗಾದ್ರೂ...

ಹೆಂಡತಿ : ಸಾಕು ಸುಮ್ನಿರಿ. ಇದು ನಿನ್ನೆ ಸುದ್ದಿ. ಕಿಟ್ಟು ಹಿಂದಾಗಡೆ ಬಂದ ಮುಟ್ಟಿದಾ.

ಗಂಡ : ಮುಟ್ಟಿದ್ನೆss! ಆರಾಮ ಆತುಬಿಡು. ಆದರೆ ನಮ್ಮ ಬಸ್ಸು? ಇನ್ನೂ ಬಂದು ಮುಟ್ಟೇ ಇಲ್ಲಾ.

ಗಂಗಿ : ಅಮ್ಮಾ (ಅಳಲು ಆರಂಭ) ಕಾಲು ಸೋತವು. ಅಲ್ಲಿ ಹಾಟೇಲಿಗೆ ಹೋಗೋಣು.

ಗಂಡ : ಅಲ್ಲೇ ಸರ್ಕಸ್ ನೋಡಿಬಂದಿ ಮತ್ತೆ. ಅವರ್ಹಾಂಗೆ ಕಸರತ್ತು ಕಲೀಬೇಕು. ಆ ರಿಂಗಿನಾಗ ಹೆಣಮಕ್ಳು ಒಂಟಿ ಕಾಲ ಮೇಲೆ ಏನೆಲ್ಲ ಮಾಡಿ ಕಾಣಸ್ತಾರ!

ಗಂಗಿ : ಅಪಾ, ಅಪಾ! ನಾ ಸರ್ಕಸ್ ಸೇರ್ತೀನಿ-ಬರೋ ಮೇ ಸೂಟ್ಯಾಗ.

ಗಂಡ : (ದೊಡ್ಡ ಶ್ವಾಸ) ಸದ್ಯಕ್ಕಿಲ್ಲವಲ್ಲೋ! ಆಯ್ತು ಹಾಂಗಾರ.

ಹೆಂಡತಿ : ಸದ್ಯ ಇಕೊ ಬಸ್ ಬಂತು.

(ಬಸ್ಸು ನಿಲ್ಲುವ ಸದ್ದು)

ಗಂಡ : ಬಂದೇ ಬಿಡ್ತು . ಬನ್ನಿ ಮಕ್ಕಳೇ. ಮನೆಗೆ ಹೋಗ್ವಾ.

**ಂಡಕ್ಟರ :** ಹಾಂ ತಡೀರಿ, ತಡೀರಿ. ನುಗ್ಗಬೇಡ್ರಿ. ಜನಾ ಇಳೀಲಿ. ಹಾಂ ಇಳೀರಿ ಕೆಳಗೆ. ಇನ್ನೂ ಯಾರಾದರೂ ಇದ್ರೆ ಹತ್ತಿ. ಇಬ್ಬರಿಗೇ ಜಾಗ ಐತಿ. ಐ ಇಳೀ ಕೆಳಗೆ. ಇಬ್ರಂದೆ ಇಬ್ರು! (ಗದರಿಸುತ್ತಾನೆ)

**ಂಡ :** ಅಲ್ರೀ ಕಂಡಕ್ಟರ ಸಾಬ್ರೆ! ನಾವು ಈ ನಮ್ಮ ಮಕ್ಕಳನ್ನು ಬಿಟ್ಟು ಹ್ಯಾಂಗ ಹತ್ತೋದ್ರಿ?

**ಂಡಕ್ಟರ :** (ಅಣಕಿಸುತ್ತ) ಅಲ್ರಿ ರಾಯರೇ, ಮತ್ತೆ ಈ ಮಕ್ಕಳನ್ನು ಕಟ್ಕೊಂಡು ಯಾಕೆ ತಿರುಗಾಡಬೇಕ್ರಿ? ಬಸ್ ಫುಲ್. ಹಿಂದಾಗಡೆ ಬನ್ನಿ. ಕ್ಷಮಿಸಿ.

(ಗಂಟೆ ಬಾರಿಸುತ್ತಾನೆ. ಬಸ್ ಹೊರಡುತ್ತದೆ.)

**ಂಡತಿ :** ನಮ್ಮ ಪ್ರಾರಬ್ಧ! ನಾವು ಮನೆ ಬಿಟ್ಟ ಮುಹೂರ್ತಾನೇ ಕೆಟ್ಟಿರಬೇಕು.

**ಂಡ :** ಅಲ್ಲೇ ಹುಚ್ಚಿ, ಹಾಂಗ ನಾವು ರಾಹುಕಾಲ ತಪ್ಪಿಸಿಕೊಂಡೇ ಹೊರಟಿದ್ವಿ. ಇರಲಿಬಿಡು. ಆದದ್ದಾಯ್ತು. ನಾ ಒಂದು ಹೇಳಲೇ? ನಾವು ಮನೆ ಬಿಟ್ಟದ್ದಲ್ಲ, ನೀ ತವರಮನೆ ಬಿಟ್ಟ ಮುಹೂರ್ತಾನೇ ತಪ್ಪಿತ್ತು.

**ಂಡತಿ :** ಅಂದ್ರೆ, ಇದೇನು ಕೆಟ್ಟ ಮಾತು (ಬಿಕ್ಕು).

**ಂಡ :** ಛೀ ಛೀ ಅಳಬ್ಯಾಡ ಮತ್ತೆ. ಕಣ್ಣ ಒರ್ಸಕೊ. ಬರೆ ತಮಾಷೆ ಮಾಡ್ದೆ, ಇಲ್ಲಿ ನೋಡು. ನಮ್ಮ ಮದುವೆ ಆಗದಿದ್ದರ ಈ ಮಕ್ಕಳು ಹುಟ್ಟುತಿದ್ವೆ? ಈ ಮಕ್ಕಳಿಂದಲ್ವೆ ನಮಗೀಗ ಬಸ್ ತಪ್ಪಿದ್ದು.

**ಂಡತಿ :** ಸಾಕು ಸುಮ್ನಿರಿ. ಈ ಮದುವೆ ಏನು? ನೀವು ಯಾರನ್ನೇ ಮದುವೆ ಆದ್ರೂ ಈ ಮಕ್ಕಳ ಕಾಟ ತಾಳಿ ಕರಿಮಣಿಗಳ ಹಾಂಗೇ ಕೊರಳಿಗೆ ಬರೂದೆ!

**ಂಡ :** (ನಕ್ಕು) ಇದು ಸರಿ ಅಂದಿ ನೋಡು. ಶಾಣೆ ಮಾತು. ಈ ಮಕ್ಕಳನ್ನ ನೋಡು. ಎಲ್ಲ ಕರಿ ಕರಿ ಮಣಿಗಳೇ.

**ಂಡತಿ :** ಇರ್ಲಿಬಿಡಿ. ಬಸ್ಸಂತೂ ಹೋತು. ಈಗ ಮಕ್ಕಳಿಗೆ-

**ಂಡ :** ಹೂಂ ಬನ್ನಿ ಮಕ್ಕಳೇ. ಹೋಟೀಲಿಗೆ ಹೋಗಿ ಉಂಡಿನೋ ಕ್ಯಾಂಡಿನೋ ಶರಬತ್ತೋ ತಕೊಳ್ಳನ ಆಮೇಲೆ ನಡಕೊಂಡೆ ಹಾದಿ ಹಿಡಿಯೋಣು ನಡಿ ಗಂಗಿ, ನಡಿ ಗುಂಡ.

**ಂಗಿ, ಗುಂಡ :** ರೈಟ್ ಲೆಫ್ಟ, ರೈಟ್ ಲೆಫ್ಟ ತಿಂಡಿಕ್ಯಾಂಡಿ. (ಕೇಕೆ ಹಾಕ್ತಾ) ಥಂಡಾ ಶರ್ಬತ್‌ರೇ.

ಹೆಂಡತಿ : ಸುಮ್ಮನಿರ್ರಿ, ಏನ್ ಕೂಗ್ತೀರಿ! ಅಲ್ರೀ ಇವರದಂತೂ ಆತು. ನಾ
ನಿಧಾನವಾಗಿ ನಡಕೊಂಡು ಹೋಗೋತನಕ ಅಲ್ಲಿ ರಂಗ, ಚಂ
ಶಾಲೆಯಿಂದ ಬಂದು ಕಾದಿರ್ತಾರೆ. ಪಾಪ! ಅವರ ಹೊಟ್ಟೆಗೆ
ಹೊರ್ಗೇ ಕಾದಿರ್ತಾರೆ.

ಗಂಡ : ಕಾದಿರ್ಲಿ. ಕಾದಾಡ್ತಾ ಇರ್ಲಿ, ಸದ್ಯ ಅವರ ಚಿಂತಿ ಬ್ಯಾಡ. ದಾಸ
ಹೇಳ್ಯಾರ ಅದೇನೋ ಗುಂಡ!? -ಪುಟ್ಟಿಸಿದ ಸ್ವಾಮಿ-

ಗುಂಡ : ಅಪ್ಪಾ ನಂಗೆ ಬರ್ತದ ಆ ಪದ, ಚಂದ್ರಿ ಕಲಸ್ಯಾಳ. ನಾ ಹೇಳ್

(ದೊಡ್ಡ ದನಿ ತೆಗೆದು ಸರಾಗವಾಗಿ)
"ಪುಟ್ಟಸಿದ ಸ್ವಾಮಿ ತಾ ಹೊಣೆಗಾರನಾಗಿರಲು

ಮತ್ತೆ ರಕ್ಷಿಪನಿದಕೆ ಸಂದೇಹ ಬ್ಯಾಡಾ".

ಹೆಂಡತಿ : ಏ ಮೂಳಾ ಮುಚ್ಚು ಬಾಯಿ. ಯಾರಾದರೂ ಕೈಗೆ ಕಾಸು ಇಟ್ಟಾ
ಬಸ್ ಸ್ಟ್ಯಾಂಡಿನಲ್ಲಿ ಪದಾ ಹಾಡ್ತಾ ಬಿಕ್ಕೆ ಬೇಡೋಂವಾ ಅಂ

ಗಂಡ : ಇರಲಿ ಬಿಡು. ಆದ್ರೆ ಇಲ್ಲಿ ಈ ಮಕ್ಕಳ ರಕ್ಷಣೆ ಚಿಂತೆ ನಂ
ಇವರ ಪುಟ್ಟಸಿದವ ಆ ಸ್ವಾಮಿ ಅಲ್ಲ, ಈ ಆಸಾಮಿ ಅಲ್ವೇ
ಯಜಮಾನಿ?

ಹೆಂಡತಿ : (ನಾಚಿ ನಕ್ಕು) ಇಶ್ಶಿ ಇದೇನು? ಭಂಡ ಮಾತು ಬಸ್ ಸ್ಟಾಂಡಿನಾಗ
ಸುಮ್ನಿರಿ. ಹೊಟೆಲ್ ಬ್ಯಾಡ. ಮನಿಗೇ ನಡೀರಿ ಮಕ್ಕಳ ರಕ್
ಚಿಂತೆ ಹೊತ್ತಾವರು ನೀವು!

ಗಂಡ : ಆಯ್ತು ಮ್ಹಾರಾಯ್ತಿ! ಅಕಾ ಆ ಮುಂದಿನ ಸ್ಟಾಪಿಗೆ ಹೋಗೋ
ಅಲ್ಲಾದರೂ ನಮ್ಮ ಅದೃಷ್ಟ ನಿನ್ನ ಪ್ರಾರಬ್ಧ ಖುಲಾಯಿಸ್ತದೋ
ಬನ್ನ ಮಕ್ಕಳೇ.

(ಮಕ್ಕಳ ಗೊಣಗಾಟ, ಕಿರುಚಾಟ, 'ನಾ ಒಲ್ಲೆ', 'ನಂಗೆ ಕ್ಯಾಂ
'ಶರ ಬತ್ತು', 'ನಾ ನಡೆಯೊಲ್ಲಾ'-ಇತ್ಯಾದಿ)

ಹೆಂಡತಿ : ಹೂಂ ನಡೀರಿ ಮಕ್ಕಳೆ, ಶಾಣೆ ಮಕ್ಕಳು. ಅಲ್ಲದೆ ಹಾಟೀ
ಇದಕೂ ದೊಡ್ಡದು. ಅಲ್ಲೇ ತಿನಿಸೋಣ, ಕುಡಿಸೋಣ. ಬ
ಸಿಗಭೌದು. ನಡೆಯೋದು ತಪ್ಪೀತು. ಒಂದು ಚಾನ್ಸು...

(ಹಿಂದಿನಿಂದ ಒಂದು ಕಾರು ಬಂದು ಅವರ ಬಳಿ ನಿಲ್ಲುವ ಸದ

ಾರಿನಿಂದ ದನಿ : ಯಾರು, ಶಾಮಣ್ಣೋರೇ? ಮತ್ತೆ ಕಾವೇರಮ್ಮ? ಬನ್ನಿ. ಅರೇ ಗಂಗಾ ತುಂಗಾ ಗುಂಡಾ ಪುಂಡಾ-ಎಲ್ಲ ಇದಾರಲ್ಲ. ಎಲ್ಲಿಗೆ ಹೊರಟಿತ್ತು ನಿಮ್ಮ ಸರ್ಕಸ್ಸು?

ುಂಡ-ಗಂಗಿ : ಸರ್ಕಸ್ ನೋಡಲಿಕ್ಕೆ. ನೋಡಿ ಬಂದ್ವಿ.

ಾಮಣ್ಣ : ನಮಸ್ಕಾರ ಡಾ. ಭೀಮರಾವ್.

ಾವೇರಮ್ಮ : ನಮಸ್ತೆ ಡಾಕ್ಟರ್ರೇ, ಉಪಕಾರ ಆಯ್ತು. ಗಂಟೆಗಟ್ಲೆ ಬಸ್ಸಿಗಾಗಿ ಕಾದು ಕಾದು ಕೈಕಾಲೇ ಹೋದ್ವು.

ಾಮಣ್ಣ: ಈ ಮಕ್ಕಳ ಕಾಟ ಬೇರೆ!

ಾಕ್ಟರ : ಅದನ್ನೇನು ಹೇಳ್ತೀರಿ? ಯಾರಿಗೆ ಹೇಳ್ತೀರಿ. ಮಕ್ಕಳು ಆಗೋ ಮೊದಲು ಆಟ, ಆದಮೇಲೆ ಕಾಟ (ಎಲ್ಲರ ನಗು)

ಾಮಣ್ಣ : ಏ ಮಕ್ಕಳೆ ಗದ್ಲ ಮಾಡಬೇಡಿ ಸರಿಯಾಗಿ ಕೂಡ್ರಿ. ನುಗ್ಗ ಬೇಡ್ರಿ. ಯಜಮಾನಿ ಹೂಂ ನಿಂತಿ ಏನು. ನೀ ಮುಂದಾಗು.

ಾವೇರಮ್ಮ : ನಾ ಒಲ್ಲೆ, ನೀವೇ ಮುಂದಾಗಿ.

ಾಕ್ಟರ : ಇಬ್ಬರೂ ಕೂಡೇ ಒಳ ನುಗ್ಗಿ (ನಗು) ಇಲ್ಲವಾದ್ರೆ ಇಬ್ಬರೂ ನಡಕೊಂಡು ಬನ್ನಿ. ನಾ ಹೊರಟೆ. ಈ ಮಕ್ಕಳ ಲಗೇಜು ಹೊತ್ಕೊಂಡು. ಏ ಗುಂಡಾ, ಗಂಗಿ ಬನ್ನಿ ಮುಂದೆ.

(ಮಕ್ಕಳ ಗಲಾಟೆ-'ನಾ ಮುಂದೆ', 'ನಾ ಮುಂದೆ' ಕೇಕೆ)

ಾವೇರಮ್ಮ : ಇಲ್ಲಿ ತನ್ನಿ ಪಲ್ಯಾನ.

ಾಕ್ಟರ : ಪಲ್ಯಾ, ಪಲ್ಯಾ ಬೇರೆ ಕಟ್ಕೊಂಡು ಬಂದ್ರೇನು ಹೋಟೆಲಿನಿಂದ-ರಾತ್ರಿ ಊಟಕ್ಕೆ?

ಾಮಣ್ಣ : (ನಗು) ಅಲ್ರೀ, ನಮ್ಮ ಪಲ್ಯಾ ಈ ಆರನೆ....

ಾವೇರಮ್ಮ : ಅಲ್ರೀ, ಐದನೆಯವ.

ಾಕ್ಟರ: (ಗಟ್ಟಿಯಾಗಿ ನಕ್ಕು) ಏನ್ರೀ, ತಮ್ಮ ಮಕ್ಕಳ ಸಂಖ್ಯಾ ಗೊತ್ತಿಲ್ಲ!

ಾಮಣ್ಣ : ಅದೇನಂತೀರಿ ಡಾಕ್ಟರ್ರೇ! ಬಡವರ ಮಕ್ಕಳ ಲೆಕ್ಕ ಆ ಚಿತ್ರಗುಪ್ತನಿಗೂ ಸಿಕ್ಕಾ!

ಡಾಕ್ಟರ : ಇರ್ಲಿ ಬಿಡಿ. ಸರಿಯಾಗಿ ಕೂತ್ರಾ, ರ್‍ಯಾಟ. ಏ ಗಂಗೀ ಸ್ವಿ
ಮುಟ್ಟಬೇಡ. ಎಲೇ ಗುಂಡಾ ಸ್ಟೇರಿಂಗ್ ನನಗಿರಲಿ ಗುಂ
ಹಾಂಗೆ ಕೂತಿರು. ಓ.ಕೇ.

ಕಾವೇರಮ್ಮ : ಬ್ಹಾಳ ಉಪಕಾರ ಆತ್ರಿ, ಇವರನ್ನೆಲ್ಲ ಕಟ್ಟಿಕೊಂಡ ನಡೆ
ಹೋಗೋದು. ಜೀವಕ್ಕೇ ಬಂದಿತ್ತು.

ಡಾಕ್ಟರ : (ಗಾಡಿ ಚಾಲೂ ಮಾಡಿ) ಉಪಕಾರ ಏನು ಬಂತು? ನಿಮ್ಮ
ಹಾದೀಲೇ ಹೊರಟವ ನಾನು ನೀವೂ ನಮ್ಮ ಪೇಶೆಂಟು. ನಿ
ಮನೆ ಮುಂದೆ ಇಳಿಸಿ ಹೋಗ್ತೇನೆ ಆತು.

(ಗಾಡಿ ಹೊರಡುತ್ತದೆ).

ಗುಂಡಾ : ಡಾಕ್ಟರ ಮಾಮಾ, ಹಾರ್ನು ಮಾಡ್ರೀ.

ಡಾಕ್ಟರ : ಎಲಾ ಚೋಟೀ (ಹಾರ್ನು ಮಾಡ್ತಾನೆ)

ಕಾವೇರಮ್ಮ : ಪೇಶಂಟ ಅಂದ್ಹಾಂಗ.. ಸಂಜೆಗಡೆ ನಮ್ಮ ಮನೆಗೊಮ್ಮೆ ಬಂ
ಹೋಗಿ-ಮತ್ತೇನಿಲ್ಲ ಕಾಫಿಗೆ.

ಡಾಕ್ಟರ : ಬರೇ ಕಾಫೀ ಒಂದೇ ಅಲ್ಲ, ವಿಜಿಟ ಫೀನೂ ಬೇಕು.

ಶಾಮಣ್ಣ : ಹೌದು ಭೀಮರಾವ್. ನಮ್ಮ ಕಾವೇರಿ ಅದೇಕೊ ಇತ್ತಲಾಗಿ ಬ
ನಿಶ್ಶಕ್ತಿ ಅಂತಾಳ. ಬಂದು ಒಮ್ಮೆ ಅವಳನ್ನು ತಪಾಸ ಮಾಡಿ
ನೆಟ್ಟಗಿತ್ತು.

ಡಾಕ್ಟರ : ಆಲ್‌ರೈಟ. ಸಂಜೆಗೆ ನೋಡೋಣ. (ಕಾರು ವೇಗದಿ
ಓಡುವುದು).

೨

(ಸಂಜೆ ಶಾಮಣ್ಣನ ಮನೆಯಲ್ಲಿ ಮಕ್ಕಳ ಭಜನೆ ನಡೆದಿದೆ. 'ರಘುಪತಿ ರಾಘವ ರಾಜಾರಾ
ಪತಿತ ಪಾವನ ಸೀತಾರಾಮ।)

ಕಾವೇರಮ್ಮ : ಮಕ್ಕಳೆ ಇನ್ನು ಸಾಕು ನಿಮ್ಮ ಭಜನೆ. ಹೂಂ ಬೇಗ ಮು
(ಅವರು (ಜೋರಾಗಿ ಹಾಗೆಯೇ ಅದ
ಮುಂದುವರಿಸುತ್ತಾರೆ)ಈಶ್ವರ ಅಲ್ಲಾ ತೇರೇನಾಮ। ಸಬ
ಸಂತತಿ ದೇ ಭಗವಾನ್)

("ಈಶ್ವರ ಅಲ್ಲಾ ತೇರೇನಾಮ। ಸಬಕೊ ಸಂತತಿ ದೇ ಭಗವಾನ್")

ಾಮಣ್ಣ : (ನುಗ್ಗಿ ಬಂದು) ಲೇ, ಲೇ! ಏ ಮುತ್ಠಾಳರೇ, ಇದೇನು ಹಲಬುತ್ತೀರಿ? ಇದೇನು ಭಜನೆಯೋ, ಅಧ್ವಾನವೋ? ಬಾಯಿ ಮುಚ್ಚಿ. ಲೇ ನೀನೂ ಕೇಳ್ತಾ ನಿಂತು ಬಿಟ್ಟಿದ್ದಿಯೇನೇ?

ಾವೇರಮ್ಮ : ಮಕ್ಕಳು ಮುದ್ದಾಗಿ ಹಾಡ್ತಾರೆ!

ಾಮಣ್ಣ : ಏನು ಹಾಡ್ತಾರೇ ಸರಿ ಕೇಳೋದಿಲ್ವೇ? ನಿನ್ನ ಕಿವೀನೂ ನಿಶ್ಯಕ್ತ ಆಗಿರಬೇಕು "ಸಬಕೋ 'ಸಂತತಿ'ದೇ ಭಗವಾನ್" ಅಂತಿದ್ದಾರಲ್ವೇ!

ರಂಗ, ಗಂಗಾ: ಮತ್ತೇನು ಸಾಬಕೋ ಸಂತತಿ ಅನ್ನಬೇಕೇ? ಹಾಗೇ ಅಂತಿದ್ದೆ. ಅಮ್ಮನೇ 'ಸಬಕೊ' ಅಂತ ಕಲಿಸಿದರು.

ಶಾಮಣ್ಣ: ಮುಗ್ದೇ ಹೋಯ್ತು! ನಮಗೆ ಸಂತತಿ ಆದದ್ದೇ ರಗಡ ಆಯ್ತು. ಇನ್ನು ಆ ಸಾಬನಿಗೂ ಈ ಶಾಪ ಬೇಡ. 'ಸಂತತಿ' ಅಲ್ರೋ, 'ಸನ್ಮತಿ'

ಗುಂಡ : 'ಸಣ್ಮತಿ' ಅಂದ್ರೆ ಸಣ್ಣ ಬುದ್ದಿಯೇ ಅಪ್ಪಾ?

ಕಾವೇರಮ್ಮ : (ನಕ್ಕು) ಅಲ್ಲ ಮರಿ, ಸನ್ಮತಿ ಅಂದರೆ ಒಳ್ಳೆ ಬುದ್ದಿ. ಸಂತತಿ ಅಲ್ಲ ಕಣ್ರೋ, ಸಣ್ಮತಿನೂ ಅಲ್ಲ. ನಾ ಹೇಳ್ತೇನೆ ಜತೇಲೆ ಕೇಳಿ ಹೇಳ್ರಿ. (ಅವಳು 'ರಾಮಧುನ' ಸರಿಯಾಗಿ ಹೇಳಿ ಹಾಡಿಸುತ್ತಾಳೆ.)

(ಡಾ. ಭೀಮರಾವ್ ಪ್ರವೇಶ)

ಡಾಕ್ಟರ : ಏನ್ ಚೆಂದ. ಏನ್ ಇಂಪು! ಮನೆಯಲ್ಲೇ ಸೊಗಸಾದ ಬಾಲವಾಡಿ!

ಕಾವೇರಮ್ಮ : ಅರೆ ಡಾಕ್ಟರು ಬಂದೇ ಬಿಟ್ಟರು. ಬಂದದ್ದೇ ಗೊತ್ತಾಗಲಿಲ್ಲ ಸಾರಿ

ಡಾಕ್ಟರ : ಬಂದ ಬಗ್ಗೆ ಸಾರೀನೋ! (ನಕ್ಕು) ನಿಮ್ಮ ಭಜನೆ ಬ್ರಹ್ಮಾನಂದದಲ್ಲಿ ನಮ್ಮ ಕಾರಿನ ಸದ್ದು ಎಲ್ಲಿ ಕೇಳಿಸ ಬೇಕು? ನಡೀಲಿ, ನಡೀಲಿ. ಕೈಲಾಸಂ ಅಂದಿದ್ರು ಮಕ್ಕಳ ಶಾಲೆ ಮನೇಲೆ-ಎಂತ.

ಶಾಮಣ್ಣ : ಸರಿ ಹೋಯ್ತು. ಅದಕ್ಕಾಗಿ ಒಂದು ಶಾಲೆಗೆ ಆಗುವಷ್ಟು ಮನೆತುಂಬ ಮಕ್ಕಳ ಹಡೆದರಾಯಿತು.

ಕಾವೇರಮ್ಮ : ಇನ್ನು ಭಜನೆ ಸಾಕು ಹೋಗಿ ಮಕ್ಕಳೆ, ಹೊರಗೆ ಆಡಿ.

(ದೊಡ್ಡ ಮಕ್ಕಳು 'ಗುಡ್ ಈವ್ಹನಿಂಗ್ ಡಾಕ್ಟರ ಮಾಮಾ!' ಎಂದು ಹೇಳಿ ಹೊರಡುತ್ತಾರೆ.)

ಡಾಕ್ಟರ : ಗುಡ್ ಈವ್ಹನಿಂಗ ರಂಗs!

ರಂಗ : ವ್ಹೆರಿ ಗುಡ್ ಈವ್ಹನಿಂಗ

ಗುಂಡ : ವ್ಹೆರಿ ವ್ಹೆರಿ ಗುಡ್ ಈವ್ಹನಿಂಗ.

ಡಾಕ್ಟರ : ಮತ್ತೆ ನೀನೆ ಗಂಗೀ-ವ್ಹೆರಿ ವ್ಹೆರಿ ವ್ಹೆರಿ?

ಕಾವೇರಮ್ಮ : ನಮ್ಮ ಗಂಗೀ ಇನ್ನೂ ಕಾನ್‌ವ್ಹೆಂಟ್ ಕಟ್ಟೆ ಹತ್ತಿಲ್ಲ. ರಂಗ ಹೋಗ್ತಾನೆ ಕಾನ್‌ವ್ಹೆಂಟಿಗೆ. ಅಲ್ಲಿ ಎಲ್ಲಾ ಇಂಗ್ಲೀಷೆ.

ಡಾಕ್ಟರ : ಹೌದೆ? ಹಾಗಾದ್ರೆ ಹೇಳು ರಂಗ ನಿಂಗೆ ಇಂಗ್ಲೀಷ ಮಾತಾಡಲು ಬರ್ತದೇನೋ?

ರಂಗ : (ನಾಚಿ) ಸ್ವಲ್ಪ ಸ್ವಲ್ಪ ಬರ್ತದೆ.

ಶಾಮಣ್ಣ : ಹಾಂಗಾದರೆ ಅದನ್ನೇ ಹೇಳು ಮತ್ತೆ ಇಂಗ್ಲೀಷಿನಲ್ಲೇ! ಹೂಂ

ರಂಗ : ಲಿಟ್ಲ ಲಿಟ್ಲ ಇಂಗ್ಲಿಷ ಕಂ ಟು ಮಿ!

ಕಾವೇರಮ್ಮ : ಏ ಮಳ್ಳಾ, 'ಕಂ' ಅಲ್ಲ, 'ಕಮಿಂಗ್' ಅನ್ನು.

ಡಾಕ್ಟರ : ಓ ಗಾಡ್! ಇದು ನಮ್ಮ ಮಕ್ಕಳ ಇಂಗ್ಲೀಷು ಶ್ಯಾಮಣ್ಣ. ನಾ ಹೇಳ್ತೀನಿ. ಬ್ರಿಟಿಷರು ಸ್ವರಾಜ್ಯ ಕೊಟ್ಟು ದೇಶ ಬಿಟ್ಟು ಹೋದದ್ದು ನಮ್ಮ ಮಕ್ಕಳ ಇಂಗ್ಲಿಷಿಗೆ ಹೆದರಿಕೊಂಡೇ! (ಎಲ್ಲರೂ ನಗುತ್ತಾರೆ.)

ಶಾಮಣ್ಣ : ಇನ್ನು ಮಕ್ಕಳೇ ಹೊರಗೆ ಓಡಿ ಆಡಿ.

ಕಾವೇರಮ್ಮ : ಡಾಕ್ಟರ, ಈ ಮಕ್ಕಳನ್ನು ಒಮ್ಮೆ ಪರೀಕ್ಷಿಸ್ತೀರಾ?

ಡಾಕ್ಟರ : ಓ ಅದೇನು ದೊಡ್ಡ ಮಾತು? ಆದರೆ ವ್ಹಾಟ ಈಜ ರಾಂಗ?

ಶಾಮಣ್ಣ : ರಾಂಗೇನು, ಬಹಳ ಮಕ್ಕಳಾಗಿದ್ದೇ ರಾಂಗ-ಅನ್ನೋರು ನೀವು! ಒಬ್ಬನಿಗೆ ಉಚ್ಚಾರ ಚಲೋ ಇಲ್ಲ, ಒಬ್ಬನಿಗೆ ಲಿವ್ಹರ ಕೆಟ್ಟಿದೆ. ಪುಟ್ಟೂಗೆ ರಿಕೆಟ್ಸ.

ಡಾಕ್ಟರ : ಅಲ್ವೆ ಮತ್ತೆ ಕರೀರಿ ಅವರನ್ನು.

ಶಾಮಣ್ಣ : ಏ ರಂಗಾ, ಗುಂಡಾ, ಗಂಗೀ ಪಲ್ಯಾ, ಪುಟ್ಟೀ

ವೇರಮ್ಮ : ಪುಟ್ಟ ಬರ್‍ತಾಳೆ, ಆ ಮಗು ತೊಟ್ಟಿಲಲ್ಲಿದೆ.

ಮಣ್ಣ : ಉಳಿದವರೆಲ್ಲ ಬನ್ನಿ.

ವೇರಮ್ಮ : ಅಂದರೆ ನಮ್ಮ ಮಕ್ಕಳು ಇಷ್ಟೇನಾ? ಚಂದ್ರಿ ಇದಾಳೆ, ಕಿಟ್ಟೂ ಇದ್ದಾನೆ ಬಾಪೂ.

ಮಣ್ಣ : ಹಾಂ ಹಾಂ ಬಾಪೂ ಗೋಖಲೆ ಟಿಳಕ ಲಾಲ ಪಾಲ ಘೋಷ (ಗಂಡಸರ ನಗು)

ವೇವಮ್ಮ : ಸಾಕು ಬಿಡಿ ನಿಮ್ಮ ಹಾಸ್ಯ.

ಾಕ್ಟರ : ಅಲ್ಲಾ ಶ್ಯಾಮಣ್ಣಾ, ಇದೆಂಥಾ ಮರೆವೋ, ಹೆತ್ತ ಮಕ್ಕಳ ತಂದೆಯಾಗಿ

ಾಮಣ್ಣ : ಹೆತ್ತವಳು ಅವಳು. ನಾನಲ್ಲ, ನಂಗೆ ಸಂಸಾರ ತಾಪತ್ರಯ. ಹೆತ್ತವಳಿಗೇ ಗೊತ್ತಿರಬೇಕು ಮಕ್ಕಳ ಲೆಕ್ಕ.

ಾಕ್ಟರ : ನಮ್ಮ ಕವಿವರ್ಯರೇ ಹೇಳಿಲ್ವೇ-'ನಾ ಹೆತ್ತ ಡಿಂಭಗಳ ಲೆಕ್ಕ, ಯಮಾ ನೋಡಿ ನಕ್ಕ' (ನಗುತ್ತಾನೆ)

ಾಮಣ್ಣ: ಅದು ಹಳೇ ಕತೆ ಆಯ್ತು. ಇಂದು ಯಮಾ ಅಳ್ತಾನ. ಯಮನ ಲೋಕದಲ್ಲಿ ನಮ್ಮ ಸತ್ತವರ ಗರ್ದಿ ವಿಪರೀತ. ಅಲ್ಲಿ ಹೊಸ ಬಡಾವಣೆ ಕಟ್ಟಲಿಕ್ಕೆ ಹೇಳ್ಯಾನಂತ ವಿಶ್ವಕರ್ಮಂಗ!

ಾವೇರಮ್ಮ : ಡಾಕ್ಟರೇ, ಕೇಳಿ ಕೇಳಿ ನಮ್ಮವರ ಮಾತು. ನೀವಾರೆ ತುಸು ಬುದ್ಧಿ ಹೇಳ್ರಿ....

ಡಾಕ್ಟರ : ಬುದ್ಧಿ ಹೇಳಿ ಬರೋದಲ್ಲ. ಅದು ಹುಟ್ಟಾ ಬರಬೇಕು.

ಕಾವೇರಮ್ಮ : ಹಾಗಂದ್ರೆ. ಇವರು ಮತ್ತೆ ಹುಟ್ಯೇ ಬರಬೇಕಾತು.

ಶಾಮಣ್ಣ : ಹೂಂ ನಿಂದೆ ಹೊಟ್ಯಾಗ ಬರ್‍ತೇನೆ. (ಎಲ್ಲರೂ ನಗುತ್ತಾರೆ).

ಕಾವೇರಮ್ಮ : ಇಶ್ಯs ಇದೇನು ಭಂಡಮಾತು!

ಡಾಕ್ಟರ : ಭಂಡ ಗಿಂಡ-ಏನೂ ಅಲ್ಲ, ಕಾವೇರಮ್ಮ! ಶಾಮಣ್ಣ ಅಂದದ್ದು ಖರೇನೆ. ಮದುವೀ ಮಂತ್ರದಾಗೆs ಆ ಮಾತು ಇದೆ. ನಿಮಗೆ ಮರತೇ ಹೋತೇನೊ.

ಶಾಮಣ್ಣ : ಮದವಿ ಆದದಷ್ಟೇ ನಮಗೆ ನೆನಪಿದೆ. ಅಲ್ದೆ ಮದವೀಲಿ ಮಂತ್ರ ತಂತ್ರ ಎಲ್ಲ ಯಾರಿಗೆ ಗೊತ್ತಿರ್ತಾವ? ಅವೆಲ್ಲ ಎರಡು ಕಡೆ ಭಟ್ಟರ ಬಾಯಲ್ಲೇ ವಟಗುಡ್ತಿರುತಾವ. ವಧೂವರರು ನಾವು ಬರೆ ಮಾಲಿ ಹಾಕ್ಕಳ್ತೀವಿ-ಹೋಮದ ಹೊಗೆಯಲ್ಲಿ ಕಣ್ಣು ಮುಚ್ಕೊಂಡು.

ಡಾಕ್ಟರ : ಹೌದು ಬಿಡು, ಅದು ಇನ್ನೊಂದು ಅವಾಂತರ. ನಮ್ಮ ಮದವಿ ಎಲ್ಲ ನಿಜಾನೂ ಭಟ್ಟ ಭಟ್ರ ನಡುವೇನೇ ನಡೆದು ಹೋಗ್ತದೆ-

ಕಾವೇರಮ್ಮ : ಇದಿರ್ಲಿ ಬಿಡಿ. ಆ ಮಂತ್ರ ಆದರೂ ಏನು?

ಡಾಕ್ಟರ : ವಧೂಗೆ ಇಂದ್ರ ಹೇಳ್ತಾನೆ-"ಪತಿಂ ಏಕಾಶಂ ಕೃಧಿ"

ಕಾವೇರಮ್ಮ : ಹಾಗಂದ್ರೆ?

ಶಾಮಣ್ಣ : ಹತ್ತು ಮಕ್ಕಳನ್ನು ಹಡದು ಗಂಡನನ್ನೇ ಹನ್ನೊಂದನೇ ಮಗಾ ಎಂತ ತಿಳಿ.

ಕಾವೇರಮ್ಮ : ಈ ಮಾತು ಖರೇನ? ಹತ್ತು ಮಕ್ಕಳು ಆಗೋತನಕ ನಮ್ಮ ಯಜಮಾನ್ರಿಗೆ ಎರಡನೇ ಬಾಲ್ಯ ಶುರು ಆಗ್ತದ. ಅವರು ಮಕ್ಕಳ್ಹಾಂಗನ ಆಗ್ಬಿಡ್ತಾರೆ.

ಶಾಮಣ್ಣ : ಕೇಳ್ದಿರಾ ಭೀಮರಾವ್! ಇದಕ್ಕೇನಂತೀರಿ? ನನ್ನ ಮೀಸೆ ಕಿತ್ತು ಕೈಯಲ್ಲೇ ಕೊಟ್ಟು ಬಿಟ್ಲು. ಹೆದರಬೇಡ ಕಾವೇರಿ. ನಾ ಹುಟ್ಟಿ ಬರೋಮುಂಚೆ ಹತ್ತು ಮಕ್ಕಳು ಹುಟ್ಟಿರಬೇಕು.

ಡಾಕ್ಟರ : ಅದೇ ಕ್ವಾಲಿಫಿಕೇಶನ್।

ಶಾಮಣ್ಣ : ನಮ್ಮ ಮಕ್ಕಳ ಸಂಖ್ಯಾ ಎಲ್ಲಿಗೆ ಬಂತು? (ಎಣಿಸುತ್ತಾನೆ) ರಂಗಾ, ಗಂಗಾ, ಗುಂಡಾ, ಪಲ್ಯಾ, ಪುಟ್ಟಿ,

ಕಾವೇರಮ್ಮ : ಮತ್ತೆ ಮರತ್ರಿ-ಕಿಟ್ಟು, ಚಂದ್ರಿ, ಬಾಪೂ

ಶಾಮಣ್ಣ : ಹೋಗಲಿ ಬಿಡು, ತಲೆ ಚಿಟ್ಟು ಹಿಡಿದು ಹೋತು.

ಕಾವೇರಮ್ಮ : (ತಾಳ್ಮೆಗೆಟ್ಟು) ಬಿಡ್ತು ಅನ್ನಿ. ಹೋಗಲಿ ಅಂತ ಯಾರು ಹೋಗಲಿ, ಡಾಕ್ಟರೆ ನಾವೇನು ಮಾಡೋದ್ರೀ. ಹಿರಿಯರ ಹರಕೆ. ಅಷ್ಟ ಪುತ್ರ ಪಂಚಕನ್ಯಾ ಸೌಭಾಗ್ಯವತೀ ಭವ ಅಂತ.

ಡಾಕ್ಟರ : ಆ ಹುಂಡಿ ಒಟ್ಟೂ ಎಷ್ಟು ಮುರಿಸದ್ಹಾಂಗ ಆತು?

ಶಾಮಣ್ಣ : ಹೇಳ್ತೇನೆ. (ಪುಟುಪುಟಿಸುತ್ತ) ಐದು ಗಂಡು. ಮೂರು ಹೆಣ್ಣು...

ಡಾಕ್ಟರ : ಆತು ಬಿಡು ಹಾಗಂದ್ರೆ, ಇನ್ನೂ ಬಜೆಟ ಪ್ರೊವಿಜನ್ ಇದೆ ಅನ್ನು. ಹೆದರಬೇಡಿ ಇನ್ನು ಎಂಟೇ ಮಕ್ಕಳು. ಶ್ರೀಕೃಷ್ಣ ಎಂಟನೇ ಗರ್ಭ, ಭೀಷ್ಮಾಚಾರ್ಯ ಎಂಟನೇ ಮಗ-ಎಂಥ ಪ್ರಭಾವಶಾಲಿ!

ಶಾಮಣ್ಣ : ಆದರೆ ಡಾಕ್ಟರ್ರೆ, ಅವರಿಬ್ಬರ ಪ್ರತಾಪದ ಹಿಂದೆ ಏಳೇಳು ಶಿಶುಗಳು ಸತ್ತವಲ್ರಿ. ಶಂತನು ಏನು, ವಸುದೇವ ಏನು ಎಂಟೂ ಮಕ್ಕಳನ್ನು ಸಾಕಿ ಬೆಳೆಸಲಿಲ್ಲ-ನಮ್ಮಂಗ-ಏನೇ ಯಜಮಾನಿ ಹೌದಂತಿಯೋ ಇಲ್ಲೋ?

ಡಾಕ್ಟರ : ನಮ್ಮ ವೈದಿಕ ಪ್ರಾರ್ಥನಾನೇ ಇದೆ ಅಲ್ಲಾ. “ಧನಂ ಧಾನ್ಯಂ ಪರುಂ ಬಹುಪುತ್ರ ಲಾಭಂ!

ಕಾವೇರಮ್ಮ : ಅದು ಸರಿ ಡಾಕ್ಟರರೇ, ಆದರೆ ಆ ಬಹುಪುತ್ರ ಲಾಭದ ಹಿಂದೆ ಧನ ಧಾನ್ಯಗಳ ಲಾಭದ ಬಲ ಉಂಟು.

ಶಾಮಣ್ಣ : ಡಾಕ್ಟರ್ರೇ, ಅಷ್ಟು ದೂರ ಏಕೆ? ನಿಮ್ಮದೇ ದಾಖಲೆ ಇದೆ ಅಲ್ಲ. ನಿಮಗೆ ಆರು ಗಂಡು, ನಾಲ್ಕು ಹೆಣ್ಣು. ಹೇಗಿದ್ದಾರೆ. ಒಬ್ಬೊಬ್ಬರೂ ಚಿನ್ನದ ಗುಂಡು, ಬೆಳ್ಳಿಯ ತುಂಡು.

ಡಾಕ್ಟರ : (ಖಿನ್ನ ಉಸಿರು ಬಿಟ್ಟು) ಹೌದ್ರೀ, ಶಾಮಣ್ಣ, ಆದರೆ ಅಷ್ಟು ಮಕ್ಕಳನ್ನು ಹೊತ್ತು ಹೆತ್ತ ನನ್ನ ಹೆಂಡತಿ ಈಗ ಹಾಸಿಗೆ ಹಿಡದಿದ್ದಾಳೆ -ರಕ್ತದ ಬಲವೇ ಇಲ್ಲ.

ಶಾಮಣ್ಣ : ಕೇಳ್ತಿಯೇನೆ ಕಾವೇರಿ, ಅಂದಾಗ ಬರೇ ಧನ ಧಾನ್ಯದ ಬಲ ತಕ್ಕೊಂಡು ಏನು ಮಾಡಬೇಕು ಹೇಳು? ಆದರೂ ಬಹುಪುತ್ರ ಲಾಭದ ಜತೆ ನಮ್ಮ ಹಳೇರು ಧನ ಧಾನ್ಯನೂ ಬೇಡಿಕೊಳ್ತಿದ್ರು.

ಡಾಕ್ಟರ : ಇಂದು ಬೇಡಿಕೊಂಡು ತಿನ್ನೋರ್ಗೆ ಮಕ್ಕಳು ಹೆಚ್ಚು (ಹೊರಗೆ ಕೋಳಿ ಕೂಗ್ತದೆ). ಅಗೋ ಸತ್ಯ ಅಂತೂ ಆ ಕೋಳಿ. ಆ ಕೋಳಿ ಕತೇನೇ ಕೇಳಿ. ಬಹಾಳ ಮರಿ ಹಾಕ್ತದ. ಆದರೆ ಅವು ಸತ್ತು ಸತ್ತು ಉಳಿಯೋದೆಷ್ಟು?

ಶಾಮಣ್ಣ : ಹೌದಪ್ಪ ಬಡವರಿಗೆ ಅದಕ್ಕೇ ಮಕ್ಕಳು ಹೆಚ್ಚೇನೋ! (ನಿಟ್ಟುಸಿರು) ಇದೂ ಒಂದು ದೇವರ ನ್ಯಾಯ!

| | |
|---|---|
| ಕಾವೇರಮ್ಮ : | ಅದಿರಲಿ, ಕಿಟ್ಟೂ ಚಂದ್ರಿ ಇನ್ನೂ ಬಂದಿಲ್ಲ. ಸ್ಕೂಲ ಬಿಟ್ಟು ಬಹ ಹೊತ್ತಾಯ್ತು. ಈ ಮಕ್ಕಳು ಎಲ್ಲಿ ಹೋದ್ರುss ? (ಚಂದ್ರಿ ಬರುತ್ತಾಳೆ |
| ಚಂದ್ರಿ : | (ಮೆಲುದನಿಯಲ್ಲಿ ಹಾಡುತ್ತಾ ಬರುತ್ತಾಳೆ) "ಮಕ್ಕಳಿವರೇನಮ್ಮ ಮಕ್ಕಳಿವರೇನಮ್ಮ! |
| ಕಾವೇರಮ್ಮ : | ಇದೇನೆ ಚಂದ್ರಿ. ಇಷ್ಟು ಹೊತ್ತು? |
| ಶಾಮಣ್ಣ : | (ಗದ್ದರಿಸಿ) ಎಲ್ಲಿ ಹೋಗಿದ್ದೆ ಕತ್ತೆ ಮಕ್ಕಳ ಕೇಳಿಕೂತ? |
| ಚಂದ್ರಿ : | ಅಲ್ಲ ಮಮ್ಮಿ ಇಂದು ಶಾಲೇಲಿ ಕ್ಲಾಸ ಮುಗಿದ ಮೇಲೆ ನವ ಮ್ಯಾಡಂ ಈ ಕವಿತಾ ಹೇಳಿ ಕೊಟ್ರು. ಬೇಂದ್ರೆ ಅವರ ಕವಿತ ನಾ ಹಾಡ ಬೇಕಂತೆ -ನಾನೇ ಭಾರತಮಾತೆ- ನಾಳಿ ಕಾರ್ಯಕ್ರಮದಲ್ಲಿ. ಓ ಡಾಕ್ಟರೇ, ನೋಡಲೇ ಇಲ್ಲ! ಬೆಗ ಪಾರ್ಡನ್. |
| ಡಾಕ್ಟರ : | ನೆವ್ಹರ್ ಮ್ಯಾಂಡ ಹಾಡಮ್ಮ ಆ ಪದ್ಯ. |
| ಚಂದ್ರಿ : | ಮಕ್ಕಳಿವರೇನಮ್ಮ ಮಕ್ಕಳಿವರೇನಮ್ಮ ನಾ ಪಡೆದ ಮೂವತ ಮೂರು ಕೋಟೀss! |
| ಡಾಕ್ಟರ : | ಛೇ. ಛೇ. ಈ ಲೆಕ್ಕ ಭಾರಿ ಹಳೇ ಖಾನೇಸುಮಾರಿ. ನಾ ಹಾಡುವಾಗ 'ಅರವತ್ತು ಮೂರು ಕೋಟಿ'ಎಂದು ಹಾಡು - 'ನ ಪಡೆದ ಅರವತ್ತು ಮೂರು ಕೋಟಿ'. |
| ಕಾವೇರಮ್ಮ : | ಅದಿರಲಿ ಚಂದ್ರಿ, ಒಳಗೆ ಹೋಗಿ ಕೈ ಕಾಲು ತೊಳಕೊಂಡ ಡಾಕ್ಟರಿಗೆ ಕಾಫಿಗಿಡು. |
| ಡಾಕ್ಟರ : | ಸರಿ ಈಗ ಅಮ್ಮಾ ನಿಮ್ಮ ಎಕ್ಸಾಮಿನ್ ಮಾಡ್ತೇನೆ. ಆ ತನ ಕಿಟ್ಟೂನೂ ಬರ್‍ತಾನೆ. ಆ ಮೇಲೆ ನಿಮ್ಮ ಬಾಲವಾಡಿ ತಪಾಸ (ನಗು) |
| | (ಚಂದ್ರಿ ಒಳಗೆ ಹೋಗುವ ಸದ್ದು. ಒಳಗಿಂದ ನೀರ ಸದ್ದು ಅ ಅದೇ ಕವಿ ಹಾಡುವ ತುಂಡುಗಳ ಸಾಲುಗಳು 'ಅತ್ತೊಂದು ಹ ಕೋಟಿ-ಹಲ ಕೆಲವು ಹುಚ್ಚು ಕುನ್ನಿ-ಲೆಕ್ಕಕ್ಕೆ ಏಸು ಸೊನ್ನಿ' ಕ ಬಸಿ ಸಪ್ಪಳ ಇತ್ಯಾದಿ) |
| ಡಾಕ್ಟರ : | ಆಲ್‌ರೈಟ್ ಕಾವೇರಮ್ಮ ಸ್ವಲ್ಪ ವಿಶ್ರಾಂತಿ ತಕ್ಕೊಳ್ಳಿ. |

ಶಾಮಣ್ಣ : ಡಾಕ್ಟರೇ, ಏನು? ಹೇಗೆ? ನಮ್ಮ ಯಜಮಾನಿ ಹೇಗಿದ್ದಾಳೆ? ಚಂದ್ರಿ ಮದುವೆ, ರಂಗನ ಮುಂಜಿ ಎಲ್ಲ ಆಗಬೇಕು.

ಡಾಕ್ಟರ : ಅದಕ್ಕೂ ಮುಂಚೆ.....

ಚಂದ್ರಿ : (ಬರುತ್ತಾಳೆ) ಮಮ್ಮಿ, ತಿಂಡಿ ಏನು ಇಡಲಿ?

ಡಾಕ್ಟರ : ಇಡ್ಲಿ ಬೇಡ, ಈಗ ತಿಂಡಿನೇ ಬೇಡ. ಇನ್ನು ನಾಲ್ಕು ಐದು ತಿಂಗಳಲ್ಲಿ ಫೇಡೇನೆ ಕೊಡು, ಶಾಮಣ್ಣಾ

ಶಾಮಣ್ಣ : ಅಂದ್ರೇನು ಡಾಕ್ಟರ್ರೇ,

ಡಾಕ್ಟರ : ಅಂದ್ರೆ ಹೀಗೆ. ನಿಮ್ಮ ಸೌಭಾಗ್ಯವತಿ ಇಂದು ಗರ್ಭವತಿ-ಮುಂದೆ ಪುತ್ರವತಿ....ಇಲ್ನೋಡು. ಅರೇ, ಇದೇನು ಚಂದ್ರಿ, ಓಡು ನೀರು ತಾ, ಶಾಮಣ್ಣಾ, ಶಾಮಣ್ಣಾ.

ಕಾವೇರಮ್ಮ : ಅಯ್ಯೋ ದೇವರೇ ಅವರು. (ಅಳತೊಡಗುವಳು)

(ಮಕ್ಕಳೆಲ್ಲ ಒಳನುಗ್ಗಿ ಬಂದು ಕೂಗಾಡ ಹತ್ತುತ್ತಾರೆ-ಕಳವಳದಿಂದ. "ಅಪ್ಪಾ ಡ್ಯಾಡಿ, ಅಯ್ಯೋ ಅಪ್ಪ ಏಕೆ ಮಾತಾಡೊಲ್ಲ?" ಇತ್ಯಾದಿ)

ಡಾಕ್ಟರ : ಏ ಮಕ್ಕಳೇ ಸುಮ್ನಿರಿ. ಅಪ್ಪಂಗೆ ಏನೂ ಆಗಿಲ್ಲ. ನಡೀರಿ ಹೊರಗೆ ಹೂಂ, ಕಾವೇರಮ್ಮ ನೋಡಿ. ಶಾಮಣ್ಣ ಚೇತರಿಸಿಕೊಂಡ, ಕಣ್ತೆರಿತಾ ಇದ್ದಾನೆ.

ಕಾವೇರಮ್ಮ : ದೇವರೇ ನಮೋ ನಮೋ. ಅಲ್ಲಾ ಇದೇನ್ರೀ ಪೂರಾ ಹೆದರಿಸಿ ಬಿಟ್ರಿ ಕಣ್ತೆರಿರಿ ಪೂರಾ.

ಶಾಮಣ್ಣ : (ಚೇತರಿಸಿಕೊಳ್ಳುತ್ತ) ಅಯ್ಯೋ ಅಪಾ! ಕಣ್ಣ ಮುಚ್ಚೇ ಹೋಗಬೇಕಿತ್ತು ನಿಂಗೆ ತಿಂಗಳು ಹೋದದ್ದು ಕೇಳಿ, ಹೂಂ ನನ್ನ ಕೈಕಾಲೆ ತಣ್ಣಗಾದವು! ಮತ್ತೆ ಬಂತು ಗ್ರಹಚಾರ!

ಕಾವೇರಮ್ಮ : (ಅಳುದನಿ) ಹಾಗೆಲ್ಲ ಅನ್ನಬೇಡಿ ಅಂದ್ರೆ. ದೇವರಿದ್ದಾನೆ. ಅವನ ಮೇಲೆ ಎಲ್ಲ ಭಾರ!

ಡಾಕ್ಟರ : ಅಮ್ಮಾ ಎಲ್ಲರೂ ಆ ದೇವರ ಮೇಲೇ ಭಾರ ಹಾಕ್ತಾ ಹೋದರೆ ಆ ಬಡಪಾಯಿ ಆದರೂ ಏನೂ ಮಾಡ್ಯಾನು? ಆ ದೇವರೂ ನಮ್ಮ ಭಾರಾ ನಾಲ್ಕು ಮಂದಿ ಹೆಗಲಿಗೆ ಹೊತ್ತಾಕಿ ಕೈ ಬಿಡ್ತಾನೆ!

ಶಾಮಣ್ಣ : ನೀ ಮತ್ತೆ ಗರ್ಭಿಣಿ!

ಡಾಕ್ಟರ : ಯಾರೇನು ಮಾಡುವರು? ಯಾರಿಂದಲೇನಹುದು. ಆದರೆ ಇದು ಪೂರ್ವ ಜನ್ಮದ ಕರ್ಮಫಲ ಅಲ್ಲ. ಇದೇ ಜನ್ಮದ ಕರ್ಮ. ಇದೇ ಜನ್ಮದಾಗ ಇದರ ಫಲ! ಶಾಮಣ್ಣಾ ನಾ ನಿಂಗೆ ಹೇಳ್ತಾ ಬಂದೀನಿ. ನೀ ಎಲ್ಲಿ ಕೇಳ್ತಿದ್ದಿ? ಸೊಟ್ಟ ಶಾಣ್ಯಾತನ ಮಾತಾಡ್ತಿದ್ದಿ. ಇನ್ನಾದರೂ ಈಗಲಾದರೂ ಶಸ್ತ್ರಕ್ರಿಯೆ ಮಾಡಿಸ್ಕೊ. ಒಪ್ಪಿಕೊ.

ಕಾವೇರಮ್ಮ : ಅವರ ಬಿಡಿ ನಾನೇ ಮಾಡ್ಸಿಕೋತೀನಿ. ಆಯ್ತು ನೀವೇ ಮಾಡಿ ಬಿಡಿ. ಪುಟ್ಟ ಹುಟ್ಟಿದಾಗಲೇ ಯಮ ತ್ರಾಸಾಯ್ತು.

ಡಾಕ್ಟರ : ನೋಡಿ, ಅದಕಿನ್ನೂ ಮೂರುವರ್ಷ ಕಳೀಲಿಲ್ಲ ಮತ್ತೆ ಶ್ಯಾಮಣ್ಣ ಈ ಉಪದ್ವಾಪ! ಹೀಗೆ ಹತ್ತಾಗಿ ಶಿಶು ಹುಟ್ಟಿದ್ರೇ ಅವು ಮೈಯಲಿ ನೆಟ್ಟಗಾಗೂದು ಅಷ್ಟೇ. ಹಡೆದವಳ ಗತಿನೂ ಅಷ್ಟೇ.

ಕಾವೇರಮ್ಮ : ಚಂದ್ರೀ, ಅಪ್ಪಂಗೆ ಇಷ್ಟು ಕಾಫಿ ತಂದು ಕೊಡು. ಈಗ ಹೇಗೆ ಆರಾಂ ಅನಿಸ್ತದs ಇಲ್ಲದ ಚಿಂತಿ ಹಚ್ಚಿಕೊ ಬೇಡ್ರಿ.

(ಚಂದ್ರಿ ಎಲ್ಲರಿಗೂ ಕಾಫಿ ತಂದು ಕೊಡುತ್ತಾಳೆ. ಹಾಡುತ್ತಾ ಇದ್ದಾಳೆ ನಾ ಹೆತ್ತ ಡಿಂಬಗಳ ಲೆಕ್ಕ ಯಮ ನೋಡಿ ನಕ್ಕ...)

ಡಾಕ್ಟರ : ಹೌದು ಚಂದ್ರಿ. ಸತ್ಯ ಆಡಿದಿ. ಸತ್ತು ಸತ್ತು ಹುಟ್ಟೋದು, ಹುಟ್ಟಿ ಸಾಯೋದು.

(ಜೋರಾಗಿ ಬಾಗಿಲು ಬಡಿಯುವ ಸದ್ದು! "ಕದಾ ತೆಗೀರಿ ಡಾಕ್ಟರು ಇದಾರೋ)

ಶಾಮಣ್ಣ : ಯಾರದು ಕೂಗೋರು?

(ಯಾರು? ಶ್ಯಾಮಣ್ಣೋರೇ, ಬಾಗಿಲ ತೆಗೀರಿ. ನಾನು ಪೌಜದಾರ ಮಾತಾಡ್ತಿದೀನಿ)

ಶಾಮಣ್ಣ : ನಿಲ್ಲಿ ಬಂದೆ. (ಬಾಗಿಲ ತೆರೆದಾಗ ಹೊರಗಿನ ಗದ್ದಲ ಒಳ ನುಗ್ಗುತ್ತದೆ.)

ಫೌಜುದಾರ : ಡಾಕ್ಟರ್ರೇ, ನಡೀರಿ ದವಾಖಾನಿಗೆ. ಶಾಮಣ್ಣೋರೇ ನೀವೂ

ಕಾವೇರಮ್ಮ : ಯಾಕೆ ಸಾಹೆಬ್ರೆ, ಅವರೇಕೆ?

ಫೌಜದಾರ : ಏನಿಲ್ಲಮ್ಮ, ನಿಮ್ಮ ಮಗ ಬಿದ್ದು ಕೈ ಮುರ್‍ಕೊಂಡಾನ

ಇನ್ನೊಂದು ದನಿ : ಹೂನ್ರೀ ಡಾಕ್ಟರ್ರೇ ಆಸ್ಪತ್ರೆಗೆ ಒಯ್ದಿವಿ.

ದನಿ೨ : ಓಡುವ ಬಸ್ಸಿಗೆ ಹತ್ತತಿದ್ದನ್ರಿ, ಉಡಾಳ ಹುಡುಗ.

ಫೌಜದಾರ : ಅಲ್ರೀ ಶಾಮಣ್ಣೋರೇ ನೀವು ತಾಯ್ತಂದೆ ಮಕ್ಕಳ ನಿಗಾ ಇಡ ಬೇಕ್ರಪ್ಪಾ.

ದ೧ : ಹೂನ್ರಿ ನಿಗಾ ಇಡಲಿಕ್ಕೆ ಆಗದೋರಿಗೆ ಇಷ್ಟು ಮಕ್ಕಳಾದ್ರೂ ಏಕೆ ಬೇಕು.

ದನಿ೨ : ಇರ್ಲಿ ಬಿಡು ಲೇಟಾತು.

ಡಾಕ್ಟರ : ಹಾಂ ರೆಡಿ ಬನ್ನಿ ಶಾಮಣ್ಣಾ, ನಾವು ಹೋಗೋಣ. ಕಾವೇರಮ್ಮ ಡೋಂಟ್ ವರಿ ಇಟ್ಸ ಆಲ್ ರೈಟ. ನಾ ನೋಡಕೋತೇನಿ. ಕಿಟ್ಟೂನ ಇಲ್ಲಿ ತಂದು ಬಿಡ್ತೇನಿ. ಕಾಳಜಿ ತಕ್ಕೊಳ್ಳಿ. ಹೂಂ ಹೊರಡಿ. (ಬಾಗಿಲಿನಿಂದ) ಮತ್ತೆ ಅಕ್ಕಾ ನಾ ಕೊಟ್ಟ ಸೂಚನೆ ನೆನಪಿರಲಿ. ನಿಮ್ಮ ಯಜಮಾನರಿಗೆ ಮರವೇ ಹೆಚ್ಚು. (ನಗುತ್ತ ನಿರ್ಗಮನ)

ಕಾವೇರಮ್ಮ : ಆಯ್ತು ಇನ್ನೆಲ್ಲಿ ಮರೀತೇವೆ. ನಮಸ್ಕಾರ. ಚಂದ್ರಿ ಬಾಗಿಲು ಇಕ್ಕಿ ಓದಿಕೊ. (ನಿಟ್ಟುಸಿರು) ಈ ಎಲ್ಲಾ ಮಕ್ಕಳನ್ನ ಎಲ್ಲಾ ಕಡೆ ಹೇಗೆ ನೋಡಿಕೊಳ್ಳೋದು? ಯಾರು ನೋಡಿಕೊಳ್ಳೋದು? ಅಯ್ಯೋ! ದೇವರೇ. (ಬಿಕ್ಕಿ ಬಿಕ್ಕಿ ಅಳುವಳು ಚಂದ್ರಿ ಓಡಿ ಬಂದು) ಅಮ್ಮಾ ಅಮ್ಮಾ ಅಳತೀ ಏಕೆ? ರಂಗಾ, ಗುಂಡಾ, ಗಂಗೀ ಇಲ್ಲಿ ಬನ್ರೇ. ಅಮ್ಮಂಗೆ ಏನೋ ಸಂಕಟ. (ಅವರು ಓಡಿ ಬರುತ್ತಾರೆ.) ಒಬ್ಬರ ಒಂದೊಂದು ದನಿ: “ಗಾಳಿಹಾಕಲೇ?” “ಬೆನ್ನು ತಿಕ್ಕಲೆ” “ಅಳಬೇಡ ಅಮ್ಮಾ”, “ನಮಗೂ ಅಳು ಬರ್ತದೆ”)

# ಒಲುಮೆಯ ಒಗಟು

## ನೋಟ, ಒಂದು

(ದ್ವಾರಕೆಯ ಅರಮನೆಯಲ್ಲಿಯ ರಾಣಿವಾಸ. ಮಹಾರಾಣಿಯರಲ್ಲಿ ಓರ್ವಳಾದ ಸತ್ಯಭಾಮಾ ದೇವಿಯ ಅಂತಃಪುರದ ಮುಂದಿನ ಚಿಕ್ಕ ಹೂದೋಟ. ಒಳ್ಳೇ ಸೊಗಸಾದ ವೇಳೆ. ತೋಟದಲ್ಲಿ ಹೊಗಳೆಲ್ಲ ಅರಳಿ ಘಮಘಮಿಸುತ್ತಿರುವವು. ಅಂತಃಪುರದ ತಲೆಬಾಗಿಲು ಮುಚ್ಚಿದೆ. ಮುತ್ತಿನ ಸರಗಳಿಂದ ನೆಯ್ದ ತೆರೆಯೊಂದು ಬಾಗಿಲಿಗೆ ಅಡ್ಡವಾಗಿ ಇಳಿಬಿಟ್ಟಿದೆ. ನಡುನಡುವೆ ಒಳಗಿನಿಂದ ತಂತುವಾದ್ಯಗಳನ್ನು ಮಿಡಿದ ಇಂಚರವೂ ಹೆಣ್ಣು ದನಿಯ ಹಾಸ್ಯವಿನೋದದ ಗಹಗಹಿಸುವ ಇಂಪು ಹೊರಗೆ ಕೇಳಬರುತ್ತದೆ. ಬಾಗಿಲಿನ ಇದುರಿಗೆ ತೋಟದಲ್ಲಿ ನಡುವೆಯೇ ಒಂದು ಚಂದವಾದ ಕಾರಂಜಿಯು ಪುಟಿಯುತ್ತಿದೆ-ಹಾಲುಗಲ್ಲಿನಲ್ಲಿ ಕೊರೆದಿಟ್ಟ ಒಂದು ಚೆಲುವಿಕೆಯ ಪುತ್ಥಳಿಯ ಕೈಯೊಳಗಿನ ಕೊಂಬಿನೊಳಗಿಂದ-ನೀರ ತುಂತುರುಗಳು ಮುಳಗಲಿರುವ ಸೂರ್ಯನ ಹೊಂಬೆಳಕಿನಲ್ಲಿ ಚಿನ್ನದ ಹರಳುಗಳಂತೆ ಹಾರಿ ಏರಿ ಎದರುತ್ತಿರುವವು. ದೂರದಲ್ಲಿ ಭೋರ್ಗರೆಯುವ ಕಡಲಿನ ಗಡಸು ದನಿಯು ಗವಿಯಲ್ಲಿ ಕೂಗುವ ಸಿಂಹದ ಹುದುಗಿದ ಅಬ್ಬರದಂತೆ ಹಿನ್ನೆಲೆಯಲ್ಲಿ ಕೇಳಬರುವದು.

ತೆರೆಯು ಮೇಲೆದ್ದಾಗ ದೂರದಿಂದ ಹೆಚ್ಚು ಹೆಚ್ಚು ತಿಳಿಯಾಗಿ ಕಿವಿಗೆ ಬರುವ ಸಂಗೀತವು ನಿಧಾನವಾಗಿ ಕೇಳಿಸಹತ್ತುತ್ತದೆ. ತೋಟದಲ್ಲಿ ಅತ್ತಿತ್ತ ಸುಳಿದಾಡುತ್ತ ಪ್ರಸನ್ನಚಿತ್ತದಿಂದ ದೇವರ ನಾಮಗಳನ್ನು ಹಾಡುತ್ತ ಹೂಗಳ ತೊನೆಯುವ ತೊಂಗಲುಗಳ ಮೇಲೆ ಕೈ ಆಡಿಸುತ್ತ ಮೆಲ್ಲಗೆ ಅಡಿಯಿಡುತ್ತ ಮಹರ್ಷಿ ನಾರದರು ಬರುತ್ತಾರೆ.)

ನಾರದ : ಇದು ಒಳಿತಲ್ಲ. ಇದಕ್ಕೆ ತಡೆ ಹಾಕಲೇಬೇಕು. ಅರಸಿಯರೇ ಇಂತು ಅತಿ ಪ್ರಸಂಗ ಮಾಡಲು ಮೊದಲಾದರೆ ಅರಿಯದವರ ಬಗೆ ಏನು? ಏನಾದರೊಂದು ಹೊಂಚು ಹೂಡಲೇಬೇಕು............ ಹಂಚಿಕೆಗೇನೂ ಬರಗಾಲವಿಲ್ಲ ನಮ್ಮ ಈ ಬುರುಡೆಯಲ್ಲಿ............... ಶ್ರೀಕೃಷ್ಣನ ಪ್ರೀತಿಯು ನಿಜವಾಗಿಯೂ ಯಾರಲ್ಲಿ ಮಿಗಿಲಾಗಿರಬಹುದು? ................ ಛೇ! ಈ ಪ್ರಶ್ನೆಯೆ ಹುಚ್ಚು! ನೆಳಲು ಬೆಳಕುಗಳೆಂಬ ಭೇದವು ನಮಗೆ ಭೂಮಿಯ ಬದುಕಿನವರಿಗೆ! ಸೂರ್ಯನ ಹತ್ತಿರ ಸದಾಕಾಲವೂ ಪ್ರತಾಪಪ್ರಭೆಯೇ! ಕೃಷ್ಣನ ಪ್ರೀತಿಯದೂ ಅದೇ ರೀತಿ!........... ಆದರೂ ಆತನನ್ನು ಕಂಡು ಕೇಳಿಕೊಳ್ಳುವದೇ ಲೇಸು!

(ಹೀಗೆಂದು ನಾರದರು ಸರಸರನೆ ಹೆಜ್ಜೆಯಿಟ್ಟು ವ್ಯಗ್ರವೃತ್ತಿಯಿಂದ ಬಲಗಡೆಯ ದಾರಿಯಿಂದ ಹೋಗಲು ಹವಣಿಸುವರು. ಅಷ್ಟರಲ್ಲಿ ಅಂತಃಪುರದ ಬಾಗಿಲು ತೆರೆದು ಮುತ್ತಿನದೆರೆಯನ್ನು ಬದಿಗೆ ಸರಿಸಿ ಲಗುಬಗೆಯಿಂದ ಪಾವಟಿಗೆಗಳನ್ನು ಇಳಿಯುತ್ತ ಸತ್ಯಭಾಮಾದೇವಿಯು ಹೊರಗೆ ತೋಟದಲ್ಲಿ ಬರುವಳು. ತಲೆಯೆತ್ತಿ ಹೋಗಲಿರುವ ನಾರದರನ್ನು ಕಂಡು ನಗುತ್ತ ಅವರನ್ನು ಕರೆದು ತಡೆಯುವಳು.)

ಭಾಮೆ : ಮುನಿಗಳೇ! ಮುನಿಗಳೇ! ಇಷ್ಟು ಅವಸರದ ನಡಿಗೆ ಎಲ್ಲಿಗೆ? ಅ

ರುಕ್ಮಿಣಿಯ ಹೊಸದೊಂದು ವ್ರತಕ್ಕೆ ಸಂಕಲ್ಪ ಹೇಳುವದಿದೆಯೇ? ಇಲ್ಲವೇ ಆಕೆಯ ಅರಮನೆಯಲ್ಲಿ ಪಾದಪೂಜೆಯ ಔತಣವಿದೆಯೇ? ಏನಾದರೊಂದು ನೆವದಿಂದ ಆ ಪಟ್ಟದರಿಸಿಯ ಇದುರು ಕೈ ಜೋಡಿಸಿ ನಿಲ್ಲುವ ಚೆದುರು ತಮಗೆ ಒಳ್ಳೇ ಸಾಧಿಸಿದೆ, ಬಿಡಿರಿ!

ಾರದ: **(ಬೆಕ್ಕಿನ ತೆಕ್ಕೆ ತಪ್ಪಿಸಲಾರದ ಇಲಿಯ ಹುತಾತ್ಮ ಮುದ್ರೆಯಿಂದ)** ಛೇ! ಛೇ! ಇದೆಲ್ಲಿ ಬಂದು ಬಿಟ್ಟಿತು, ಮಿಂಚಿನ ಮೂರ್ತಿ! **(ಆಕೆಗೆ)** ಅಮ್ಮಾ! **(ನಕು)** ಎಷ್ಟೊಂದು ಆಡಿಬಿಟ್ಟಿರಿ ಒಂದೇ ಉಸುರಿಗೆ! ಎಂದೆಂದಿಗೂ ಹಾಗೆ ಭಾವಿಸಬೇಡಿರಿ. ನಿಮ್ಮನ್ನು ಬಿಟ್ಟು ನಾನು ಎಂದಾದರೂ ಇನ್ನ್ಯಾರನ್ನು ಮನ್ನಿಸುವದುಂಟೇ? ಕನಸಿನಲ್ಲಿ ಕೂಡ ಕಾಣದ ಕತೆಯಿದು!

ಾಮೆ: ಸಾಕು ಬಿಡಿ, ಇದೆಲ್ಲ ತಮ್ಮ ಬಾಯಿ ಬಣ್ಣನೆ! ತಮ್ಮ ಈ ಬೆಣ್ಣೆಯಂತಹ ಮಾತನ್ನು ಆ ಕೃಷ್ಣನೇ ನಂಬಬೇಕು-ಕದ್ದ ಬೆಣ್ಣೆ ನುಂಗಿ ಆತನಿಗೆ ಆ ರುಚಿಯು ಚಟವಾಗಿಬಿಟ್ಟಿದೆ! ನನಗೇನು ಗೊತ್ತಿಲ್ಲವೇ? ನೀವೆಲ್ಲರೂ ಆ ರುಕ್ಮಿಣಿಯ ಊಳಿಗದಾಳಾಗಿರುವಿರಿ. ಬಡವಿಯಾದ ನನಗೆ ಯಾರು ಕೇಳುವವರು? **(ಕೃತ್ರಿಮ ಮರುಕಿನ ನಿಟ್ಟುಸಿರು ಬಿಡುವಳು)**

ಾರದ: **(ಅಷ್ಟೇ ಕೃತ್ರಿಮ ನೋವಿನ ದನಿಯಲ್ಲಿ)** ಅಯ್ಯೋ! ಹೀಗೆ ಭಾವಿಸುವದುಂಟೇ? ಇದು ಬರೇ ಮಂಕು ವಿಚಾರ, ಬರೇ ಮಂಕು! ನಮ್ಮ ಮಾತಿರಲಿ, ಶ್ರೀ ಕೃಷ್ಣನ ಕುರಿತು ಹೀಗೆ ತಿಳಿಯುವದಂತೂ ತೀರ ತಿಳಿಗೇಡು! ಗ್ರಹಗಳನ್ನೆಲ್ಲ ಆಕರ್ಷಿಸುವ ಸೂರ್ಯನಂತೆ ನೈದಿಲೆಗಳನ್ನೆಲ್ಲ ಅರಳಿಸುವ ಚಂದ್ರನಂತೆ ಶ್ರೀಕೃಷ್ಣನ ಪ್ರೀತಿಯು ನಿಮ್ಮೀರ್ವರಲ್ಲಿ ಸರಿತೂಕವಾಗಿ ಸಮಪಾಕವಾಗಿ ನೆಲೆಗೊಂಡಿರುತ್ತದೆ! ಹಾಗೆ ನೋಡಿದಲ್ಲಿ ನಿಮ್ಮಲ್ಲಿಯೇ ಆತನ ಒಲವು ಒಂದು ಅಂಶ ಮಿಗಿಲೆಂದರೂ ಸಲ್ಲಬಹುದು. ನೋಡಲಿಲ್ಲವೇ, ನಿಮಗಾಗಿಯೇ ಇಂದ್ರನ ಪಾರಿಜಾತ ವೃಕ್ಷವೇ ಇಳೆಗೆ ಇಳಿಯಿತಲ್ಲವೇ?

ಾಮೆ: **(ಸಂಶಯಿತವೃತ್ತಿಯಲ್ಲಿ)** ಅದೆಂತಹ ಪಾರಿಜಾತವೋ ಏನೋ. ಇದೆಲ್ಲ ನಮ್ಮ ಈ ಉಪೇಂದ್ರನ ಇಂದ್ರಜಾಲವಿರಬಹುದು. ನನ್ನನ್ನು ಮೆಚ್ಚಿಸಲಿಕ್ಕೆ ಮಾಡಿದ ಮಾಯೆಯಾಗಿರಬಹುದು. ಇಲ್ಲವಾದರೆ, ಪಾರಿಜಾತ ಹೂಗಳೆಲ್ಲ ಕೇವಲ ಕಣ್ಣಿಗೆ ಕಾಣುವವೇ ಹೊರತು ಕೈಗೆ ಬರುವದೇ ಇಲ್ಲ! ಎಲ್ಲಿ ಇಲ್ಲವಾಗುವವೋ ಏನೋ!

ಾರದ: ಛೇ! ಇದು ಸುಳ್ಳಿರಬೇಕು. ನನ್ನನ್ನು ದಂಗುಪಡಿಸಲು ಹೇಳಿದ ಒಂದು ಚೆಂದ ಸುಳ್ಳಿರಬೇಕು.

ಾಮೆ: **(ತುಸು ಅಸಹನೆಯಲ್ಲಿ)** ನನಗೇನು ಬಂದಿದೆ! ತಮ್ಮೊಡನೆ ಸುಳ್ಳು ಹೇಳಲಿಕ್ಕೆ ! ನಾನು ಸುಳ್ಳಾಡುವವಳೆಂತ ನನಗೆ ಅಪಮಾನಿಸುವಿರಾ?

ನಾರದ: (ಗಾಬರಿಯಿಂದ) ಅಯ್ಯೋ ! ದೇವಿ, ಕ್ಷಮಿಸಿರಿ. ಅಪಮಾನ ಮಾಡು
ಅಪವಾದ ಹೊರಿಸಬೇಡಿರಿ ಬಡ ಹಾರುವನ ಬೊಕ್ಕ ತಲೆಯಮೇಲ
ನನ್ನದು ಆ ಉದ್ದೇಶವೇ ಇಲ್ಲ. ಮಾತಿಗೆ ಮಾತೇ ವಿನಹ ಅದನ
ಮೈಗೆ ಹಚ್ಚಿಕೊಳ್ಳಬೇಡಿರಿ. ನೀವನ್ನುವದು ನಿಜವಿರಲೂ ಬಹುದ
ಪಾರಿಜಾತಗಳು ಇಲ್ಲವಾಗುವದು ನಿಜವಿರಬಹುದು. ಆದರೆ ಅ
ಸೋಜಿಗವೇನೂ ಅಲ್ಲ. ಗಾಳಿಬಂದು ಹೂಗಳ
ಹಾರಿಹೋಗುತ್ತಿರಬಹುದು ಇದೊಂದೆ ಸಂಗತಿ ಸಾಕು ಶ್ರೀಕೃಷ್ಣನ ಲೀ
ಬರೇ ಇಂದ್ರಜಾಲವಲ್ಲವೆಂತ ತೋರಿಸಲಿಕ್ಕೆ! ಅದಿರಲಿ, ನನ್ನ
ತಡೆದದ್ದೇಕೆ?

ಭಾಮೆ: ಒಂದು ಮಹತ್ವದ ಮಾತು ಕೇಳಬೇಕೆಂದಿದ್ದೇನೆ. ಇಂದು ನ
ಪಾರಿಜಾತಕ್ಕೆ ಕೊಂಚ ಹೂಗಳು ಅರಳಿದ್ದವು.

ನಾರದ: ಅವು ಕೂಡ ಸಂಪ್ರದಾಯದಂತೆ ಗಾಳಿಯನ್ನೇರಿ ಹೋಗಿರಬಹುದಲ್ಲವೆ

ಭಾಮೆ: (ನಸುನಕ್ಕು) ಇಲ್ಲಿ ನನ್ನ ಪರಿಚಾರಿಕೆಯರು ಅವುಗಳನ್ನು ಕಾದು
ನಿಂತು ಕೂಡಿಸಿ ತಂದಿರುವರು! ನನಗೊಂದು ಯೋಚನೆ ತೋಚಿ
ಅವುಗಳಲ್ಲಿ ಕೆಲವು ನಮ್ಮ ರುಕ್ಮಿಣಿಯ ಮುಂದೆ-ಅಲ್ಲ ತಪ್ಪಿ
ಪಟ್ಟದರಸಿಯ ಅಡಿದಾವರೆಗಳ ಪೂಜಗೆಂತ ಅನ್ನಬೇಕಾಗಿತ್ತು-ಅವ
ಒಯ್ದು ಕೊಡಬೇಕೆಂದಿರುವೆನು. ನಾನೇ ಸ್ವತಃ ಹೋಗಬೇಕೆಂದಿರುವೆ

ನಾರದ: ಸೈ ! ಸೈ ! ಇದು ತೀರ ಸಾಧು ವಿಚಾರವಮ್ಮಾ! ಮೊತ್ತಮೊದ
ರುಕ್ಮಿಣಿಯ ನೆನಪಾಗಿ ಆಕೆಗೆ ಹಿರಿತನದ ಮುಡಿಪು ಸಲ್ಲಿಸುವ ವಿಚ
ನಿಮ್ಮ ಸಜ್ಜನಿಕೆಯನ್ನೇ ತೋರಿಸುತ್ತದೆ.

ಭಾಮೆ: (ತಪ್ಪು ತಿಳುವಳಿಕೆಯನ್ನು ದೂರಮಾಡುವ ವಿಭ್ರಮ-ವೃತ್ತಿಯಲ್ಲಿ) ನನ್ನ ಸಜ್ಜನಿಕೆ
ಕುರಿತು ಈಗ ಸರಸವು ಬೇಡ. ಆಕೆಯ ಹಿರಿತನವನ್ನು ನಾನ
ಒಪ್ಪಿದ್ದೇನೆ? ಮುಡಿಪಂತೆ ! ನಾನು ಒಯ್ದು ಕೊಡುವ
ಮೂದಲಿಸಲಿಕ್ಕೆ! ನನ್ನ ಮಂದಿರದ ಮುಂದೆ ಪಾರಿಜಾತವು ಬ
ನೆಲಸಿತೆಂದು ಆಕೆಗೆ ಒಡಲುರಿ ಹುಟ್ಟಿದೆಯಂತ ನನಗೆ ಗೊತ್ತಾಗಿ
ನನ್ನ ಸಖಿಯರು ಅನ್ನುತ್ತಿದ್ದರು.

ನಾರದ: ಅದೆಲ್ಲ ಸುಳ್ಳಿರಬಹುದಮ್ಮ! ರುಕ್ಮಿಣಿಯ ಸ್ವಭಾವವು ಅದೆಷ್ಟು ಮಧ
ನಿಮ್ಮ ಸಖಿಯರು ಅವಿವೇಕಿಗಳು ! ಮಂದಿಯ ಮಾ-
ಕಿವಿಗೊಡಬಾರದು. ಮೇಲಾಗಿ ರುಕ್ಮಿಣಿಗೆ ಪಟ್ಟದರಸಿಯಂತ ಆಗ
ಅಣಕಿಸುವದೂ ತರವಲ್ಲ. ಅವಳು ಹಿರಿಯಳಾದುದು ಅ
ಅಪರಾಧವೇ? ಅರಸಿ-ಪಟ್ಟವು ಹಿರಿಯತನಕ್ಕೆ ಒಪ್ಪುವ ಅಧಿಕಾರ-ಪದ

ಮೆ: ಅದೆಲ್ಲ ಬಿಡಿ. ನಮ್ಮ ಕೃಷ್ಣನು ಕೂಡ ಅವಳ ಕಡೆಗೇ ಹೆಚ್ಚು ಪಕ್ಷಪಾತಿಯಾಗಿರುವನು. ನೋಡಲಿಲ್ಲವೇ ! ಮೊನ್ನೆ ತುಲಾಭಾರದ ಪ್ರಸಂಗದಲ್ಲಿ ನನ್ನ ಮುತ್ತು-ರತ್ನಗಳ ವೈಭವವೆಲ್ಲ ಸಾಲದೇ ಆಕೆಯ ಕೈಯು ಬಾಡಿದ ತುಲಸೀ ದಲಗಳೇ ತನಗಷ್ಟು ಪ್ರಿಯವೆಂದು ಕಾಣಿಸಿಕೊಟ್ಟನು.

ರದ: ಮತ್ತೆ ನಿಮ್ಮ ಗ್ರಹಿಕೆ ತಪ್ಪಿತು ಅಮ್ಮಾ! ಈ ಪ್ರಸಂಗದ ಇತ್ಯರ್ಥ ಹಾಗೆ ಮಾಡುವದೇ ಸರಿಯಲ್ಲ. ಅದರಲ್ಲಿ ರುಕ್ಮಿಣಿಯ ದೋಷವೇನು? ತುಲಸಿಯನ್ನು ಯಾರು ಅರ್ಪಿಸಿದರೂ ಕೃಷ್ಣನಿಗೆ ಪ್ರಿಯವೇ. ಅದರಿಂದ ತುಲಸಿಯ ಮಹಾತ್ಮ್ಯ ವ್ಯಕ್ತವಾಗುತ್ತದೆ. ರುಕ್ಮಿಣಿಯ ಮಹತ್ವವಲ್ಲ! ತಿರುಗಿ ( **ನಕ್ಕು, ಗುಟ್ಟು ಹೇಳುವ ಸಲಿಗೆಯು ನಂಬಿಕೆಯುಲ್ಲಿ** ) ಕಿರಿಯರಸಿಯಲ್ಲಿಯೇ ಶ್ರೀ ಕೃಷ್ಣನ ಒಲುಮೆಯಿರುವದೆಂತ ಲೋಕ ಪ್ರಸಿದ್ಧಿ ! ತಿಳಿಯಿತೇ? ಬರಿದೇ ರುಕ್ಮಿಣಿಗೆ ಅಣಕಿಸುವದು ಸರಿಯಲ್ಲ ! ಹಾಗೆ ದೀರ್ಘ ವಿಚಾರಮಾಡಿ ನೋಡಿದರೆ-ಪಟ್ಟದರಸಿಯು ಬಲಭದ್ರ ಮಹಾರಾಜರ ಮಡದಿ ರೇವತೀ ದೇವಿಯವರೇ ಸರಿ ! ( **ತೀರ್ಪು ಕೊಡುವ ಗಾಂಭೀರ್ಯದಿಂದ ಆಕೆಯ ಕಡೆಗೆ ನೋಡುವನು.**)

ಮೆ: ಅದಿರಲಿ, ನನ್ನ ಯೋಜನೆ ಸರಿಯೇ?

ರದ: ನಿಮ್ಮ ಯೋSSಜSSನೆS. ( **ವಿಚಾರ ವ್ಯಗ್ರನಾಗಿ** ) ಅಷ್ಟೇನು ಹಾಳಲ್ಲವೆನ್ನಬಹುದು. ಒಂದು ದೃಷ್ಟಿಯಿಂದ ಒಳಿತೇ ಸರಿ ! ಅವಳಿಗೆ ಪಾರಿಜಾತಗಳನ್ನು ಒಯ್ದರ್ಪಿಸಿದರೆ ಅದೊಂದು ಅವಳ ಸ್ವಭಾವದ ಪರೀಕ್ಷೆಯೇ ಆಗುವದು. ಅವಳಿಗೆ ಸಿಟ್ಟು ಸಿಡುಕುಗಳೇನಾದರೂ ತಲೆದೋರಿದರೆ ಅವಳು ಸರಸಸಜ್ಜನಿಕೆಯಿಲ್ಲದುದರಿಂದ ಅರಸಿತನಕ್ಕೆ ಅನಧಿಕಾರಿಯೆಂತ ಸಿದ್ಧವಾಗುವದು. ಆಮೇಲೆ ನನ್ನ ತಪಶ್ಚರ್ಯವನ್ನೆಲ್ಲ ವೆಚ್ಚಮಾಡಿ ನಿಮ್ಮ ಅಡಿಯಲ್ಲಿಯೇ ಪಟ್ಟದರಸಿಯ ಪದದ ಪದಕವು ಬೀಳುವಂತೆ ಶ್ರೀಕೃಷ್ಣನೆದುರಿಗೆ ಪ್ರಯತ್ನ ಮಾಡುವೆನು ! ಇಷ್ಟೊಂದು ನನಗೆ ಒಪ್ಪಿತು. ( **ನಕ್ಕು** ) ಆಯಿತಲ್ಲವೇ?

ಮೆ: ( **ಹಿಗ್ಗಿನ ದನಿಯುಲ್ಲಿ** ) ಹಾಗಿದ್ದರೆ ನಾರದರೇ ಇದೋ ತಮಗೆ ಅಭಿವಂದಿಸುತ್ತೇನೆ. ನಾನೀಗಲೇ ರುಕ್ಮಿಣಿಯ ಮಂದಿರದ ಕಡೆಗೆ ತೆರಳುತ್ತೇನೆ. ನೀವೂ ನನ್ನೊಡನೆ ನಡೆಯಿರಿ.

ದ: ನಾರಾಯಣ ನಾರಾಯಣ ( **ಹೊರಡುವನು** )

**(ತೆರೆ)**

## ನೋಟ, ಎರಡು.

( ರುಕ್ಮಿಣಿದೇವಿಯ ಅಂತಃಪುರದ ಪಕ್ಕದಲ್ಲಿಯ ಉಪವನ. ನೋಡಿದ
ಪಾರಿಜಾತಗಳು ರಾಶಿರಾಶಿಯಾಗಿ ಅರಳಿಬಿದ್ದಿವೆ. ಮೇಲಿಂದಲೂ ಆಗಾಗ್ಗೆ
ಮಳೆಗರೆಯುತ್ತಲಿವೆ, ಮೆಲ್ಲಮೆಲ್ಲಗೆ. ನಡುವೆ ಮರದ ಒಂದು ಬಲಿಷ್ಠ
ಟೊಂಕ ಕಟ್ಟಿದ ಚಂದವಾದ ಬೆಳ್ಳಿಯ ಪೀಠದ ತೂಗುಮಂಚದ ಉಯ
ಉಯ್ಯಾಲೆಯ ಸರಪಳಿಗಳು ಚಿನ್ನದವು. ಆದರೆ ಅವುಗಳಿಗೆ ಹೂವಿನ ದಂಡೆಗ
ಉದ್ದಕ್ಕೂ ಸುತ್ತಿ ಕಟ್ಟಲಾಗಿದೆ.

ಉಯ್ಯಾಲೆಯ ಮೇಲೆ ಶ್ರೀಕೃಷ್ಣನು ಕುಳಿತಿದ್ದಾನೆ. ಕೃಷ್ಣನ ವೇಷಭೂ
ಸಾಂಪ್ರದಾಯಿಕವಿದೆ. ಪೀತಾಂಬರ, ಸೊಂಟಕ್ಕೆ ಸುತ್ತಿದ ಜರತಾರಿಯ
ರತ್ನಖಚಿತ ತೋಳುಪಟ್ಟಿಗಳು. ಕೊರಳಲ್ಲಿ ಕೌಸ್ತುಭ ಪದಕದ ರತ್ನಹಾರ. ಮೇ
ಕೆಳವರೆಗೆ ತೊನೆದಾಡುವ ಪುಷ್ಪುಲ್ಲವಾದ ವೈಜಯಂತಿಯ ವನಮಾಲೆ. ತ
ಕಿರೀಟವನ್ನು ಕೆಳಗೆ ತೆಗೆದಿಡಲಾಗಿ ಬಳಿಯಲ್ಲಿಯೇ ರುಕ್ಮಿಣಿದೇವಿಯು
ಪತಿಯನ್ನು ಸಿಂಗರಿಸುತ್ತಿರುವಳು. ಮಣಿಕಟ್ಟು, ಮೊಣಕೈಗಳಿಗೆಲ್ಲ ಹೂ
ದಂಡೆಗಳನ್ನು ಕಟ್ಟುತ್ತಿರುವಳು. ತನ್ನ ಪ್ರಿಯ ಪ್ರಸಾದನೆಯ ಕೆಲಸದಲ್ಲಿ
ತಾನೇ ತೃಪ್ತಳಾಗಿ ತಲ್ಲೀನತೆಯಿಂದ ಹಾಡುತ್ತಿರುವಳು. ರುಕ್ಮಿಣಿದೇವಿ
ಸತ್ಯಭಾಮೆಗಿಂತ ತುಸು ಪ್ರೌಢೆ. ಚೆಲುವೆಯಾದರೂ ಬಾಲಿಶ ಸಂಭ್ರಮ
ಒಂದು ಯೌವನದ ಶಾಲೀನ ಮೋಹಕತೆಯುಳ್ಳ ಆಕೃತಿ. ತುಸು ಅ
ಪ್ರಕೃತಿ. ತನ್ನ ಪಟ್ಟಪದಗಳ ಕುರಿತು ಒಂದು ಬಗೆಯ ಚೇತರಿಕೆಯಿಂ
ಯಾವಾಗಲೂ ನಡೆಯುವಂತಹಳು. ಈ ತರದ ಹುರಿಗೊಂಡ ವ್ಯಕ್ತಿ
ಭಾಮೆಯೊಂದಿಗೆ ಒಡನಾಟದಲ್ಲಿ ವ್ಯಕ್ತವಾಗುತ್ತದೆ.

ಹಾಡು ಮುಗಿಯುತ್ತ ಬಂದಾಗ ಕೈಯಲ್ಲಿ ಒಂದು ದೊಡ್ಡ ಹೂ ಮಾಲೆ
ತೆಗೆದುಕೊಂಡು ಶ್ರೀ ಕೃಷ್ಣನ ಹತ್ತಿರ ಬರುವಳು. ಮತ್ತು ಪ್ರಿಯಾರಾಧ
ಸಲಜ್ಜ ಸಂತೋಷದಲ್ಲಿ ಆತನ ಕೊರಳಲ್ಲಿ ತೊಡರಿಸುವಳು)

ಶ್ರೀಕೃಷ್ಣ: ( ಹರ್ಷ ನಿರ್ಭರನಾಗಿ ಆಕೆಯ ಎರಡೂ ಕೈಗಳನ್ನು ಎದೆಗೆ ಅವಚಿ ಹಿ
ದೇವೀ ! ನಿಜವಾಗಿಯೂ ನಿನ್ನ ಪ್ರೇಮಕ್ಕೆ ಎಣೆಯೇ ಇಲ್ಲ.

ರುಕ್ಮಿಣಿ: ( ನಂಬಿಗೆಯಿಲ್ಲದ ನಗೆಯಿಂದ ) ಸಾಕು ಬಿಡಿರಿ, ಅದನ್ನು ನಾನು ಕೇ
ಇಲ್ಲ. ಅದು ಎಷ್ಟೋ ಬಾರಿ ಎಲ್ಲೆಡೆಯಲ್ಲಿಯೂ ಹೇಳಿ ಬಾ
ಕೂತು ಹೋದ ಮಾತು. ಆ ಸತ್ಯಭಾಮೆಯ ಮುಂದೆ ಎಷ್ಟು
ಇದನ್ನೇ ಹೇಳಲಾಗಿದೆಯೋ ಏನೋ !

ಕೃಷ್ಣ: ಆದರೇನಾಯಿತು? ಆದರಿಂದ ಈಗ ನಿನ್ನ ಕುರಿತು ನುಡಿದ ಮ
ಹೇಗೆ ತಪ್ಪಾದೀತು ? ಆಡಿದ ಮಾತು ಸಂದರ್ಭಕ್ಕೆ ಸರಿಗೂ
ಸರಿ.

ರುಕ್ಮಿಣಿ: ಬರೇ ಸಂದರ್ಭಕ್ಕೆ ಸರಿಯಾದರೆ ಸಾಲದು. ಅರ್ಥಕ್ಕೂ ಹೊಂದಿರ
ಎಣೆಯಿಲ್ಲದ ಸಂಗತಿ ಯಾವಾಗಲೂ ಒಂದೇ ಇರಬೇಕು ನ

ಉತ್ತಮವೆಂದರೆ ಎಂದೆಂದಿಗೂ ಒಂದೇ. ಇಬ್ಬರ ಪ್ರೀತಿಯೂ ಕೂಡಿಯೇ ಹೇಗೆ ಉತ್-ತಮವಾದೀತು? ಒಂದು ಉತ್ತಮವಿದ್ದರೆ ಇನ್ನೊಂದು ಉತ್-ತ್ತರವಿರಬೇಕು.

ಷ್ಣ: (ನಕು) ಈ ಉತ್ತರದಲ್ಲಿ ಅರ್ಥವೇ ಇಲ್ಲ, ನೋಡು. ಬರೇ ಸ್ವಾರ್ಥವು ಮಾತ್ರವಿದೆ. ಪ್ರೀತಿಯಲ್ಲಿ ತುಲನೆಗೆ ಆಸ್ಪದವೇ ಇರುವದಿಲ್ಲ. ದೀಪದಿಂದ ದೀಪಗಳು ಉರಿದರೆ ಜ್ಯೋತಿಯೇನು ಕುಂದುವದೇ? ನಾನು ಈ ಕೊಳಲನ್ನು ನುಡಿಸುವದನ್ನು ನೀನು ಕೇಳಿಲ್ಲವೆ ? ಇದರಲ್ಲಿ ಪ್ರತಿಯೊಂದು ಶ್ರುತಿಯೂ ಮಿಗಿಲಾ ದದ್ದಲ್ಲವೇ? ಮೆಚ್ಚುಗೆಯಾಗುವಂತಹದಲ್ಲವೇ? ಸ್ವಯಂಪೂರ್ಣವಲ್ಲವೇ? ಪ್ರೀತಿಯ ರೀತಿಯೂ ಹಾಗೆಯೇ! ಪ್ರತಿಯೊಂದು ವ್ಯಕ್ತಿಯ ಪ್ರೀತಿಯ ಪ್ರತಿಯೊಂದು ರೂಪವೂ ಪ್ರತಿಯೊಂದು ರಸವೂ ಅದ್ವಿತೀಯವು, ಅಪ್ರತಿಮವು, ಪರಿಪೂರ್ಣವು ಪ್ರೀತಿಯ ಭಾಷೆಯಲ್ಲಿ ತಾರತಮ್ಮ ಭಾವಗಳೇ ಇಲ್ಲ.

ಕ್ಮಿಣಿ: **(ಪ್ರಣಯ ಕುಪಿತ ಮಾನಿನಿಯಂತೆ)** ಸಾಕು ನಿಮ್ಮ ಪ್ರೀತಿಯ ಭಾಷೆ! ಇದು ಬರೇ ಭಾಷೆಯ ಪ್ರೀತಿ. ನಾನು ಸ್ವಾರ್ಥಿಯಲ್ಲವೇ? ಆ ಭಾಮೆಯು ದೊಡ್ಡ ಸಾಧ್ವಿಯು ! ನನ್ನ ಪಾಲಿಗೆ ನಾನು ಇದ್ದು ಬಿಡುತ್ತೇನೆ. ನನ್ನ ಸಂಗತಿ ಏಕೆ ಹಿಡಿಯುವಿರಿ ? ಹೋಗಿರಲ್ಲ ಆ ಸತಿಸತ್ಯಭಾಮೆಯ ಇದುರಿಗೆ ಕೈಕಟ್ಟಿಕೊಂಡು ನಿಲ್ಲಲಿಕ್ಕೆ. **(ಸಿಡುಕಿನಿಂದ ಸಿಡಿಮಿಡಿಯಾಗಿ ದೂರಹೋಗಿ ಮೋರೆ ತಿರುವಿಕೊಂಡು ನಿಲ್ಲುವಳು.)**

ಷ್ಣ: ಅಬ್ಬ ! ಎಂತಹ ದರ್ಪ ! ಎಂತಹ ಗರ್ವ ! ಆಕೆಯೂ ಅಂಥವಳೇ! **(ರುಕ್ಮಿಣಿಯ ಕಡೆಗೆ ಒಡಂಬಡಿಸುವ ದನಿಯಲ್ಲಿ)** ಛೇ. ಛೇ ಇದೆಲ್ಲಿಯ ಅವತಾರ ತಂದು ಬಿಟ್ಟೆ! **(ಎದ್ದು ಹೋಗಿ ಆಕೆಯ ಕೈ ಹಿಡಿಯುತ)** ನಿನ್ನ ಪ್ರೀತಿಗೆ ನಿಜವಾಗಿಯೂ ಎಣೆಯಿಲ್ಲ-ಇತಿಯಿಲ್ಲ, ಮಿತಿಯಿಲ್ಲ. ನಿನ್ನಂಥವಳು-ನೀನೇ ಸರಿ!

**(ಇವೆಲ್ಲ ಮಾತುಗಳನ್ನು ಕೃತಕ ಅನುತಾಪದ ದನಿಯಲ್ಲಿ ಅನ್ನುತ್ತ ಆಕೆಯನ್ನು ಕೈಹಿಡಿದು ತಂದು ಉಯ್ಯಾಲೆಯ ಮೇಲೆ ಕೂರಿಸುತ್ತಾನೆ. ತನ್ನ ತಲೆಯ ಪುಷ್ಪ ಮುಕುಟವನ್ನು ಆಕೆಯ ಕಾಲ ಮೇಲೆ ಇಡಲು ಹೋಗುತ್ತಾನೆ. ಒಡನೆ, ಆಕೆಯು ಬಾಗಿ ಅದನ್ನು ಎತ್ತಿಕೊಂಡು ನಗು ಬಂದರೂ ಹತ್ತಿಕ್ಕಿ ಗಂಭೀರವಾಗಿರಲು ಹೆಣಗುತ್ತಾಳೆ.)**

ಷ್ಣ: ಇನ್ನು ನಗು ನೋಡುವಾ ! ಇಲ್ಲವೇ ಮತ್ತೆ ಸಿಡುಕೇ ? ಇದೋ ಪ್ರೇಮದೇವತೆಯನ್ನು ಪ್ರಸನ್ನ ಪಡಿಸಲು ಪೂಜಾರಾಧನೆಗಾಗಿ ಭಕ್ತನು ಸಿದ್ಧನೇ ಇದ್ದಾನೆ !

(ಹಾಡುತ್ತ ಹೂ ದಂಡೆಗಳನ್ನು ಮುಡಿಸುವನು. ತನ್ನ ಕೊರಳಿನ ಹಾರ ... ತೊಡಿಸುವನು. ಆಕೆಯು ಮೋರೆ ತಿರುವಿಗತ್ತ ಹೋಗಿ ಮನ ...ಲಿ ಯತ್ನಿಸುವನು. ಕೊನೆಗೆ ತನ್ನ ಪುಷ್ಪ ಮುಕುಟವನ್ನು ಆಕೆಯ ತಲೆಯ ಮೆ... ಇಡುವನು. ಇದುವರೆಗೆ ತಡಕೊಂಡ ಸಿಟ್ಟಿನ ಬಿಗುವೆಲ್ಲ ಹುಸಿಯಾಗಿ ಹೊ... ರುಕ್ಮಿಣಿಯು ನಗೆ ತಡೆಯಲಾರದೇ, ನಾಚಿಕೆ, ಮುನಿಸು, ಬಿಂಕು, ಹಿಗ್ಗು ಇವೆಲ್ಲ... ಅಭಿನಿವೇಶದ ಮೋಹಕ ಮಿಶ್ರಣವನ್ನು ತೋರ್ಪಡಿಸುತ್ತ ನುಡಿಯುವಳು...

ರುಕ್ಮಿಣಿ: ಸಾಕು ಬಿಡಿ, ಇದೊಂದು ವಿದ್ಯೆ ಚನ್ನಾಗಿ ಗೊತ್ತಿದೆ !

ಕೃಷ್ಣ: ಅದೇನಿಲ್ಲ. (ಹುಸಿಗಾಂಭೀರ್ಯದ ಹಟದಲ್ಲಿ) ನಿನಗೂ ಸಾಕಾಗಿಲ್ಲ ನನ... ಬೇಕಾಗಿದೆ. ಪ್ರೇಮದೇವತೆಯು ಪ್ರಸನ್ನಳಾದ ವಿನಹ ಈ ಪೂಜೆ... ತಡೆಯುವಂತಹದಲ್ಲ ! ಬೇಕಾದರೆ ಭಾಮೆಯೇ ಬರ....... (ದೂ... ಭಾಮೆಯೇ ಬರುವದನ್ನು ನೋಡಿ ದಿಗಿಲುಗೊಂಡು) ಎಲಾ ಬಂದೇ ಬಿಟ್ಟ... ಚಿಂತಾಮಣಿ !

(ಭಾಮೆಯು ಬಂದುನಿಂತು ಕ್ಷಣಕಾಲ ಕೃಷ್ಣನ ಪ್ರಿಯಾರಾಧನೆಯನ್ನು ಕಿಡಿಗಣ್ಣಿ... ನೋಡಿ ನೊಂದ ನಾಗಿಣಿಯಂತೆ ಉರಿಯುಸಿರು ಬಿಡುತ್ತ ಅಬ್ಬರಿಸುವಳು...

ಭಾಮೆ: ಸೈ ! ಸೈ ! ಒಳ್ಳೇssss ಹುಚ್ಚಾಟ ನಡೆದಿದೆ ! ಮೂರ್ತಿಯು ಇಲ್ಲಿ... ಬಂದು ಕೂತಿದೆಯೇ ? ಛೀ ! ಈಕೆಯ ಕಾಲಿಗೆ ಬೀಳುವದುಂ... ನಾಚಿಕೆ ಬೆದರಿಕೆ ಏನೂ ತೋರುವದಿಲ್ಲವೇ? ಬೆಣ್ಣೆಯ ಬೊದ... ಬಳಿಯಲ್ಲಿಯೇ ಸುತ್ತಾಡುವ ಬಾವುಗನಂತೆ ಇವಳ ಪಾದದ... ಸುಳಿದಾಡಲು ಸ್ವಲ್ಪವೂ ಮನಸ್ಸು ಹೇಸುವದಿಲ್ಲವೇ?

(ಭಾಮೆಯನ್ನು ನೋಡಿದ್ದರೂ ಗಮನಿಸದಿರುವಂತೆ ಪ್ರಿಯಾರಾಧನೆಯಲ್ಲಿ ತೊಡಗಿದ್ದಂತೆ ನಟಿಸಿದ ಕೃಷ್ಣನು ಆಕೆಯ ಮಾತು ಮುಗಿದೊಡನೆ ... ಆತ್ತಕಡೆಗೆ ನೋಡಿ ಆಶ್ಚರ್ಯವನ್ನು ಪ್ರಕಟಿಸುವನು.)

ಕೃಷ್ಣ: ಯಾರು? ನನ್ನ ಭಾಮೆಯೇ? ಅಯ್ಯೋ ! ಇಲ್ಲಿಯ ತನಕ ನ... ಬಂದಿಯಾ ! ನನ್ನನ್ನು ಕರೆಕಳುಹಿಸಿದರೆ ನಾನೇ ನಿನ್ನೆಡೆಗೆ ... ಬರುತ್ತಿದ್ದೆನಲ್ಲವೇ? (ಆಕೆಯ ಹತ್ತಿರ ಹೋಗಿ ಸಲಿಗೆದೋರುತ್ತ) ನನ್ನ ನ... ನಲ್ಲೆ! ಭಾ ರುಕ್ಮಿಣಿಗೆ ಇದಿರಾಗೋಣ. ಅವಳಿಗೆ ಅನಾಸಕ್ತಿಯೊ... ವಿಚಾರ ತಿಳಿಸಿ ಹೇಳುತ್ತಿದ್ದೆನು. ಅಷ್ಟರಲ್ಲಿ ಕಾಲಿಗೆ ಮುಳ್ಳು ಚುಚ್ಚಿ... ಆದ್ದರಿಂದ ತುಸು ಬಾಗಿ ನೋಡುತ್ತಿದ್ದೆ. (ಭಾಮೆಯು ಸಿಡುಕಿನಲ್ಲಿ ... ತಿರುವಿಕೊಂಡು ದೂರ ಸರಿದು ನಿಲ್ಲುವಳು. ಕೃಷ್ಣನು ಸಂತೈಸಲು ... ನಗುತ್ತ ಆಕೆಯ ಮೈದಡವಿ) ಇದೇನೇ ಭಾಮಾ ! ಇಷ್ಟೊಂದು ಮುನಿ... ಮಾತು ಕೂಡ ಆಡಲಾರೆಯಾ? ನಾನು ನಿನ್ನ ಜೀತದಾಳಲ್ಲವೇ?... ಕುರಿತು ಇಷ್ಟೊಂದು ಕೋಪವೇ? - ಆದರೂ ಅಡ್ಡಿಯಿಲ್ಲ. (ನಕ... ಕೋಪದಿಂದ ಕೆಂಪೇರಿದ ಕಪೋಲಗಳ ಚೆಲುಕಳೆಯು ನಿನ್ನನ್ನು ಇ...

ಸುಂದರಿಯಾಗಿ ಮಾಡುತ್ತಲಿದೆ ! (ಆದರೂ ಭಾಮೆಯು ಮೌನ) ಆಯ್ಯೋ ! ಹುಚ್ಚಿ ! ಹೀಗೇಕೆ ರೇಗುವಿ? ನಡೆ ರುಕ್ಮಿಣಿಗೆ ಕಾಣುವಾ. ರುಕ್ಮಿಣೀ ನೋಡು ನನ್ನ ಭಾಮೆಯು ನಿನ್ನ ಭೇಟಿಗೆಂತ ಬಂದಿರುವಳು. (ಆಕೆಯನ್ನು ಕೈ ಹಿಡಿದು ರುಕ್ಮಿಣಿಯ ಬಳಿಗೆ ಒಯ್ಯಲು ಅನುವಾದಾಗ ಆಕೆಯ ಕೈಯಲ್ಲಿದ್ದ ಹೂವಿನ ಪರಡಿಯ ಕಡೆಗೆ ನೋಟ ಹಾಯ್ದು ಅದನ್ನು ಎತ್ತಿಕೊಂಡು) ಇದೇನು ಭಾಮಾ ! ಪಾರಿಜಾತಗಳೇ? ನನ್ನ ಭಾಮೆ ಎಷ್ಟು ಉದಾರಳು ನೋಡು ರುಕ್ಮಿಣಿ ! ಎಷ್ಟು ಸರಳ ಸ್ವಭಾವದವಳು ! ಎಷ್ಟು ಚತುರಳು! ಎಷ್ಟು ಮಧುರಳು ! ಎಷ್ಟು............

ಭಾಮೆ: ( ತಾಳ್ಮೆಗೆಟ್ಟು ಸಿಡಿಮಿಡಿಗೊಂಡು ) ಸಾಕು ಬಿಡಿ ನಿಮ್ಮ ಮುಖ-ಸ್ತುತಿ!

ಕೃಷ್ಣ: ಛೇ! ಉಂಟೇ? ಇನ್ನೂ ಮುಖಸ್ತುತಿಗೆ ಬಂದೇ ಇಲ್ಲ. ಬರೇ ಸ್ವಭಾವವನ್ನೇ ಹೊಗಳುತ್ತಿದ್ದೇನೆ. ಮುಖವು ಎಲ್ಲರಿಗೂ ತೋರುವುದು ತಾನೇ? ಅದಕ್ಕೆ ಪ್ರತ್ಯೇಕ ಸ್ತುತಿಮಾಡಬೇಕೇ? ಇನ್ನು ನಿನ್ನ ಇಚ್ಛೆಯೇ ಇದ್ದರೆ ನನಗೆ ಅದರಲ್ಲೂ ಆನಂದವೇ. ( ತುಸು ಗಂಟಲ ಹದ ಮಾಡಿಕೊಂಡು. ) ರುಕ್ಮಿಣೀ! ನಮ್ಮ ಸತ್ಯಭಾಮೆಯ ಮುಖಾರವಿಂದದ ಅಂದಚೆಂದಗಳನ್ನು ಎನಿತೆಂದು ಬಣ್ಣಿಸಲಿ? ''ಶಾರದೀ ಪೌರ್ಣಿಮಾ! ನಿರುಪಮ ಮಧುರ ಮುಖಚಂದ್ರಿಮಾ! ಭಾಮಾ ssss !ಶಾರದೀ ಪೌss.............

( ಹಾಗೆಯೇ ಮುಂದೆ ಹಾಡುವವನಿರುವನು. ಆದರೆ ಭಾಮೆಯು ಉರಿದೆದ್ದು ಒಮ್ಮೆ ಜಗ್ಗನೆ ತಿರುಗಿ ಕೃಷ್ಣನ ಗಲ್ಲದ ಮೇಲೆ ಒಳಿತಾಗಿ ಏಟು ಕೊಟ್ಟು ರಭಸದಿಂದ ಹೋಗಹತ್ತುವಳು. )

ಕೃಷ್ಣ: ಅಬ್ಬ ( ಗಲ್ಲದಡವಿಕೊಂಡು ) ಎಷ್ಟು ಸೊಗಸಾದ ಸಂಭಾವನೆ ಭಟ್ಟಂಗಿಗೆ! ಎಲಾ! ಹೊರಟೇ ಬಿಟ್ಟಿಯಾ? ಭಾಮೆ! ಭಾಮೆ! ( ಹಿಡಿದು ತರಲು ಹೋಗುತ್ತ ಆಕೆಯನ್ನು ತಡೆದು ) ಹೀಗೇಕೆ ಹುಚ್ಚಿಯಂತೆ ಮಾಡುವಿ.

ಭಾಮೆ: ಬಿಡಿರಿ. ಬಿಡಿರಿ. ನನಗೆ ಹೋಗಗೊಡಿರಿ. ನನ್ನ ಮುಖಚಂದ್ರನು ಕತ್ತಲೆಯಲ್ಲಿಯೇ ಉಳಿಯುವದು ಚಂದ! ರುಕ್ಮಿಣಿಯ ಸೂರ್ಯ ಬಿಂಬದಿದುರು ಬರಲು ದುಡುಕಿದುದಕ್ಕೆ ಹೀಗೆ ಹುಚ್ಚಿಯೆನಿಸಿ ಕೊಂಡಲ್ಲಿ ಆಶ್ಚರ್ಯವಿಲ್ಲ. (ಮಾತಿನ ದನಿಯಲ್ಲಿ ಅಳುವಿನ ಬಿಕ್ಕೆಷ್ಟು ಸಿಡುಕಿನ ಉಕ್ಕೆಷ್ಟು ಎಂತ ಹೇಳಲು ಬರುವಂತಿಲ್ಲ! )

ಕೃಷ್ಣ: ( ಪ್ರಕರಣ ಹದಗೆಡಬಹುದೆಂತ ಹೆದರಿ ) ನನ್ನದೇನು ತಪ್ಪಾಯಿತೇ? ಇಕೋ ಸೆರಗೊಡ್ಡುವೆನು! ( ಮುಂದೆ ಮಾಡಿದ ಕೈಯಿಂದಲೇ ಆಕೆಯನ್ನು

**ಬಳಿಗೆ ಎಳಕೊಂಡು ಆಕೆಯ ಗದ್ದ ಹಿಡಿದು ನಗಿಸಲು ಹವಣಿಸುವನು.)**

ರುಕ್ಮಿಣಿ: **(ಈ ಸಲಿಗೆಯನ್ನು ಸೈರಿಸಲಾರದೆ ಅಸೂಯೆಯಿಂದ ಉರಿದೆದ್ದು)** ನನ್ನಿದುರ ಈಕೆಯ ಆರಾಧನೆಯೇ? ಕೃಷ್ಣಾ! ನಾನು ದೇವಕೀ ದೇವಿಯವರಿದ್ದೆಡೆ ಹೋಗಿಬರುವೆನು. ನಿಮ್ಮ ರಾಸಲೀಲೆ ಯಥಾಸಾಂಗವಾಗಿ ಸಾಗಲಿ **( ಹೊರಟು ಬಿಡುವಳು. )**

ಭಾಮೆ: **( ರೋಷದಿಂದ )** ನನ್ನ ಪ್ರಶಂಸೆ ಪರ್ಯಾಯದಿಂದ ಮಾಡಿದರೂ ಈಕೆ ಸೈರಿಸಲಾಗುವದಿಲ್ಲ! ಬೇಡ ಕೃಷ್ಣಾ ! ನಿಮ್ಮ ರಸರಂಗದಲ್ಲಿ ನಾನು ಬರಿದ ತೊಡಕಾಗಲು ಬಂದೆನು. ಬಿಡು. ನಾನು ಹೋಗುವೆನು. ನಿನ್ನ ಅರೆಬಿ ಪೂಜಾವಿಧಿಯು ಪೂರ್ಣವಾಗಿ ಜರುಗಲಿ. **( ಕೈ ಕೊಸರಿಕೊಂಡು ಬಿರು ನಿಟ್ಟನಲ್ಲಿ ನಡೆದು ಬಿಡುವಳು. )**

ಕೃಷ್ಣ: **(ಕಳವಳದಿಂದ)** ಎಲಾ ! ನನಗೇಕೆ ಹೀಗೆ ಒಮ್ಮೆಲೇ ಕೈಬಿಟ್ಟು ಹೋಗುವಿ ! ತುಸುವೂ ಕನಿಕರವಿಲ್ಲವೇ? **( ಹೋಗಿ ಒಬ್ಬೊಬ್ಬರನ್ನು ಎಳೆದು ತಂದ ತನ್ನ ಪಕ್ಕದಲ್ಲಿ ನಿಲ್ಲಿಸಿಕೊಂಡು )** ನಾನು ಮನುಷ್ಯನಲ್ಲವೇ? ಎರಡು ದೇಹಗ ಎಲ್ಲಿಂದ ಬರಬೇಕು ನನಗೆ ? ಒಬ್ಬರನಂತರ ಒಬ್ಬರ ಸಮಾಚಾ ತೆಗೆದುಕೊಳ್ಳಬೇಕಾಗುವದಿಲ್ಲವೆ ? ನಿಮ್ಮ ಬುದ್ಧಿಗೆ ಏನನ್ನಲಿ? ನಿಮ ಕ್ರಮವಾಚಕ ವಿಶೇಷಣಗಳೇ ಗೊತ್ತಿಲ್ಲ! ಇದಕ್ಕೇ ಅನ್ನುವುದು ಸ್ತ್ರೀಯರಿ ಶಿಕ್ಷಣ ಕೊಡಬೇಕೆಂತ !

ರುಕ್ಮಿಣಿ: **( ಬಿಂಕದಿಂದ )** ಹಾಗೇನಿಲ್ಲ. ನಮ್ಮಣ್ಣ ರುಕ್ಮಿಯು ನನಗೆ ತನ್ನಂತೆಯ ಎಲ್ಲ ವಿದ್ಯೆಗಳನ್ನು ಕಲಿಸಿ ಬಿಟ್ಟಿರುವನು!

ಭಾಮೆ: **( ತಾನು ಹಿಂದುಳಿಯಬಾರದೆಂಬ ಹಟದಿಂದ )** ನಾನೇನು ಅಡವಿಂ ಕೋತಿಯಂತ ತಿಳಿಯಬೇಕಾಗಿಲ್ಲ. ಆಗಲಿ ನಮ್ಮಿಬ್ಬರ ಪರೀಕ್ಷೆ ಆಗಿಯೆ ಹೋಗಲಿ!

ಕೃಷ್ಣ: ಮತ್ತೆ ಬಂತಲ್ಲ ಪೀಕಲಾಟ! ಹೋಯಿತು. ಆಗುವ ಮೊದಲೇ ಪರೀಕ್ಷೆ ಹೋಗಿ ಬಿಟ್ಟಿತು! **( ಮಕ್ಕಳಿಗೆ ಬುದ್ಧಿ ಹೇಳುವ ಗಡಸು ದನಿಯಲ್ಲಿ** ದೇವಿಯರೇ, ಹೀಗೇಕೆ ಹಿರಿಯರಿಗೊಪ್ಪದ ಹುಡುಗಾಟಿಕೆಯು ಹಾರಾ ಹೋರಾಟ ನಡಿಸಿರುವಿರಿ? ನೀವೀರ್ವರೂ ಯಾದವ ಸ್ತ್ರೀ ಸಮಾಜಕ್ಕೆ ಆದರ್ಶಪ್ರಾಯರು.

ಭಾಮೆ: ನನಗೇನು ಅಷ್ಟು ಪ್ರಾಯಬಂದಿಲ್ಲ.

ರುಕ್ಮಿಣಿ: ಪ್ರಾಯ ಬಂದಿಲ್ಲವಂತೆ ! ಇನ್ನೂ ಚಿಕ್ಕಬಾಲೆ 'ಆದರ್ಶದಲ್ಲಿ' ಒವ ನೋಡಿಕೋ.

ಕೃಷ್ಣ: ಅಯ್ಯೋ ! ಮಂಕೇ! ನನ್ನ ಮಾತಿನ ಅಪಾರ್ಥ ಮಾಡಿಕೊಳ್ಳ ಬೇಡಿರಿ! ನಿಮ್ಮ ನಡತೆ ಮಂದಿಗೆ ಮಾದರಿಯಾಗಿರಬೇಕಲ್ಲವೇ? ಮುತ್ತೈದೆಯರಿಗೆ ಮೇಲ್ಪಂಕ್ತಿಯಾಗಿರಬೇಕಲ್ಲವೇ?

ಭಾಮೆ: **(ಅಸಹನೆಯಿಂದ)** ನಾನೇಕೆ ಮಾದರಿಯಾಗುವದು? ಈಕೆ ಇರುವಳಲ್ಲ ಪಟ್ಟದರಸಿ! ಮೇಲ್ಪಂಕ್ತಿ ಹಾಕಿಕೊಡಲಿ ಬೇಕಾದರೆ.

ರುಕ್ಮಿಣಿ: **(ಬುಸುಗುಡುತ್ತ)** ಅಷ್ಟೇನು ಹಂಗಿಸಬೇಕೆಂತಿಲ್ಲ! ಜನರ ಕಣ್ಣಿಗೆ ಚಿಕ್ಕರಸಿಯೇ ಚಕ್ಕಂದದ ಚಿಕ್ಕೆ! ನಿನ್ನ ಮೆಚ್ಚಿನ ಮಣಿ! ಮುದ್ದಿನ ಕಣಿ! ಆಕೆ ತೋರಿದ್ದೇ ಧೋರಣ! ತಿದ್ದಿದ್ದೇ ಓರಣ ! ಪಟ್ಟದರಸಿ ಪಚ್ಚೆಯರಿವೆಯಂತೆ ಬರೇ ಅಲಂಕಾರಕ್ಕೆ ಮಾತ್ರ !

ಭಾಮೆ: ಅಲ್ಲ ಅಹಂಕಾರಕ್ಕೆ ಪಾತ್ರ !

ರುಕ್ಮಿಣಿ: ( **ಉರಿದೆದ್ದು** ) ಹೂಂ ssss !

ಕೃಷ್ಣ: ( **ಇಬ್ಬರ ಬಾಯನ್ನು ಮುಚ್ಚಿ** ) ಮತ್ತೆ ಆರಂಭವಾಯಿತೇ ಮಹಾ ಯುದ್ಧಕ್ಕೆ ! ನಿಮಗೆ ಮಾದರಿಯವರೆಂದದ್ದು ನನ್ನ ತಪ್ಪು! ನೀವು ಬರೇ ಮಾತರಿಯದವರು! ಯಾರು ಪಟ್ಟದರಸಿ! ನಾನು ಅರಸನಿದ್ದರಲ್ಲವೇ ನೀವು ಅರಸಿತನಕ್ಕಾಗಿ ಬಡಿದಾಟ ಮಾಡುವದು? ನಮ್ಮಣ್ಣ ಬಲಭದ್ರರು ಅರಸರು! ರಾಣೀ ರೇವತೀ ದೇವಿಯವರು ಪಟ್ಟದರಸಿಯರು! ನಿಮ್ಮ ಈ ಬುದ್ಧಿಯಿಂದ ಅಲ್ಲದ ರಾಜಕಾರಣವನ್ನು ಮತ್ತೆ ಎಬ್ಬಿಸಬೇಡಿರಮ್ಮಾ! - ನಿಮಗೆ ಕೈ ಜೋಡಿಸುತ್ತೇನೆ! ( **ಒಮ್ಮೆಲೇ ದನಿ ತಗ್ಗಿಸಿ ಸಲಿಗೆಯಿಂದ)** ಇದು ನೋಡು ಭಾಮೆ, ನೀನು ಬಂದ ವಿಷಯ ಹಾಗೆಯೇ ಉಳಿಯಿತು. ರುಕ್ಮಿಣೆ! ಇಲ್ಲಿ ನೋಡು ( **ಆಕೆ ದೂರದಲ್ಲಿ ಇಟ್ಟ ಪರಡಿಯನ್ನು ತಂದು ಹಿಡಿತುಂಬ ಹೂವು ಹಿಡಿದೆತ್ತಿ** ) ನಿನ್ನ ಸುಶೀಲೆಯಾದ ಸವತಿಯು ಅದೆಷ್ಟು ಪ್ರೀತಿಯಿಂದ ಇದಿಷ್ಟು ಪಾರಿಜಾತಗಳನ್ನು ನಿನಗಾಗಿ ತಂದಿರುವಳು. **(ಈ ಮಾತು ಉಪರೋಧವಾಗಿ ನುಡಿದುದರಿಂದ ರುಕ್ಮಿಣಿಯು ನಗುವಳು.)**

ರುಕ್ಮಿಣಿ: ( **ನಕ್ಕು** ) ಅಯ್ಯೋ! ಅವಳೇಕೆ ತರುವ ಆಯಾಸಪಡಬೇಕಾಗಿತ್ತು! ಇಲ್ಲೆಲ್ಲ ಅರಳಿ ಉರುಳಿ ಬಿದ್ದಿವೆ ಪಾರಿಜಾತಗಳು ರಾಶಿರಾಶಿಯಾಗಿ.

ಭಾಮೆ: **(ಇದುವರೆಗೆ ಸಿಟ್ಟಿನ ಸಂಭ್ರಮದಲ್ಲಿದ್ದ ಆಕೆಯ ದೃಷ್ಟಿಯು ಈಗ ಸುತ್ತಲೂ ಹರಡಿಬಿದ್ದ ಪಾರಿಜಾತಗಳ ಕಡೆಗೆ ಹೊರಳುವದು.** ) ಇದೇನು ? ಮರವಿಲ್ಲದೇ ಹೂಗಳೆಲ್ಲಿಂದ ಬೀಳುತ್ತಿರುವವು? **(ಕೃಷ್ಣನನ್ನೇ ನಿಟ್ಟಿಸಿ ದಿಟ್ಟಿಸುವಳು. ಅವನು ತುಸು ಕಪಟದಿಂದ ನಗುವನು.)** ತಿಳಿಯಿತು. ಇದೆಲ್ಲ ನಿನ್ನ ಕೆಲಸ! ನನ್ನ ಅಪಮಾನ! ನಗುವಿಯಾ? ಅಯ್ಯೋ! ನನಗೇಕೆ ಬೇಕಾಗಿತ್ತು ಈ

ಪಾರಿಜಾತ ವೃಕ್ಷ! ಇಚ್ಛೆಯಿದ್ದರೆ, ಇವಳಿಗೆ ಬೇಕಾಗಿದ್ದರೆ, ಇಲ್ಲಿಯ ತಂದಿರಿಸಬಹುದಾಗಿತ್ತು. (**ಸರಸರನೆ ಹೋಗ ಹತ್ತುವಳು.**)

**ಕೃಷ್ಣ:** (**ಆಕೆಯನ್ನು ತಡೆದು**) ಇದೆಲ್ಲಿಗೆ ಹೊರಟೆ ?

**ಭಾಮೆ:** ಆ ವೃಕ್ಷವನ್ನು ಕಡಿದು ಹಾಕಿಸುವೆನು.

**ಕೃಷ್ಣ:** ಹುಚ್ಚಿ! ದುಡುಕಬೇಡ. ಅದು ಮಹಿಮೆಯ ಸ್ಮಾರಕ! ಹಿರಿಮೆಯ ಪ್ರತೀಕ ಮಾನವರು ದೇವತೆಗಳ ಮೇಲೆ ಮಾಡಿದ ದಾಳಿಯ ಗೆಲುವಿ ಹೆಗ್ಗುರುಹು! ನನಗಾಗಿ ನಿನಗಾಗಿ ಪ್ರಾಣವಿತ್ತ ಅಸಂಖ್ಯ ಯಾದವ ವೀರ ರಕ್ತದ ಅಪಮಾನ ಮಾಡಬೇಡ! ನಿಲ್ಲು. ಇದರಲ್ಲಿ ನನ್ನದು ಎಳ್ಳಷ್ಟು ತಪ್ಪಿಲ್ಲ.

**ಭಾಮೆ:** ತಪ್ಪು ನನ್ನದೇ ಸರಿ ! ನಾನು ಹಟ ಹಿಡಿದು ಇಳೆಗಿಳಿಸಿದೆನಲ್ಲವೆ ಪಾರಿಜಾತವೃಕ್ಷವನ್ನು? ದೇವರ ಮೇಲೆ ದಾಳಿ ..........

(**ನಾರದರು ಬರುವರು.**)

**ನಾರದ:** (**ನಗುತ್ತ**) ಇದೇನು ಕೃಷ್ಣಾ ! ದೇವರ ಮೇಲೆ ದಾಳಿ ನಡೆದಿದೆಯೇ ದೇವಿಯರೆಲ್ಲ ದೇವರ ಮೇಲೆ ಉರಿದು ಎದ್ದರೆ ನಮ್ಮ ಭಕ್ತ ಗತಿಯೇನು?

**ಕೃಷ್ಣ:** ಅಹುದು! ಮುನಿಗಳೇ ! ತಕ್ಕ ಸಮಯಕ್ಕೆ ಬಂದಿರಿ ನೋಡಿ! ನಿಮ ದೇವರ ಮೇಲೆಯೇ ಈಗ ದಾಳಿ ನಡೆದಿದೆ! ದೇವರ ರಕ್ಷಣೆಗೆ ಭಕ್ತರ ಬರದಿದ್ದರೆ ಇನ್ನೇನು ಗತಿ? ಈಗ ನನ್ನ ಪಕ್ಷ ತುಸು ಬಲವಾಯಿತು ಹೂಂ! ಭಾಮೆ, ಈಗ ಹೇಳು ನಿನ್ನ ದೂರು ನಮ್ಮ ಮುನಿಗಳ ಮುಂದೆ ಎಲ್ಲ ಹೇಳಿ ಬಿಡು. ನನ್ನದು ತಪ್ಪಿಲ್ಲವೆಂತ ಸಾರಲು ಈ ನಾರದರೆ ಸಾಕ್ಷಿ !

**ಭಾಮೆ:** ಸರಿ ! ಒಳ್ಳೇ ಸಾಕ್ಷಿ ! ಯಜಮಾನರಿಗೆ ಭಟ್ಟರ ಸಾಕ್ಷಿಯಂತೆ ಭಗವಂತನಿಗೆ ಭಕ್ತನ ಸಾಕ್ಷಿ! ನಾರದರೇ, ತಾವು ಏನು ನ್ಯಾಯ ಕೊಡುವಿರೆಂಬುದು ಸ್ಪಷ್ಟವೇ ಇದೆ. ಆದರೂ ನಾನು ಹೇಳಲಿಲ್ಲವೆಂತ ಆಗಬಾರದು. ಅನ್ಯರಿದುರು ನನ್ನದು ಅನ್ಯಾಯವೆಂಬ ದೂಷಣೆ ಬೇಡ ಪಾರಿಜಾತವೃಕ್ಷವನ್ನು ತಂದಿಟ್ಟದ್ದು ನನ್ನಲ್ಲಿ ! ಈಗ ಅದರ ಹೂಗಳೆಲ್ಲ ಅರಳಿ ಉರುಳಿ ಬೀಳುವದು ಇಲ್ಲಿ ರುಕ್ಮಿಣಿಯ ಉಪವನದಲ್ಲಿ! ಇದೆಲ್ಲಿಯ ನ್ಯಾಯ!

**ನಾರದ:** ಛೇ! ಛೇ! ಇದು ತೀರ ಅನ್ಯಾಯವು ! ಘೋರ ಅನ್ಯಾಯವು ಹೀಗಾಯಿತೆ? ಹೀಗಾಗುವದುಂಟೇ?

ಭಾಮೆ: ( ಗೆಲುವಿನ ಹಿಗ್ಗಿನಲ್ಲಿ ) ಅಂದ ಮೇಲೆ ಈ ಮೂರ್ತಿಯು ಮಾಡಿದ್ದು ಅನ್ಯಾಯವಲ್ಲವೇ ?

ನಾರದ: ಛೇ ಅದು ಹೇಗಾಯಿತಮ್ಮಾ ! ಹೂಗಳನ್ನೆಲ್ಲ ರಾಶಿರಾಶಿಯಾಗಿ ಹೊತ್ತು ಹಾಕಿದ್ದು " ಈ ಮೂರ್ತಿಯೇ "? ಅನ್ಯಾಯವಾದದ್ದು ಗಾಳಿಯ ಮೂಲಕ. ಆಗಲೇ ನಾನು ಊಹಿಸಲಿಲ್ಲವೇ ಈ ಗಾಳಿಯ ಗುಟ್ಟು! ಇದು ನೋಡಿ ಈ ಪ್ರಾಕಾರದಾಚೆಗೇ ತಮ್ಮ ಪಾರಿಜಾತ ವೃಕ್ಷವಿದ್ದದ್ದು! ಅತ್ತ ಪಶ್ಚಿಮದಿಂದ ಗಾಳಿಯ ರಭಸ ತೀರ ವಿಪರೀತ ! ಮರವು ಇದೋ ಈಚೆಗೆ ಬಾಗಿಬೆಳೆದು ಕೊಂಬೆಗಳೆಲ್ಲ ಇತ್ತಲೇ ಚಾಚಿ ಬಲಿತಿವೆ. ಹೂಗಳೆಲ್ಲ ಬಂದು ಇಲ್ಲಿಯೇ ಬೀಳುತ್ತವೆ ! ಇಷ್ಟೇ ರಹಸ್ಯ ಈ ವಾದದಲ್ಲಿ! ಇದು ನಮ್ಮ ತಂಬೂರೆಯ ದಂಡಿಗೆಯಷ್ಟು ನೇರವಾದ ಸಂಗತಿ!

ಕೃಷ್ಣ: ಅಹುದು ನೋಡಿ, ಮುನಿಗಳೇ! ತಂಬೂರಿದಾಸಯ್ಯನ ಕೆಲಸಬಿಟ್ಟು ತೋಟದ ಬೇಸಾಯದಲ್ಲಿ ನಿಮ್ಮ ಕೈ ಹೆಚ್ಚು ಮೇಲಾಗುತ್ತಿತ್ತು ನೋಡಿ!

ನಾರದ: ಇರಲಿ ಬೀಡು! (ನಕ್ಕು) ಎಷ್ಟೆಂದರೂ ಗುರಿಯಿಲ್ಲದ ಗಾಳಿ ! ಗಾಳಿಯೊಂದಿಗೆ ಹೋರಾಡುವದು ನಿಮ್ಮಂಥ ಜಾಣೆಯರಿಗೆ ಚೆಂದವೇ?

ಕೃಷ್ಣ: ನೋಡಿದಿಯಾ ಭಾಮೆ, ತಪ್ಪು ಯಾರದಂತೆ! ಅನ್ಯಾಯವಾದದ್ದು ಗಾಳಿಯಿಂದ! ಆರೋಪ ಹೇರಿದ್ದು ನನ್ನ ಮೇಲೆ! ಮೇಲಾಗಿ ತುಸು ವಿಚಾರ ಮಾಡಿನೋಡು ಭಾಮಾ, ರುಕ್ಮಿಣಿಯ ಉಪವನದಲ್ಲಿಯೇ ಹೂಗಳು ಬೀಳಬೇಕೆಂದಿದ್ದರೆ ವೃಕ್ಷವನ್ನು ಇಲ್ಲಿಯೇ ತಂದಿರಿಸಿ ಬಿಡುತಿದ್ದೆನಲ್ಲವೇ? ನಾನೇನು ಹಾಗೆ ಮಾಡಿರುವೆನೇ ?

ಭಾಮೆ: ಹಾಗೆ ಮಾಡಬೇಡಿರೆಂತ ಯಾರು ಹೇಳಿದರು? ಈಗಲಾದರೂ-

ಕೃಷ್ಣ: ( ಆಕೆಯ ಬಾಯಿ ಮುಚ್ಚಿ ) ಅದೆಲ್ಲ ಈಗ ಬೇಡ ! ನಿನ್ನ ಮಾತಿನಲ್ಲಿ ಹುರುಳಿಲ್ಲ! ಅಲ್ಲದ ಸಲ್ಲದ ವಿಕಲ್ಪಗಳನ್ನು ತುಂಬಿಕೊಳ್ಳಬೇಡ ಇನ್ನು ನಿನ್ನ ಚೆಂದ ತಲೆಯಲ್ಲಿ!

ರುಕ್ಮಿಣಿ: (ರೇಗಿ) ಈಗ ತಿಳಿಯಿತು ! ಕೊನೆಗೂ ವೃಕ್ಷವು ಭಾಮೆಯ ಸಲುವಾಗಿಯೇ ತಂದಿದ್ದೀರಲ್ಲವೇ? ನನಗೆ ಹೂಗಳು ಸಿಗಬೇಕಂತ ನಿಮ್ಮ ಇಚ್ಛೆ ಇಲ್ಲವೆಂಬಂತಾಯಿತು ?

ಕೃಷ್ಣ: ( ಬೇಸರದ ದನಿಯಲ್ಲಿ ) ಏನಾಯಿತೋ! ಏನು ಹೋಯಿತೋ! (ಆಕೆಯ ಬಳಿಗೆ ಹೋಗಿ ತುಸು ಕಿರಿದನಿಯಲ್ಲಿ) ಛೀ ಹುಚ್ಚಿ ! ನಿನಗಾಗಿ ಅಲ್ಲವೆಂತ ನಾನೆಲ್ಲಿ ಅಂದೆನೆ? ಇಲ್ಲವಾದರೆ ಇಲ್ಲೆಲ್ಲ ಹೀಗೆ ಪುಷ್ಪ ವೃಷ್ಟಿಯಾಗುತಿತ್ತೇ ?

ರುಕ್ಮಿಣಿ: ಅದೂ ನಿಜ. ಆದರೂ -

ಭಾಮೆ: ( **ಕತ್ತೆತ್ತಿ ಆಕೆಯ ಕಡೆಗೆ ಸಾಶಂಕವಾಗಿ ನೋಡಿ** ) ಅದೇನು? ಕುಲುಕುಲು ಮಾತು ನಡೆಯುತ್ತದಲ್ಲಿ? ನನ್ನ ಕಣ್ಣು ಕಟ್ಟಲಿಕ್ಕೆ-

ಕೃಷ್ಣ: ( **ತನ್ನನ್ನು ಸಾವರಿಸಿಕೊಳ್ಳುವ ಹುಸಿನಗೆಯಲ್ಲಿ** ) ಏನಿಲ್ಲ! ಯಾರ ಕಣ್ಣು ಕಟ್ಟುವುದಿಲ್ಲ. ಮುನಿಗಳಿದುರು ನಮ್ಮ ಕಣ್ಣು ಕಟ್ಟಾಟವೇ? ಯಾರು ಏನಂದಾರು? ಮೇಲಾಗಿ ನಿನ್ನ ಕಣ್ಣು ಕಟ್ಟಲಿಕ್ಕೆ ಇವಳ ಬಳಿಗೇಕೆ ಬರುತ್ತಿದ್ದೆನು ನಾನು ? ಈಕೆ ನಿನ್ನ ಅಕ್ಕನಲ್ಲವೇ? ಈಕೆಯ ತಲೆಯೂ ನಿನ್ನಷ್ಟೇ ಚೆಂದ! ( **ರುಕ್ಮಿಣಿ ಏನೋ ಗೊಣಗುಟ್ಟುವಳು**) ಏsss! ಸುಮ್ಮನಿರು! (**ಆಕೆಗೆ ಕಣ್ಣಿನಿಂದ ಸನ್ನೆಮಾಡಿ**) ಇನ್ನು ನಾರದರೇ, ನಿಮ್ಮ ನಿರ್ಣಯದ ಬಗ್ಗೆ ನಾನು ಅತ್ಯಂತ ಆಭಾರಿಯಾಗಿದ್ದೇನೆ. (**ದಾಸಿಯೋರ್ವಳು ಬರುವಳು**) ಏನೇ ವೃಂದೇ? ಏಕೆ ಬಂದಿಯೇ? ದೇವಕೀದೇವಿಯವರು ನಮ್ಮ ಸತ್ಯಭಾಮೆಯರನ್ನು ಕರೆದಿರುವರೇ ?

ಭಾಮೆ: ( **ಸಿಡುಕಿನಿಂದ** ) ಯಾರು ಏಕೆ ಕರೆದಾರು? ಎssssಲ್ಲ ಗೊತ್ತಿದೆ! ನಾನಿಲ್ಲಿ ಇರುವದು ಬೇಡವಾಗಿದೆ. ಆಗ ಹೊರಟಿದ್ದಳಲ್ಲ ರುಕ್ಮಿಣಿ, ದೇವಿಯವರಿದ್ದಲ್ಲಿ ಹೋಗಲು. ಅವಳೇ ಏಕೆ ಇನ್ನೂ ಬಂದಿಲ್ಲವೆಂತ ದೇವಿಯವರು ಕರೆಕಳುಹಿಸಿರಬಹುದು! ನಾನು ಹೋಗ ಬೇಕೆಂತಿದ್ದರೆ ಹಾಗೆಯೇ ಬಿಚ್ಚಿ ಹೇಳಬಾರದೇ ? ದೇವೀಭಕ್ತರೂ ದೇವಭಕ್ತರೂ ಒತ್ತಟ್ಟಿಗೆ ಹರಟುತ್ತ ಉಳಿಯಿರಿ. ನಾನು ಹೊರಟೆನು.

( **ಅಬ್ಬರದಲ್ಲಿ ಹೋಗಿಬಿಡುವಳು.**)

ರುಕ್ಮಿಣಿ: ನಾನು ಇಲ್ಲಿದ್ದರೆ ಭಾಮೆಗೆ ಹೊಟ್ಟೆಶೂಲಿ ! ನಡೆಯಿರಿ ಅವಳ ಬೆನ್ನಿಗೇ! ಈ ಭಕ್ತರು ಅಲ್ಲಿಂದಲೇ ಬಂದಿರುವರು! ಭಗವಂತನನ್ನೂ ಅಲ್ಲಿಗೆ ಒಯ್ಯಿರಿ. ನನ್ನನ್ನು ಬಯ್ಯುತ್ತ ಕುಳ್ಳಿರಿ. ನಾನು ಹೋಗುತ್ತೇನೆ. ( **ಸಿಟ್ಟಿನಿಂದ ಹೊರಟುಹೋಗುವಳು.**)

ಕೃಷ್ಣ: ಎಲಾ! ಮತ್ತೆ ಹೂಡಿತೇ ಷಷ್ಠಾಷ್ಟಕ! ಇರಲಿ. ವೃಂದೇ, ನೀನು ಬಂದುದೇಕೆ?

ವೃಂದೆ: ಇಂದ್ರಪ್ರಸ್ತದಲ್ಲಿ ಪಾಂಡವರು ರಾಜಸೂಯ ಯಾಗವನ್ನು ಆರಂಭಿಸಿರುವರಂತೆ. ಯಾದವ ಪ್ರಮುಖರೆಲ್ಲ ಅಲ್ಲಿಗೆ ಬರಬೇಕಂತ ಬಲಭದ್ರ ದೇವರಿಗೆ ಯುಧಿಷ್ಠಿರ ಮಹಾದೊರೆಗಳಿಂದ ನಿಮಂತ್ರಣ ಬಂದಿದೆ. ಅದನ್ನು ಕುರಿತು ಆಲೋಚಿಸಲು ತಾವು ಅತ್ತ ಆಸ್ಥಾನಕ್ಕೆ ಚಿತ್ತೈಸಬೇಕೆಂತ ಅಣ್ಣದೇವರು ಬಿನ್ನವಿಸಿಕೊಂಡಿರುವರು.

( **ದಾಸಿಯು ಕೈಮುಗಿದು ಹೋಗುವಳು.** )

**ಕೃಷ್ಣ:** ( ಹಿಗ್ಗಿನಿಂದ ) ಏನು! ರಾಜಸೂಯವೇ? ಭೂಮಂಡಲದ ರಾಜರೆಲ್ಲ ಅಲ್ಲಿ ನೆರೆದಿರಬಹುದು! ಪಾಪ, ಅವರನ್ನೆಲ್ಲ ಸತ್ಕರಿಸಿ ಸಂತುಷ್ಟಪಡಿಸುವದರಲ್ಲಿ ನನ್ನ ಮುದ್ದು ತಂಗಿ ಕೃಷ್ಣೆ ಅದೆಷ್ಟು ನುಗ್ಗಾಗಿ ಹೋಗಬಹುದೋ! ಇಂಥ ಪ್ರಸಂಗದಲ್ಲಿ ನಾನು ಅಲ್ಲಿರುವದು, ಅವಳ ಬೆನ್ನಿಗೆ ಬಲವಾಗಿ ನಿಲ್ಲುವದು ತೀರ ಅವಶ್ಯವು. ನಾರದರೇ, ನಮ್ಮ ಕುಟುಂಬಕಲಹವನ್ನು ನಿಮಗೆ ಒಪ್ಪಿಸಿದ್ದೇನೆ. ಮುಳ್ಳಿನಿಂದಲೇ ಮುಳ್ಳು ಕೀಳುವದು. ಪ್ರಪಂಚದ ಕಲಹಕೆಲ್ಲ ನೀವು ಮುಳವಾಗುವದುಂಟು. ನಮ್ಮಲ್ಲಿಯ ಕಲಹಪ್ರಪಂಚವನ್ನಷ್ಟು ಮುಗಿಸಿಬಿಡುವದು ನಿಮ್ಮ ಮಿದುಳಿಗೇನು ಮೀರಿದ ಕೆಲಸವಲ್ಲ! ನನ್ನ ಚಿತ್ತ ವೃತ್ತಿಗಳೆಲ್ಲ ಅತ್ತ ಇಂದ್ರಪ್ರಸ್ತದಲ್ಲಿ ಕೇಂದ್ರೀಕೃತವಾಗಿರುತ್ತವೆ! ನಾನೀಗ ಹೊರಟೆನು.

**ನಾರದ:** ( **ಮನಸಾರೆ ಗಹಗಹಿಸಿ ನಕ್ಕು** ) ಅಯ್ಯೋ! ಹುಚ್ಚ! ನನ್ನ ಮಂಕೇ! ನಾನೋರ್ವನೇ ಅಧಿಕ ಪ್ರಸಂಗಿಯಂತ ಹೆಸರಾಗಿದ್ದೆ! ನನಗೆ ಮೀರುವವ ನೀನೊಬ್ಬನಿರುವಿ! ಅಡ್ಡಿಯಿಲ್ಲ! ಅಲ್ಲೋ ಕೃಷ್ಣಾ! ನೀನಿನ್ನೂ ಗೊಲ್ಲರ ಪೋರನೇ? ಹೇಳದೇ ಕೇಳದೇ ಕರೆಯದೇ ಬರೆಯದೇ ಸಿಕ್ಕಲ್ಲಿ ಹೋಗಿ ನೆರವಾಗಲಿಕ್ಕೆ ನೀನೇನು ಊರ ಉಂಡಾಡಿಯೇ? ನಿನಗೆಲ್ಲಿ ನಿಮಂತ್ರಣೆ ಬಂದಿದೆ? ಊರಿಗೆ ಔತಣವಾದಲ್ಲಿ ಕೇಳದೇ ಕರೆಯದೇ ಹೋಗಿ ಆಸನ ಹೂಡುವ ಹೊಟ್ಟೆಬಾಕ ಹಾರುವನಂತೆ ಹೀಗೆ ಇಂದ್ರಪ್ರಸ್ಥಕ್ಕೆ ಹೊರಡಲು ಅದೇನು ಪ್ರಸ್ತದೂಟವೇ? ನೀನೇನು ಸಾಮಾನ್ಯ ಯಾದವನೇ? ಯಾರು ಪೋಗುವದು?- ಯಾದವರು ಹೋಗುವದು ಕೂಡ ಇನ್ನೂಗೊತ್ತಿಲ್ಲ. ಇಂಥಲ್ಲಿ ರಾಜಕುಮಾರನು-ರಾಜಬಂಧುವು- ಅದೇಕೆ! ರಾಜಾಧಿರಾಜರನ್ನೇ ಅಂಗೈಯ ತಾಲಕ್ಕೆ ಕುಣಿಸಿ ರಾಜ್ಯಗಳನ್ನೇ ತೇಲಿಸಿ ಮುಳಗಿಸುವ ರಾಜಕಾರಣ ಪಟುವಾದ ಶಕಕರ್ತನು ನೀನು! ಹೀಗೆಲ್ಲ ಆಮಂತ್ರಣವಿಲ್ಲದೇ, ಆವ್ಹಾನ ಪಡೆಯದೇ ಸಿಕ್ಕಲ್ಲಿ ಹೋದರೆ ಗೌರವವಿದೆಯೇ?

**ಕೃಷ್ಣ:** ನಾನು ಗೌರವಕ್ಕಾಗಿ ಹೋಗುವದಿಲ್ಲ! ನನಗೆ ಗೌರವವು ಬೇಕಾಗಿಲ್ಲ. ನಾನು ರಾಜನೂ ಅಲ್ಲ! ರಾಜಕುಮಾರನೂ ಅಲ್ಲ. ರಾಜಕಾರಣದ ಮಾತಿರಲಿ. ರಾಜ್ಯಗಳ ಏಳು ಬೀಳುಗಳು ಕಾಲಗತಿಯ, ದೈವಹತಿಯ ಮತ್ತೂ ಅಂಧಮತಿಯ ಪರಿಣಾಮಗಳು, ಪರಿಪಾಕಗಳು. ನಾನು ನಿಮಿತ್ತ ಮಾತ್ರನು. ಯಾರಿಗೆ ಏನೇ ಇದ್ದರೂ, ಹೇಗೇ ತೋರಿದರೂ ನನ್ನವರಿಗೆ ನೇಹದವರಿಗೆ ನಾನು ಗೋಕುಲದ ಗೋಪಾಲಕೃಷ್ಣನೇ! ನಾನು ಬಡವನು; ಬಡಗೊಲ್ಲನು! ಈಗ ಅರಮನೆಯನ್ನು ಸೇರಿ ಮೆರೆದರೂ, ನಾನು ಹುಟ್ಟಿದ್ದು ಸೆರೆಮನೆಯಲ್ಲಿ, ಬಾಳಿಬದುಕಿದ್ದು ಹೆರವರ ಮನೆಯಲ್ಲಿ! ಒಡನಾಡಿ ಬೆಳೆದದ್ದು ಗೋವು ಗೊಲ್ಲರ ನೆರೆಮನೆಯಲ್ಲಿ?

-ಇದೆಲ್ಲ ಮರೆಯಲಾಗುವದೇ? ನಾನು ಬರೇ ಗೋಕುಲದ ಗೊಲ್ಲರವನು! ಬೇಕಾದವರ ಬಳಿಗೆ ಬೇಕಾದಾಗ ಬೇಕಾದಂತೆ ಬರಹೋಗತಕ್ಕವನು! ಇಂದು ದ್ರೌಪದಿಗೆ ನಾನು ಮನಸಾ ಬೇಕಾದವನು! ಆಕೆಯ ಆಮಂತ್ರಣ ನನಗೆ ಬೇಕಾಗಿಲ್ಲ! ಶಿಷ್ಟಾಚಾರದ ಆಡಂಬರವು, ಕೃತ್ರಿಮ ಸತ್ಕಾರದ ಡಂಭಾಚಾರವು ಸಿರಿವಂತಿಕೆಯ ಸೊಕ್ಕಿಗೆ ಒಪ್ಪುವಂತಹವು ಸರಲಭಾವದ ಅಕ್ಕರತೆಗಲ್ಲ ! .....ಮುನಿಗಳೇ! ನನಗೆ ತಡೆಯಬೇಡಿರಿ. ನನ್ನ ಮುದ್ದು ಕೃಷ್ಣೆಯು, ತಂಗಿ ದ್ರೌಪದಿಯು ಕೈಗೊಂಡ ಮಹತ್ಕಾರ್ಯವು ಕಳೆಗೊಂಡು ಕೈಗೂಡಲೆಂದು ಕೈಯೆತ್ತಿ ಬಾಯಿದುಂಬಿ ಹರಿಸಿರಿ. **(ನಮಸ್ಕರಿಸುವನು.)**

ನಾರದ: ಕಲ್ಯಾಣ ಮಸ್ತು! ಶುಭಾಸ್ತೇ ಪಂಥಾನಃ ಸಂತು! ಸರ್ವಾರಿಷ್ಟ ಮುಕ್ತಿರಸ್ತು! ಸರ್ವಾಭೀಷ್ಟ ಪ್ರಾಪ್ತಿರಸ್ತು! ಸಾಕೇನಪ್ಪಾ? ಇಷ್ಟೆಲ್ಲ ಆಶೀರ್ವಾದದ ಬುತ್ತಿ? **(ನಗುವನು. ಕೃಷ್ಣನೂ ನಗುತ್ತ ಹೊರಟುಹೋಗುವನು. ಆತನನ್ನೇ ಕಣ್ತುಂಬ ನೋಡಿ ಭಾವಪರವಶನಾಗಿ)** ಧನ್ಯ ! ಧನ್ಯ ! ಆಳಾಗಿ ಆಳುವ ಬಾನದೆದೆಯ ಬಾಳಿನರಸನು ನೀನು! ವಿಶ್ವವೃಂದ ಮಹಾತ್ಮನು ನೀನು! ಅನಿರ್ವಚನೀಯ ಪ್ರೇಮ ಸ್ವರೂಪನು ನೀನು! ನಿನಗೆ ಅನಂತ ಅಭಿವಂದನಗಳು! ಇನ್ನು ಈ ಅರಸಿಯರ ಕಣ್ಣು ತೆರೆಯಲಿಕ್ಕೆ ಇದೊಳ್ಳೆ ಇಂಬು ದೊರಕಿತು !

**( ಹೊರಗೆ ಹೊರಡುವದರಲ್ಲಿಯೇ ಇದುರಿನಿಂದ ರುಕ್ಮಿಣಿಯು ಬರುತ್ತಾಳೆ. )**

ರುಕ್ಮಿಣಿ: ನಾರದರೇ! ಕೃಷ್ಣನೆಲ್ಲಿ? **( ಹಿಂದಿನಿಂದ ಭಾಮೆ ಬರುವಳು. )**

ಭಾಮೆ: ಮುನಿಗಳೇ ! ನಾಥನೆಲ್ಲಿ ?

ನಾರದ: **( ಕೈ ಕಟ್ಟಿಕೊಂಡು ಗಾಂಭೀರ್ಯದಲ್ಲಿ )** ನಿಮ್ಮ ಕೃಷ್ಣನು - ಅರ್ಥಾತ್ ನಿಮ್ಮ ನಾಥನೂ-ಇಬ್ಬರೂ ಆದಂಥವನು ಹೋದಂಥವನಾಗಿ ಬಿಟ್ಟನು!

ರುಕ್ಮಿಣಿ:, ಭಾಮೆ: ಸಾಕು ನಿಮ್ಮ ವಿನೋದ! ಅವರು ಎಲ್ಲಿ ಹೋದರು?

ನಾರದ: ಇಂದ್ರಪ್ರಸ್ಥಕ್ಕೆ! ನಿಮ್ಮ ರಣರಗಳೆಯ ಕಾಟವೇ ಬೇಡೆಂತ ಹೋಗಿಬಿಟ್ಟನು ನಿಮ್ಮ ಕೃಷ್ಣನು! **( ಇಬ್ಬರೂ ರಾಣಿಯರು ಒಬ್ಬರನ್ನೊಬ್ಬರು ನೋಡಿ ನಿಟ್ಟುಸಿರು ಬಿಡುವರು.)** ಇನ್ನು ನಿಟ್ಟುಸಿರು ಬಿಟ್ಟು ಉಪಯೋಗವೇನು ? ಆತನು ಉಸುರಿನಂತೆಯೇ ನೇರವಾಗಿ ಹೋಗಿಬಿಟ್ಟನು! ನಿಮ್ಮಂಥ ಮೂರ್ಖರು ನೀವೇ ಸರಿ! ಬಿಚ್ಚು ಮಾತನ್ನು ಚುಚ್ಚುಮಾತೆಂತ ಭಾವಿಸಬೇಡಿರಿ! ನೀವು ಒಬ್ಬರಿಗೊಬ್ಬರು ಸರಿಗೂಡದಿದ್ದರೆ

ಒಬ್ಬೊಬ್ಬರು ಅದ್ವಿತೀಯರೇ ಸರಿ - ಮೂರ್ಖತನದಲ್ಲಿ! ನೀವು ಹೀಗೆ ಮಿತಿಯಿಲ್ಲದೇ ಮತಿಯಿಲ್ಲದೇ ಮತ್ಸರದಲ್ಲಿ ಮೈಮರೆತು ಕಾದಾಡುವದು ಶುದ್ಧ ಮೂರ್ಖತನ!

ರುಕ್ಮಿಣಿ: ಸಾಕು ಮುನಿಗಳೇ, ಮೂರ್ಖತನದ ಕುರಿತು ಪ್ರವಚನ ಮತ್ತೊಮ್ಮೆ ಕೇಳೋಣ. ಅವರೆಲ್ಲಿಗೆ ಹೋದರು?

ನಾರದ: ಕೃಷ್ಣನು ದ್ರೌಪದಿಯ ಭೆಟ್ಟಿಗೆಂತ ನಡೆದು ಬಿಟ್ಟನು. ಇಂದ್ರ ಪ್ರಸ್ಥದಲ್ಲಿ ರಾಜಸೂಯಯಾಗವಂತೆ! ನನಗೆ ಇಲ್ಲಿ ನಿಮ್ಮ ಅಸೂಯೆಯ ಯಜ್ಞಕ್ಕೆ ಋತ್ವಿಜನನ್ನಾಗಿ ಮಾಡಿಟ್ಟು ಅತ್ತ ಆಕೆಗೆ ನೆರವಾಗಲಿಕ್ಕೆ ನೆರೆಯಂತೆ ನುಗ್ಗಿ ಹೋದನು! ನಿಮ್ಮ ಸಿಟ್ಟಿಗೆ ನನಗೆ ಆಹುತಿಯಾಗಿ ಇಟ್ಟು ತಾನು ಅನಾಹೂತವಾಗಿ ದ್ರೌಪದಿಯಿದ್ದಲ್ಲಿ ನಡೆದು ಬಿಟ್ಟನು.

ರುಕ್ಮಿಣಿ: ದ್ರೌಪದಿಯಿದ್ದಲ್ಲಿ?

ಭಾಮೆ: ಆಕೆಯು ಕರೆಕಳುಹಿಸಿದ್ದಳೇ?

ನಾರದ: ಅದೇ ಆಶ್ಚರ್ಯ! ನೋಡಿಯಮ್ಮಾ! ನೀವು ಕರೆದರೂ ಬಾರದ ಕೃಷ್ಣನು, ದ್ರೌಪದಿಯ ನೆನಪಾದ ಕೂಡಲೇ ಹೇಗೆ ಗುರಿಗೆ ಸೇರುವ ಬಾಣದಂತೆ, ಗೂಡಿಗೆ ಹಾರುವ ಹಕ್ಕಿಯಂತೆ ನುಸುಳಿ ಹೋದನು- ನೆಟ್ಟಗೆ ಇಂದ್ರಪ್ರಸ್ಥಕ್ಕೆ! ಆತನ ಕೊಳಲಿಗೆ ಮರುಳಾಗಿ ಬಾಲವೆತ್ತಿ ಹಸುಗಳು ಓಡಿಬರುತ್ತಿದ್ದಿಲ್ಲವೇ-ಹಿಂದೆ ಗೋಕುಲದಲ್ಲಿ? ಹಾಗೆ ಓಡಿಹೋದನು ನೋಡಿ ದ್ರೌಪದಿಯೆಡೆಗೆ!

ರುಕ್ಮಿಣಿ: ಸಾಕು ನಿಮ್ಮ ವರ್ಣನೆ! ಈಗಲೂ ಗೋಕುಲದ ಹಸುವೇ-ಚಿಕ್ಕ ಹಸುಳೆಯೇ? ಇಷ್ಟು ದೊಡ್ಡವರಾದರೂ............

ಭಾಮೆ: ಇಷ್ಟು ದೊಡ್ಡತನ ಪಡೆದರೂ........

ರುಕ್ಮಿಣಿ: ಲೋಕರೀತಿಯನ್ನು ಕೊಂಚವೂ ಕಲಿಯಬಾರದೇ ?

ಭಾಮೆ: ಹೀಗೆಲ್ಲ ರಾಜರು ರಾಜರ ಮನೆಯಲ್ಲಿ ಕರೆಯದೇ ಹೋಗುವದೇ?

ನಾರದ: ನಾನೇನು ಹೇಳಲಮ್ಮಾ! ಯಾರು ಕೇಳುವರು ? ಅವನ ಲೀಲೆಯೇ ಹೀಗೆ. ಚಿಕ್ಕಂದಿನ ಚಟವಿದು. ಕಂಡವರ ಮನೆ ಸೇರಿ ಗಿಣ್ಣ ಬೆಣ್ಣೆ ತಿನ್ನುವ ರೂಢಿ ಮೈಯುಂಡು ಹೋಗಿಲ್ಲವೇ! ಕಂಸನಿಗೆ ಕೊಲ್ಲಲೆಂತ ಮಥುರೆಗೆ ಹೋದ! ನಗರಕ್ಕೆ ನಗರವೇ ನಲಿದಾಟದಲ್ಲಿ ನಗೆಮೊಗದಿಂದ ನೆಗೆದೆದ್ದು ಇವನನ್ನು ಕಂಡಲ್ಲೆಲ್ಲ ಕೊಂಡಾಡಲು ಅಂಗಲಾಚಿ ಕಾದಿತ್ತು! ಆದರೆ ನಮ್ಮ ಕೃಷ್ಣನೋ ಅದೆಲ್ಲ ಬಿಟ್ಟು ದರಿದ್ರದಾಸಿಯಾದ ಕುರೂಪೆ

ಕುಬ್ಜೆಯು ಗುಡಿಸಲಿಗೆ ಹೋಗಿಬಿಟ್ಟ- ಅಲ್ಲಿ ಏನು ಕಂಡ
ಮರುಳಾದನೋ.........

ಭಾಮೆ: ನಿಮಗೇ ಗೊತ್ತು! ಭಕ್ತರಂತೆ ಭಗವಂತನು! ಮತ್ತೇನ
ತಂಬೂರಿದಾಸಯ್ಯರಿಗೆ ತಿರಿದುಣ್ಣುವ ದೇವರೇ ಸಿಗುವರು.
ನಾಚಿಕೆಯಾಗುವದಿಲ್ಲವೇ, ಕೃಷ್ಣನ ಇದೆಲ್ಲ ಬಯಲಾಟ ಬಾಯ್ತುಂಬ
ಬಣ್ಣಿಸಲಿಕ್ಕೆ ? ಅವನಿಗೆ ಹೋಗಗೊಟ್ಟಿರಾದರೂ ಹೇಗೆ?

ನಾರದ: ನಾನೇನು ಮಾಡಲಿ? ನನಗಾರು ಕೇಳುವವರು? ಕೈಹಿಡಿದು ರಾಣಿಯ
ಇಕ್ಕೆಲದ ಅಂಕೆಯ ಇಕ್ಕಟ್ಟಿನಿಂದಲೂ ಜಾರಿಹೋಗುವ ಠಕ್ಕನು, ನನ
ಕೈಗೆ ಹೇಗೆ ಸಿಕ್ಕಾನು? ಲೌಕಿಕ ರೀತಿ-ನೀತಿಗಳು ಅಲೌಕಿಕರಿಗೆ
ಸರಿಹೋಗುವವೆ? ನೀವೇ ನೋಡಿ, ನಿಮ್ಮ ಲೌಕಿಕ ರೀತಿ ನೀತಿಗಳನ್ನು
ಸುತ್ತಿಟ್ಟು, ಆಚಾರವಿಚಾರವನ್ನೆಲ್ಲ ಬದಿಗೊತ್ತಿ ಹೊರಟುಹೋಗುವನೆಂದ
ಮೇಲೆ ದ್ರೌಪದಿಯ ಮೇಲಿನ ಆತನ ಪ್ರೀತಿಯೇ ಅಷ್ಟು ಮಿಗಿಲಾದದ್ದೆಂ
ಸಿದ್ಧವಾಗುವದಿಲ್ಲವೇ?

ಭಾಮೆ: ಅಂದಮೇಲೆ, ಕೃಷ್ಣನಿಗೆ ನಮಗಿಂತ ದ್ರೌಪದಿಯೇ ಹೆಚ್ಚು ಪ್ರೀತಿಯವಳೇ

ನಾರದ: ಅರ್ಥಾತ್, ಹಾಗೆಯೇ ಆಯಿತಲ್ಲವೇ? ಒಡಹುಟ್ಟಿದ ಸುಭದ್ರೆಗಿಂತಲೂ
ಆತನಿಗೆ ದ್ರೌಪದಿಯು ಹೆಚ್ಚು ತನ್ನವಳೆನಿಸುವಳು.

ರುಕ್ಮಿಣಿ: ಏಕೆ? ನಾವೇನು ಕಡಿಮೆ ದುಡಿಯುವೆವೇ, ಕೃಷ್ಣನ ಪ್ರೀತಿಯ
ಸಲುವಾಗಿ?

ನಾರದ: ಹಾಗೆಯೇ ಆಯಿತಲ್ಲವೇ ಅದರ ಅರ್ಥ! ನಿಜವನ್ನು ಹೇಳಲೇ
ನೀವೀರ್ವರೂ ಪ್ರೀತಿಗಿಂತಲೂ ಪ್ರೀತಿಸುವೆವೆಂತ ತೋರಿಸುವ
ದರಲ್ಲಿಯೇ ಹೆಚ್ಚು ತತ್ಪರರಿರುವಿರಿ! ಕೃಷ್ಣನ ಪ್ರೇಮವನ್ನು
ಪಡೆಯುವದರಲ್ಲಿ ಅಲ್ಲ, ಆತನ ಪ್ರೇಮವನ್ನು ಪಡೆಯುವೆವೆಂಬ
ಅಟ್ಟಹಾಸದಲ್ಲಿಯೇ ನಿಮ್ಮ ಆಸಕ್ತಿ ಹೆಚ್ಚು. ಇದರಿಂದ ಒದಗುವ
ಪರಿಯೆಂದರೆ, ಕೃಷ್ಣನಲ್ಲಿಯ ತನ್ನ ಪ್ರೇಮವನ್ನು ಹೆಚ್ಚಿಸುವದಕ್ಕಿಂತ
ಇನ್ನೊಬ್ಬಳಲ್ಲಿಯ ಕೃಷ್ಣನ ಪ್ರೇಮವನ್ನು ಕುಗ್ಗಿಸುವದಕ್ಕಾಗಿಯೇ ನೀವು
ಹೆಚ್ಚು ಹವ್ಯಾಸದಿಂದ ಹೆಣಗುವಿರಿ! ಕಡ್ಡಾಯವಾಗಿ ಕೇಳಿದರೆ ಕೈಗೆ
ಬೀಳುವ ಕಪ್ಪಗಾಣಿಕೆಯೆಂದರೆ ಪ್ರೇಮವಲ್ಲ. ಪ್ರೇಮವು ಒತ್ತಾಯದಿಂದ
ಹಿಂಡಿ ಹೊರಡಿಸುವ ರಸವಲ್ಲ. ಸೂರ್ಯನಿಗೆ ಒಲಿದು ಅರಳುವ
ಕಮಲದಂತೆ ಚಂದ್ರನಿಗೆ ಒಲಿದು ಉಕ್ಕಿ ಉರುಳುವ ಕಡಲಿನಂತೆ
ಪ್ರೀತಿಯ ಬಗೆಯು ನೆಗೆದೇಳುವ ಭಾವದ ಬುಗ್ಗೆಯು, ನಗೆದೋರುವ
ಮನದ ಮೊಗ್ಗೆಯು! ನಿಮ್ಮ ನಡತೆಯು ಹೀಗಿದೆಯೇ? ಇಲ್ಲವಾದರೆ

ಇನ್ನಾದರೂ ತಿದ್ದಿಕೊಳ್ಳುವದು ಸರಿಯಲ್ಲವೇ?

ಕ್ಮಿಣಿ: ಅಹುದು, ಮಹರ್ಷಿಗಳೇ! ನಮ್ಮದು ತಪ್ಪಾಗಿದೆ. ಭಾಮಾ! ನನ್ನನ್ನು ಕ್ಷಮಿಸು!

ಾಮೆ: ಅಕ್ಕಾ! ಎಂಥ ಕ್ಷಮೆಯೇ! ಯಾರು ಯಾರನ್ನು ಕ್ಷಮಿಸುವದೇ! ಆದದ್ದೆಲ್ಲ ಮರೆತುಬಿಡೋಣ.

ಕ್ಮಿಣಿ: ಅಹುದು ಮರೆತುಬಿಡೋಣ! ಇಬ್ಬರೂ ಬೆರೆತು ನಡೆಯೋಣ! ಶ್ರೀಕೃಷ್ಣನ ಸಹಚಾರಿಣಿಗಳೆಂತೆನಿಸಿಕೊಳ್ಳಲು ಯೋಗ್ಯರಾಗುವಂತೆ ಯತ್ನಿಸೋಣ!

ಾಮೆ: ಅಹುದಕ್ಕಾ! ಅದೇ ನಮ್ಮ ನೆಮ್ಮದಿಯ ದಾರಿ. ನಾವು ಮೂರ್ಖರಂತೆ ನಡೆದೆವು ಇದುವರೆಗೆ. ಆದರೂ ಆಗಲಿ; ತಪ್ಪನ್ನು ತಿದ್ದಿಕೊಳ್ಳಲು ಎಂದೂ ತಡವಿಲ್ಲ!

ಾರದ: ಇದು ಸರಿ ನೋಡಿಯಮ್ಮಾ! ಈ ವಿವೇಕ ತಲೆದೋರಿ ನಿಮ್ಮಲ್ಲಿ ನೆಲೆಗೊಳ್ಳಲಿ. ಇಷ್ಟೇ ನನ್ನ ಹರಕೆ!

ಕ್ಮಿಣಿ: ನಮ್ಮ ಕೋರಿಕೆಯೂ ಅದೇ. ಆದರೂ ನಾರದರೇ, ಒಂದು ಪ್ರಶ್ನೆ: ದ್ರೌಪದಿಯ ಪ್ರೇಮದಲ್ಲಿ ಅದೆಂಥ ಮಿಗಿಲಾದ ಮಾದರಿಯಿರುವದು? ಅದಾವ ವಿಲಕ್ಷಣ ಲಕ್ಷಣವಿರುವದು? ಅದನ್ನು ಅರಿತುಕೊಂಡೆವಾದರೆ ನಮ್ಮ ಬಾಳನ್ನೂ ಬೆಳಗಿಸಿಕೊಳ್ಳಲು ಅನುವಾಗುವದಲ್ಲವೇ? ಕೈಹಿಡಿದು ತಂದ, ಜೊತೆಗೆ ನಿಂತ ನಮಗಿಂತ, ಬೆನ್ನಿಗೆ ಬಂದವರ ಒಲುಮೆ ಅಷ್ಟೊಂದು ಹಿರಿಯೊಲುಮೆಯೇ? ದ್ರೌಪದಿಯು ಸಹೋದರಿಯು.........

ಾಮೆ: ಎಂತಹ ಸಹೋದರಿಯೇ! ಭಾವಿಸಿಕೊಂಡುದಕ್ಕಾಗಿ ಭಗಿನಿಯೆನ್ನುವದು!

ಾರದ: ಇದೆಲ್ಲ ನಿಜವಮ್ಮಾ! ಆದರೆ ವಸ್ತುಸ್ಥಿತಿಯೇನೋ ಹೀಗಿದೆ ನೋಡಿ! ಈ ಪ್ರಶ್ನೆಯನ್ನು ಕೃಷ್ಣನೇ ನಿಮಗಾಗಿ ಬಿಡಿಸಿ ಕೊಡುವನು! ಅವನ ಕಡೆಯಿಂದ ಈ ಒಲುಮೆಯ ಒಗಟನ್ನು ಬಗೆಹರಿಸುವ ಕೆಲಸ ನನಗೆ ಸಂದಿತು! ಇನ್ನು ನಾವು ಇಂದ್ರಪ್ರಸ್ಥಕ್ಕೆ ತೆರಳಬೇಕಾಗಿದೆ. **(ನಕ್ಕು)** ನಾವೇನು? ಮೂರು ಲೋಕದ ಮುಖಪತ್ರರು! ಎಲ್ಲ ಪ್ರಸಂಗಗಳಲ್ಲಿಯೂ ನಮ್ಮ ಅಧಿಕಪ್ರಸಂಗ ಸೇರಲೇಬೇಕು! ನಮ್ಮೀ ಬುರುಡೆಯನ್ನು ನಂಬಿ ಯಾವ ಹೊಳೆಯಲ್ಲಿಯಾದರೂ ಸರಿಯೇ ನಾವು ಬೀಳುವವರೇ!

ಕ್ಮಿಣಿ: ಅದು ಸರಿ. ನಿಮ್ಮ ಉದ್ಧಾರ ಮಾಡಲಿಕ್ಕೆ ಭಗವಂತನಿರುವನಲ್ಲವೇ ಸೊಂಟಕಟ್ಟಿ! ಭಕ್ತರಿಗೆ ಸಾಯುವ ತೊಡಕು; ಭಗವಂತನಿಗೆ

ಕಾಯುವತವಕ! ಇರಲಿ. ನಾವೂ ಇಂದ್ರಪ್ರಸ್ಥಕ್ಕೆ ಪ್ರಸ್ತಾನ ಮಾಡುವದಿದ
ದೇವಕೀದೇವಿಯವರು ಇದೀಗ ಅಂದಿದ್ದರು.

ನಾರದ: ಅಹುದೇ? ಇದು ಇನ್ನಿಷ್ಟು ಲೇಸು. ನಿಮ್ಮ ಒಕ್ಕಟ್ಟು ಒಮ್ಮೆ ಒಡ
ಬರಲಿ. ಕೃಷ್ಣನನ್ನು ಅಲ್ಲಿಯೇ ಇಕ್ಕಟ್ಟಿನಲ್ಲಿ ಹಿಡಿದು ನಿಮ್ಮ ಒಲುಮೆಯ
ಒಗಟನ್ನು ನಾನು ಬಿಡಿಸಿಕೊಡುತ್ತೇನೆ.

ಭಾಮೆ: ಸರಿ! ನಡೆಯಿರಿ ಹಾಗಿದ್ದರೆ, ಮುನಿಗಳೇ, ನಾವು ಹೊರಟೆವು. ಅಕ
ರುಕ್ಮಿಣೀ, ಇನ್ನು ನಾವೀರ್ವರೂ ಜೀವದ ಗೆಳತಿಯರು. ನಾವೀರ್ವರು
ಕೃಷ್ಣನ ಪ್ರೇಮಸಾಗರವನ್ನು ಸೇರಿ ಒಂದಾಗುವ ಗಂಗೆ-ಯಮುನೆಯರು
ನಡೆಯಿರಿ ಮಹರ್ಷಿಗಳೇ, ನಮ್ಮೊಡನೆ ಮಂದಿರಕ್ಕೆ ಬನ್ನಿರಿ.

ನಾರದ: ಕ್ಷಮಿಸಿ, ದೇವಿಯವರೇ, ನೀವು ಮುಂದಾಗಿರಿ. ಆದರೆ ಜೋಕೆ! ನ
ಕಣ್ಣು ತಪ್ಪಿದಕೂಡಲೇ, ಜೀವದ ಗೆಳತಿಯರು ಮತ್ತೆ ಜೀವ ತಿನ್ನು
ಮಿಡಚಿಗಳಾಗಬೇಡಿರಿ! ಕೃಷ್ಣನ ಪ್ರೇಮಸಾಗರವನ್ನು ಸೇರಲು ಹರಿಯು
ಗಂಗಾ-ಯಮುನೆಗಳಾಗುವ ಬದಲು, ನಿಮ್ಮ ಒಂದುಗೂಟ ಹರಿದ
ಹೋಗಿ, ಕೃಷ್ಣನ ಕಣ್ಣಲ್ಲೇ ಗಂಗೆ-ಯಮುನೆಗಳು ಬರುವಂ
ಮಾಡಬೇಡಿರಿ, ಮತ್ತೆ! ನಿಮ್ಮ ಕಾಟ ತಪ್ಪಿಸಲು ಕೃಷ್ಣನೇ ತಿರು
ಕ್ಷೀರಸಾಗರವನ್ನು ಸೇರುವಂತೆ ಆದೀತು ಜೋಕೆ?

ರುಕ್ಮಿಣಿ: ಛೇ! ಉಂಟೇ! ಅದಕ್ಕಾಗಿಯೇ ಅಂದದ್ದು ನಮ್ಮ ಜೊತೆಗೇ ಬನ್ನಿರೆಂತ
ನಮಗೆ ದಾರಿ ತೋರಲು ಚೆನ್ನಾದೀತು!

ನಾರದ: ಬೇಡವಮ್ಮಾ! ನಾವು ಮನೆಮಠವಿಲ್ಲದ ಹಾದಿಯ ಹಾರುವರು! ನಮ
ಕಣ್ಣು ಹತ್ತಿ ನಿಮ್ಮ ಗೆಳೆತನ ಕೆಟ್ಟು ಹೋದೀತು! ತಿರುಪೆಯ ದೇವ
ತಂಬೂರಿದಾಸಯ್ಯನವರು ನಾವು! ಅಲ್ಲವೇ ಭಾಮೆ? **(ಆಕೆ ನಗುತ್ತ**
**ಮುಗಿಯುವಳು.)** ಆದ್ದರಿಂದ ನೀವೇ ಮುಂದಾಗಿ ನನಗೆ ತುಸು ಕೆಲಸವಿದ
ಬಲಭದ್ರದೇವರಿಗೆ ಕಂಡುಬರುವದಿದೆ. ಅದುವರೆಗೆ ಮಂದಿರದಲ
ಭೋಜನದ ಸಿದ್ಧತೆ ಸಜ್ಜಾಗಿರಲಿ. ನಮಗೆ ಭಜನೆಯನಂತರ
ಭೋಜನವೇ ಸೊಗಸಿನ ಸಂಗತಿಯು! ಬಾಯ್ತುಂಬ ಭಜನದಲ್ಲಿ ಎಲ್ಲ
ಪರಮಾರ್ಥ ತುಂಬಿದ್ದಂತೆ ಹೊಟ್ಟೆತುಂಬ ಭೋಜನದಲ್ಲಿ ಎಲ್ಲ
ಪುರುಷಾರ್ಥಕ್ಕೆ ಇಂಬಿದೆ!

ರುಕ್ಮಿಣಿ: **( ನಕ್ಕು )** ಇದು ತಮ್ಮ ಹೊಸ ನಾರದೀಯ ಭುಕ್ತಿಸೂತ್ರವೇ? ಹಾಗಿದ್ದರ
ನಾವು ತೆರಳುವೆವು.

**( ಇಬ್ಬರೂ ಕಾಲಿಗೆ ಎರಗುವರು. ನಾರದರು "ಕಲ್ಯಾಣಮಸ್ತು ಅಖಂಡ ಸೌಭಾಗ**
**ಸಂಪ್ರಾಪ್ತಿರಸ್ತು!" ಎಂತ ಹರಸುವರು. )** **( ತೆರೆ )**

## ನೋಟ, ಮೂರು.

(ಇಂದ್ರಪ್ರಸ್ಥದಲ್ಲಿ ದ್ರೌಪದಿಯ ಪ್ರಾಸಾದ. 'ಭರತೇಶ ವೈಭವದಲ್ಲಿ' ಭವ್ಯವಾಸ್ತುಶಿಲ್ಪದ ರಚನೆಯಿಂದ ಸಾಮ್ರಾಜ್ಞಿಗೆ ತಕ್ಕಂತೆ ಸಿಂಗರಿಸಿದೆ. ಇಳಿಬಿಟ್ಟ ಜರತಾರಿಯ ಪರದೆ, ಅತ್ತಿತ್ತ ಅಚ್ಚುಕಟ್ಟಾಗಿಟ್ಟ ಹಸ್ತಿದಂತದಲ್ಲಿ ಕೆತ್ತಿದ ಆಸನ ಆನಿಕೆಗಳ ಉಪಸ್ಕರ, ಕಾಲ್ಮಣಿ ಮೇಲ್ಮಣಿಗಳ ಚಂದನದಲ್ಲಿ ಕೊರೆದ ನಕ್ಕಿಗೆಲಸ. ಅವುಗಳ ಮೇಲೆ ಒಪ್ಪುವ ಪುಷ್ಪಪಾತ್ರೆಗಳ ಚಿನ್ನಬೆಳ್ಳಿಯ ಥಳಕು ನಡುನಡುವೆ ನಿಲ್ಲಿಸಿದ ಮೂರ್ತಿಶಿಲ್ಪಗಳ ಕಲಾಕುಸುರು-ಇವೆಲ್ಲವುಗಳಲ್ಲಿ ಬೆಡಗುಬೆರಗುಗಳೊಡನೆ ಶ್ರೀಮದ್ಗಾಂಭೀರ್ಯವೇ ಒಡೆದು ಕಾಣುತ್ತಿದೆ.

ದ್ರೌಪದಿದೇವಿಯು ತನ್ನ ಸಖಿಯೊಡನೆ ಬರುವಳು. ಶಾಂತಗಂಭೀರವಾದ ರಾಜತೇಜದೊಳಗಿಂದ ರಾಜಸಿಕವಲ್ಲದ ಸತ್ವಶೀಲದ ವ್ಯಕ್ತಿತ್ವವು ಆಕೆಯಲ್ಲಿ ಕಂಗೊಳಿಸುತ್ತದೆ. ನಿಷ್ಕಪಟ ಸ್ನೇಹಮಯತೆಯ ಮೂಲಕ ಆಕೆಯ ಸ್ವಾಭಾವಿಕ ಅಭಿಮಾನವು ಅಹಂಕಾರವಾಗಿ ಹದಗೆಟ್ಟಿಲ್ಲ. ವೇಷಭೂಷೆಗಳು ಅಕೃತ್ರಿಮವಾಗಿದ್ದರೂ ಅರಸು ತೂಕವನ್ನು ಸೂಚಿಸುತ್ತವೆ. ಕೈಯಲ್ಲಿ ಹೊನ್ನು-ಕಲಶ ಒಂದಿದೆ. ಸಖಿಯ ಕೈಯಲ್ಲಿಯೂ ಚಿನ್ನ-ಬೆಳ್ಳಿಯ ಪೂಜಾಸಾಹಿತ್ಯವುಳ್ಳ ದೊಡ್ಡ ಚಿನ್ನದ ಹರಿವಾಣವಿದೆ.

ರಾಜಸೂಯದ ಪ್ರಚಂಡ ಸಮಾರಂಭದ ಸಂಭ್ರಮದಲ್ಲಿ ದ್ರೌಪದಿಯು ಕೊಂಚ ದಿಗ್ಭ್ರಾಂತಳಾದಂತಿದೆ. ಹಲವಾರು ಹೊಣೆಗಳನ್ನು ಒಮ್ಮೆಲೇ ಒಪ್ಪಾಗಿ ತೂಗಿಸಿಕೊಂಡು ಹೋಗುವ ಹಿಡಿತ ಆಕೆಗಿನ್ನೂ ಕೈಗೂಡಿಲ್ಲ. ಆದ್ದರಿಂದ ಒಂದು ಬಗೆಯ ಕಾತರ ಭಾವವೂ ಸೋತ-ಬಗೆಯೂ ಆಕೆಯ ಮೋರೆಯ ಸಿರಿಯನ್ನು ಕವಿದುಕೊಂಡಿವೆ. ಸಿಕ್ಕ ತುಸು ಬಿಡುವನ್ನು ನಿಧಾನವಾಗಿ ಕಳೆಯಲು ಆಕೆಯು ಏಕಾಂತದಲ್ಲಿ ಬಂದಿರುವಳು.)

ಪದಿ: ಕೊನೆಗೂ ಒಂದುಕ್ಷಣ ಬಿಡುವು ದೊರೆಯಿತು! ಒಂದೆಡೆ ಯಜ್ಞದ ಹೋಮ-ಹವನಗಳ ಗೊಂದಲ; ಇನ್ನೊಂದೆಡೆಗೆ ಅರಸು ಅಭ್ಯಾಗತರ, ಕೌರವ-ನೆಂಟರ ಗಲಭೆ. ಒಬ್ಬೊಬ್ಬರನ್ನು ಒಲಿಸುವದರಲ್ಲಿಯೂ ಜೀವ ನುಗ್ಗಾಗಿ ಹೋಗುವದು. (ಒಂದು ಆಸನದಲ್ಲಿ ಕೂತು ನಿಟ್ಟುಸಿರು ಬಿಟ್ಟು) ತಂಗೀ ಆ ಕಲಶ ಪಾತ್ರಗಳನ್ನು ಅತ್ತ ಒಯ್ದಿಡು. ತುಸು ವಿಶ್ರಮಿಸೋಣ.

ಸಿ: (ಉಪಕರಣಗಳನ್ನೆಲ್ಲ ಒಯ್ದು ಪರದೆಯ ಹಿಂದಿಟ್ಟು, ಬಂದು ಬಳಿಯಲ್ಲಿಯೇ ಬಿದ್ದ ನವಿಲುಗರಿಗಳ, ಮಣಿ-ಮುತ್ತಿನ ಬೀಸಣಿಗೆಯನ್ನೆತ್ತಿ ಒಡತಿಗೆ ಮಮತೆಯಿಂದ ಗಾಳಿ ಹಾಕುತ್ತ) ಅಹುದು, ದೇವಿಯವರೇ, ತಾವು ಒಬ್ಬಂಟಿಗರು. ಬಂದವರೆಲ್ಲ ನೆಂಟರೆಂತ, ಬಂಟರಂತ ಕೈಕಟ್ಟಿಕೊಂಡು ಅಡ್ಡಾಡುವವರೇ! ತಮಗೆ ನೆರವಾಗುವವರು ಕೌರವ ರಾಣಿಯರಲ್ಲಿ ಒಬ್ಬರೂ ಇಲ್ಲ.

ಪದಿ: ಅವರೇಕೆ ನೆರವಾಗಲು ಬಂದಾರು? ರಾಜ್ಯವನ್ನು ನಮಗೆ ಪಾಲುಮಾಡಿಕೊಡುವದೇ ಅವರಿಗೆ ಇಷ್ಟವಿದ್ದಿಲ್ಲ. ಅದರಲ್ಲಿಯೂ ಈ ರಾಜಸೂಯಯಾಗವು ಹೆಸರಿಗೆ ಸರಿಯಾಗಿ ಅವರೆದೆಲ್ಲಿ ಅಸೂಯೆಯ

ಉರಿಯನ್ನು ಅದೆಷ್ಟು ಹೊತ್ತಿಸಿದೆಯೋ! ತಮ್ಮನ್ನು ಅವಮಾನಪಡಿಸ
ನಾವು ಈ ಯಾಗದ ವಿಜೃಂಭಣೆಯ ಸಮಾರಂಭವ
ಜರುಗಿಸುತ್ತಿರುವೆವೆಂದು ಅವರು ತಿಳಿದಿರುವರು!

ದಾಸಿ: ಹಾಗಿದ್ದರೆ, ನಮ್ಮ ನಿಮಂತ್ರಣೆಯನ್ನು ಮನ್ನಿಸಿ ಅವರು ಬರುವದಾದ
ಏಕೆ? ಅವಮಾನವಾಗುವಲ್ಲಿ ಯಾರಾದರೂ ಕರೆಯಿಸಿಕೊಂ
ಹೋಗುವದುಂಟೇ?

ದ್ರೌಪದಿ : ಮತ್ತೇಕೆ ಬಂದಾರು? ಪ್ರತಿಯೋರ್ವರೂ ತಮ್ಮ ಹಗೆಯ
ಬೆಳಿಸಿಕೊಳ್ಳಲಿಕ್ಕೆ ನೆವಗಳನ್ನೇ ಹುಡುಕುತ್ತಿರುತ್ತಾರೆ. ಇರಲಿ. ಅವರ
ಒಡಲಲ್ಲಿರಲಿ. ನಾವು ಆಡಿ ಪಾಪಕ್ಕೆ ಗುರಿಯಾಗುವ ದೇಕೆ? ಭವಿತವ್
ಆಗಿಯೇ ತೀರುವದು. ನೀನು ನಡೆ. ಅಲ್ಲಿ ಯಾಗ ಮಂಡಪದ
ನಾನು ಬೇಕಾಗಿದ್ದರೆ ಸುದ್ದಿ ತಿಳಿಸು. (**ಆಕೆ ಹೋಗುವಳು.**) ಯಾದವ
ನಿಮಂತ್ರಣೆ ಹೋಗಿರಬಹುದೇ? ವಸುದೇವ, ಬಲದೇವ ದೊರೆಗಳ
ಬರಹೇಳಿರಬಹುದೇ? (**ದಾಸಿ ಮರಳಿ ಬರುವಳು.**) ಏನೇ? ಮ
ಬಂದಿ?

ದಾಸಿ: ದೇವಿಯರೇ, ಅಲ್ಲಿ ಸುಯೋಧನ ಮಹಾರಾಜ
ರಾಣಿಯವರು-ಭಾನುಮತಿದೇವಿಯವರು-ತಮಗಾಗಿ ಕಾದಿ ನಿಂತಿದ್ದ
(**ದ್ರೌಪದಿಯು ಎದ್ದು ಮುಂದೆ ಬರುವಳು.**) ಅವರನ್ನು ತಾವು ಮಯಸಭೆಯ
ಕಾಣಿಸಲು ಒಯ್ಯುವವರಿರುವರಂತೆ! ಈಗಲೇ ಬರಹೇಳಿದ್ದಾರೆ.

ದ್ರೌಪದಿ: ಅಹುದೇ? ಬಂದೆನು. ತುಸು ಇತ್ತ ನೋಡೆ, ನನ್ನ ಉಡಿಗೆ ತೊಡಿ
ಒಡಪು ತೊಡಪುಗಳೆಲ್ಲ ಓರಣವಾಗಿವೆಯಲ್ಲವೇ? ನೀನು ನಡ
ಬಂದೆನೆಂದು ತಿಳಿಸು. (**ದಾಸಿ ಹೋಗುವಳು.**)

(**ದ್ರೌಪದಿಯು ಹೊರಡುವದರಲ್ಲಿರುವಳು. ಆದೇ ರುಕ್ಮಿಣಿಯು ಬರುವಳ**

ರುಕ್ಮಿಣಿ: ಅದ್ವಾರು? ಮಹಾರಾಣಿಯವರೇ? ದ್ರೌಪದೀ, ಇದೋ ನಾವ
ಬಂದೇ ಬಿಟ್ಟೆವು ದ್ವಾರಕೆಯಿಂದ.

ದ್ರೌಪದಿ: (**ಹರ್ಷದಿಂದ**) ಬಂದಿರಾ? ಚೆನ್ನಾಯಿತು. ನನ್ನ ಕೃಷ್ಣನೂ ಬಂದನ
........... ಎಲಾ, ನಿಂತಿರುವಿರೇಕೆ? ಕೂತುಕೊಳ್ಳಿರಲ್ಲ.

ರುಕ್ಮಿಣಿ: ಕೃಷ್ಣನ ಉಸಾಬರಿಯಿರಲಿ. ಮೊದಲು ನನಗೊಂದು ಬೇ
ಮಂದಿರವನ್ನು ತೆರವು ಮಾಡಿಸಿ ಕೊಡಿಸಬೇಕು. ನನಗೆ ಮಂದಿ
ಗೊಂದಲ ಸೇರುವದಿಲ್ಲ.

ದ್ರೌಪದಿ: ಅಷ್ಟೇ ತಾನೇ? ಕೊಡಿಸುವೆನು, ನಮ್ಮ ಕಂಚುಕಿಯಜ್ಜರಿಗೆ ತಿಳಿ
(**ದಾಸಿ ತಿರುಗಿ ಬರುವಳು.**)

ದಾ: ಇನ್ನೂ ಹೊರಡುವದಾಗಿಲ್ಲವೇ? ಅವರು ರೇಗಿಹೋಗಿದ್ದಾರೆ.

್ರಪದಿ: ಇದೋ, ಬಂದೇ ಬಿಟ್ಟೆನು. ನೀನು ಮುಂದಾಗು............

ಕ್ಮಿಣಿ: ಎಲ್ಲಿಗೆ ಹೊರಟೆ? ನಮ್ಮದೇನಾದರೂ ಯೋಗಕ್ಷೇಮ? **(ಬಿಂಕದಿಂದ)** ಅಹುದು ದೊಡ್ಡವರು ದೊಡ್ಡವರನ್ನೇ ಇದಿರಾಗುವರು! ನಮ್ಮಂಥ ಗೊಲ್ಲರ ಒಡತಿಯರನ್ನು ಯಾರು ಕೇಳುವವರು?

್ರಪದಿ: ಛೇ! ರುಕ್ಮಿಣಿ, ಇದೆಂತಹ ಮಂಕು ಕಲ್ಪನೆ! ನಾನು ಇದೀಗಲೇ ಬರುವೆನು. ಭಾನುಮತಿಗೆ ಬರಲು ಹೇಳಿದ್ದೆನು. ನೀನು ಇಲ್ಲಿಯೇ ಇರು; ಇಲ್ಲವೇ ನನ್ನೊಡನೆಯೇ ನಡೆ. **(ಇನ್ನೊಬ್ಬ ದಾಸಿಯು ಬರುವಳು.)**

ದಾ: ಮಹಾರಾಣಿಯವರೇ, ಅತ್ತ ಯಾಗ ಮಂಡಪದಲ್ಲಿ ಕುಂತೀ-ಗಾಂಧಾರಿಯವರಿಗೆ-ಹಿರಿಯರಿಗೆ ಉತ್ಥಾಪನೆಯಿತ್ತು ಪೂಜಿಸುವದಿದೆಯಂತೆ. ತಮಗೆ ಬರಲು ಹೇಳಿರುವರು ಪುರೋಹಿತರು.

್ರಪದಿ: ಅಹುದೇ? ನೀನು ನಡೆ ಕುಂದೆ, ನಾನು ಇದೀಗ ಬಂದೆನೆಂದು ತಿಳಿಸು. ಅಯ್ಯೋ! ಎಲ್ಲಿ ಹೋಗಲಿ? **( ಭಾಮೆ ಬರುವಳು.)**

ಾಮೆ: ಇದೇನು? ನಮ್ಮ ರುಕ್ಮಿಣಿಯೂ ಇಲ್ಲಿಯೇ ಇರುವಳೇ! ದ್ರೌಪದಿ, ನಿನ್ನೊಂದಿಗೆ ಒಂದು ಮಾತು ಹೇಳುವದಿದೆ. ನನಗೆ ಕೊಟ್ಟ ಮಂದಿರದಲ್ಲಿ ಸಾಕಷ್ಟು ಅಚ್ಚುಕಟ್ಟೇ ಇಲ್ಲ. ದಾಸ ದಾಸಿಯರೇ ಕಡಿಮೆ. ಇನ್ನೂ ಪರಿವಾರದವರನ್ನು ಇಡಿಸುವಂತೆ ಮಾಡಬಾರದೇ?

್ರಾಪದಿ: ಇಡಿಸದೇ ಏನು? ಆದರೆ ತುಸು ನಿಧಾನಿಸುವೆಯಾ? ನಾನು ಭಾನುಮತಿಗೆ ಭೆಟ್ಟಿಯಾಗಿ ಹಿರಿಯರಿಗೆ ಸತ್ಕರಿಸಿ ಬರುವದಿದೆ. **( ಹೋಗಲು ಮಾಡುವಳು.)**

ುಕ್ಮಿಣಿ: **( ಕೈಹಿಡಿದು )** ಆದರೆ ನಮ್ಮದೇನು ವ್ಯವಸ್ಥೆ ?

್ರಾಪದಿ: ಅಹುದು, ನಿಮ್ಮ ವ್ಯವಸ್ಥೆಯೂ ಆಗಬೇಕು? **(ಮೊದಲನೇ ದಾಸಿಯು ಮತ್ತೆ ಬರುವಳು.)** ವಂದೇ, ಮತ್ತೆ ಬಂದಿಯಾ?

ಂದಾ: ಅಹುದಮ್ಮಾ ಭಾನುಮತಿಯುವರು ಕೋಪಗೊಂಡು ಹೊರಟುಹೋದರು. ತಮ್ಮ ಮುಖ-ಭಂಗವಾಯಿತೆಂತ ಭಾವಿಸಿದರೋ ಏನೋ. ಸುಯೋಧನ ಮಹಾರಾಜರ ಕಿವಿಗೆ ಹೋದರೆ ಇದೊಂದೇ ಅನರ್ಥಕ್ಕೆ ಮುಳುವಾಗುವದೇನೋ!

್ರಾಪದಿ: ಅಯ್ಯೋ! ಏನು ಮಾಡಲಿ? ಎಲ್ಲೆಡೆಗೂ ಒಮ್ಮೆಲೇ ನೋಡಿಕೊಳ್ಳುವದು ಹೇಗೆ? ನಾನು ಭಾನುಮತಿಯ ಮಂದಿರಕ್ಕೆ ನಡೆಯುವೆನು.

ಈ ರುಕ್ಮಿಣೀ ದೇವಿಯವರನ್ನು ಒಯ್ದು ನಮ್ಮ ಕಂಚುಕಿಯಜ್ಜ ಕಡೆಯಿಂದ ಅವರಿಗೆ ಬೇಕಾದಂತೆ ಮಂದಿರದ ವ್ಯವಸ್ಥೆಮಾಡಿಸಿಕೊಡು (ರುಕ್ಮಿಣಿ ಏಳುವಳು.)

ಭಾಮೆ: ಆದರೆ ನನ್ನ ವಿನಂತಿಯ ಗತಿಯೇನು?

ದ್ರೌಪದಿ: (ಖಿನ್ನವಾಗಿ ನಕ್ಕು) ಅಹುದು, ನಿಮ್ಮದೂ ಒಂದು ವಿನಂತಿಯಿದೆ (ಕುಂದೆಯು ಮತ್ತೆ ಬರುವಳು.) ಮತ್ತೆ ಬಂದಿಯಾ? ಇದೋ ಹೊರಟೆ ಬಿಟ್ಟೆನು, ನೋಡು ನಿಲ್ಲು. ಈ ಸತ್ಯಭಾಮಾದೇವಿಯರನ್ನು ನಮ ವಿದುರ ದೇವರಿದ್ದಲ್ಲಿ ಒಯ್ದು ಅವರಿಂದ ಬೇಕಾದ ಪರಿವಾ ಪರಿಚಾರಿಕೆಯರ ಗುಂಪನ್ನು ಇವರಿಗೆ ಕೊಡಿಸು. ಇನ್ ರುಕ್ಮಿಣಿ-ಭಾಮೆಯವರೇ! (ಭಾಮೆ ಏಳುವಳು.) ಹೋಗಿ ಯಮಾ ಈ ಮಂದೆ-ಕುಂದೆಯರನ್ನು ಹಿಂಬಾಲಿಸಿರಿ. ನಿಮ್ಮ ಕಾರ್ಯವಾಗುವದು

ರುಕ್ಮಿಣಿ: } ಭಾಮೆ: } ಆಯಿತು. ಬರುವೆವು. ಅನಂತರ ಭೆಟ್ಟಿಯಾಗುವೆವು. (ಪರಸ್ಪರ ನಮಸ್ಕಾರಗಳು. ಹೋಗುವರು.)

ದ್ರೌಪದಿ: ಉಶ್ssss! (ನಿಡಿದಾಗಿ ಸುಯ್ದು) ಏನು ಗೊಂದಲ? ಏನು ಒತ್ತಡ ತಲೆಯೇ ಕೆಡುವಂತೆನಿಸುತ್ತದೆ! ತುಂಟರೊಂದಿಗೆ ಕಾದಾಡುವದಾದರೂ ಬೇಕು! ನೆಂಟರೊಡನೆ ಒಡನಾಡುವದು ಬೇಡ! (ಸುತ್ತಲೂ ನೋಡಿ ಮನೆಬಿಟ್ಟು ಹೋಗುವ ಮುಗುವಿನಂತೆ) ಒಮ್ಮೆ ಹೊರಗೆ ಬಿದ್ದರೆ, ತಿರುಗಿ ಅಂತಃಪುರವನ್ನು ಕಾಣುವದು ಎಂದೋ! (ಖಿನ್ನನಾಗಿ ನಕ್ಕು) ಇದು ಸಮ್ರಾಜ್ಞಪದದ ಸುಖಸಂಪತ್ತು! ಇದರ ಬದಲು ವನವಾಸದ ದುಃಖ ವಿಪತ್ತುಗಳು ಸಾವಿರ ಪಾಲು ಲೇಸು! (ದ್ರೌಪದಿಯು ಹೋಗುವಳು ಇನ್ನೊಂದು ಬದಿಯಿಂದ ಶ್ರೀಕೃಷ್ಣ ನಾರದರು ಬರುವರು.)

ಕೃಷ್ಣ: (ಉತ್ಸುಕತೆಯಿಂದ) ಕೃಷ್ಣೇ! ಕೃಷ್ಣೆಯೆಲ್ಲಿ? ಅವಳಿಗಾಗಿಯೇ ಓಡಿಬಂದೆನು. (ಸುತ್ತಲೂ ನೋಡುವನು.)

ನಾರದ: (ಛೀ ಹಾಕುವ ಬಗೆಯಲ್ಲಿ) ಕಂಡೆಯಾ! ನಾನನ್ನಲಿಲ್ಲವೇ! ನಿನ್ನ ಕೃಷ್ಣೆ ಬರೇ ಮೃಗ ತೃಷ್ಣೆ! ಬಂದೇ ಓಡಿಬಂದೆ! ಅವಳಿಗೇನು ಗೊತ್ತು ತನಗಾಗಿ ಇಷ್ಟೊಂದು ಕಳವಳದಿಂದ ಕಸವಿಸಿಯಾಗುವ ಅಣ್ಣನೊಬ್ಬನಿರುತ್ತಾನೆಂತ!

ಕೃಷ್ಣ: (ಅಸಹನೆಯಿಂದ) ಬಾಯಿ ಮುಚ್ಚಿರಿ. ಮುನಿಗಳು ಮೌನಿಗಳಾಗಿರುವದೇ ಚೆಂದ! ಬಂದಾಳು. ಬಡವಿಗೆ, ಇದೆಲ್ಲ ಯಾಗದ ಜಂಜಾಲದಲ್ಲಿ ಜೀವವು ನುಗ್ಗುನುಗ್ಗಾಗಿರ ಬೇಕು. ಎಲ್ಲೆಡೆಗೂ ನೋಡಿಕೊಳ್ಳುವದು, ಎಲ್ಲವನ್ನೂ ನೀಗಿಸುವದು ಒಮ್ಮೆಲೇ ಒಬ್ಬಳಿಗೆ ಸಾಧ್ಯವೇ? ಅವಳು ನನ್ನನ್ನು ಕಾಣದಿದ್ದರೂ ಪರಿವೆಯಿಲ್ಲ. ನನ್ನೀ ಕೈಗಳು ಅವಳ ಬೆಂಬಲಕ್ಕೆ

ಹಿಂಬದಿಯಲ್ಲಿ ಯಾವಾಗಲೂ ಹಂಬಲದಿಂದ ಅಣಿಯಾಗಿದ್ದರೇ ಸೈ! ನಾವು ಇಲ್ಲಿಯೇ ಕೂಡ್ರೋಣ. ಈಗ ಬಂದಾಳು ದ್ರೌಪದಿ. (ಕೂತು ಬೀಸಣಿಕೆಯಿಂದ ಬೀಸಿಕೊಳ್ಳುತ್ತ) ಅದುವರೆಗೆ ಬಿಚ್ಚಿರಿ ನಿಮ್ಮದೇನಾದರೂ ರಾಗದ ರಗಳೆಯನ್ನು !

ರದ: (ನಕ್ಕು) ಬಿಚ್ಚುವದೇನು?........ ಆದರೆ ರಗಳೆಯೆಂದೊಡನೆಯೇ ನೆನಪಾಯಿತು ನೋಡು...........ನಿನ್ನ ರುಕ್ಮಿಣಿ ಸತ್ಯಭಾಮೆಯರು ನಿನ್ನಲ್ಲಿ ಇಷ್ಟೊಂದು ಪ್ರೀತಿಮಾಡುವರು. ಆದರೆ ಅವರ ಗೊಡವೆಯೇ ನಿನಗಿಲ್ಲ. ಒಡಹುಟ್ಟಿದ ಸುಭದ್ರೆ..........ಅವಳ ಪರಿವೆಯೂ ನಿನಗನಿಸುವದಿಲ್ಲ............

ಷ್ಣ: ( ಗಾಬರಿ ಚಿರಗುಗಳನ್ನು ನಟಿಸಿ ) ಛೇ ! ಛೇ! ಇದೆಂತಹ ಆರೋಪ! ಸರಿ! ನಿಮಗೆಂತ ಬಿಟ್ಟುಬಂದ ಕೆಲಸದ ಗಂಟನ್ನು ಇಲ್ಲಿಗೇ ಕಟ್ಟಿಕೊಂಡು ಬಂದಿರಾ?

ರದ: ಅಡ್ಡದಿಡ್ಡ ಓಡಬೇಡ, ಕೊಟ್ಟ ಕೆಲಸ ಸರಿಯಾಗಿ ಮುಗಿಸಿ ಬಂದಿದ್ದೇನೆ. ಇನ್ನು ಕೇಳಿದ ಪ್ರಶ್ನೆಗೆ ಸರಿಯಾದ ಉತ್ತರ ಕೊಡು. ನನ್ನ ಅಭಿಪ್ರಾಯದಲ್ಲಿ ಸತ್ಯಾಂಶವಿಲ್ಲವೇ?

ಷ್ಣ: ಸತ್ಯವು ಯಾವಾಗಲೂ ಅಗಮ್ಯ! ನಿಮ್ಮ ಅಭಿಪ್ರಾಯದಲ್ಲಿಯೂ ಅದರ ಅಂಶ ಹೇಗೆ ಕಂಡೀತು? ಇಷ್ಟೊಂದು ತಿಳಿಯಿರಿ. ಮುನಿಗಳೇ ನಾನು ಸಮದರ್ಶಿಯು. ಸಮತೆಯ ಪಾತಳಿಯಲ್ಲಿ ಮಮತೆಯ ಏರಿಳಿತಗಳಿರುವದಿಲ್ಲ.

ರದ: ಎಲಾ, ನಿನ್ನ ತತ್ವಜ್ಞಾನ ನನಗೆ ಬೇಕಾಗಿಲ್ಲ. ಅದೆಲ್ಲ ನನಗೆ ಗೊತ್ತು. ನಾನು ಕೇಳಿದ್ದು ವ್ಯವಹಾರಿಕ ವಿವರ! ಅದಕ್ಕೆ ಹೀಗೆ ಹಾರಿಕೆಯ ಉತ್ತರ ಸಾಲದು.

ಷ್ಣ: ಮತ್ತೇನು ವಿವರಿಸುವದು? ನಾನೇ ವ್ಯವಹಾರಶೂನ್ಯನು!

ರದ: ( ನಕ್ಕು ) ಅದು ಸ್ಪಷ್ಟವೇ ಇದೆ. ಕರೆಯದೇ ಓಡಿಬಂದು ಕಾಣದ ತಂಗಿಗಾಗಿ ಕಾತರನಾಗಿ ಕೂತವನು ವ್ಯವಹಾರಶೂನ್ಯನಲ್ಲದೇ ಮತ್ತೇನು?

ಷ್ಣ: ( ನಕ್ಕು ) ಮುನಿಗಳೇ, ನಿಮ್ಮೀ ಮಾತಿನಲ್ಲಿ ಕೇವಲ ನಿಮ್ಮ ಪೂಜ್ಯ (ಕೈಯಿಂದ ಸೊನ್ನೆಯೆಳೆದು) ಬುದ್ಧಿಯೇ ಕಂಡುಬರುತ್ತದೆ. ತಲೆಯಲ್ಲಿ ಜಡೆಯ ಬೆಟ್ಟ ಬೆಳೆದು ಬಿದ್ದಾಗ ಇದ್ದಷ್ಟು ಮಿದುಳನ್ನು ಹೇನುಗಳು ಮೇಯದೇ ಬಿಡುವವೇ? ನನ್ನ ದ್ರೌಪದಿಯನ್ನು ನೀವರಿಯರಿ. ನನ್ನ ತಂಗಿ ಇರುವಳೇ ಅಷ್ಟು ಸುಗುಣೆ, ಸುಶೀಲೆ, ಸಾಧ್ವಿ............

ನಾರದ: ಇದೋ ಸುರುಮಾಡಿಬಿಟ್ಟೆ ಆಕೆಯನ್ನು ಬಣ್ಣಿಸಲಿಕ್ಕೆ !

ಕೃಷ್ಣ: ನೀವು ಏನೇ ಅನ್ನಿರಿ. ದ್ರೌಪದಿಯ ರೀತಿಯು ನಿಮ್ಮ ಮನವರಿಕೆಯಾಗದು

ನಾರದ: ಅದೇಕೆ? ಯತ್ನಮಾಡಿ ನೋಡಿದರೆ ಏನು ಹಾನಿಯಿದೆ?

ಕೃಷ್ಣ: ಬಂಧು ಬಳಗವಿಲ್ಲದ ಕಿನ್ನರ ಜೋಗಿಗಳು ನೀವು!

ನಾರದ: ಇರಲೊಲ್ಲದೇಕೆ? ಬುದ್ಧಿಭಾವನೆಗಳಿದ್ದ ಮನುಷ್ಯ ಪ್ರಾಣಿಯಲ್ಲವೆ ನಾನು! ತಿಳಿಸಿ ಹೇಳಿದರೆ ತಿಳಿದುಕೊಳ್ಳುವಷ್ಟು ತಿಳುವಳಿಕೆಯೂ ಇಲ್ಲವೆ ನನಗೆ?

ಕೃಷ್ಣ: ಇದೇ ನಿಮ್ಮ ತಿಳಿಗೇಡಿತನ!

ನಾರದ: ಅದು ಹೇಗೆ?

ಕೃಷ್ಣ: ತಿಳುವಳಿಕೆಯಿದ್ದವರು ತನ್ನಾರೆ ತಿಳಿದುಕೊಳ್ಳುತ್ತಾರೆ. ಅವರಿಗೆ ಬೇ ತಿಳಿಹೇಳುವದು ಬೇಕಾಗಿಲ್ಲ.

ನಾರದ: ಆಯಿತಪ್ಪಾ! ನಾವು ತಿಳಿಗೇಡಿ ಮಂದಿ! ಈಗಾದರೂ ಹೇಳಬಾರದೆ

ಕೃಷ್ಣ: ಛೇ ! ಅದೂ ವ್ಯರ್ಥ! ತಿಳಿಗೇಡಿ ಮಂದಿಗೆ ತಿಳಿಸಿ ಹೇಳಿದರೂ ಪ್ರಯೋಜನವಿಲ್ಲ! ತಿಳಿಯಬಲ್ಲವರಾದರೆ ಅವರ ತಿಳಿಗೇಡಿಗಳಾಗುತ್ತಿದ್ದರೇ ? ( **ಗಹಗಹಿಸಿ ನಗುವನು** ) ಮೇಲಾಗಿ, ಈ ಪ್ರೀತಿಯ ವಿಷಯ ನಿಮ್ಮಂಥ ಕೌಪೀನಧಾರಿಗಳಿಗೆ ನಿಷಿದ್ಧ ! ಅದು ನಮ್ಮ ಕೌಟುಂಬಿಕರ ಪ್ರಪಂಚಕ್ಕೆ ಸಲ್ಲುವ ಸಂಗತಿಯು. ನಿಮಗೇಕೆ ಆ ವಿಷಯ?

ನಾರದ: ಹೀಗೆಲ್ಲ ಮಾತಿನ ಪೇಚು ಹೂಡಲು ಹವಣಿಸಿದರೆ, ನಾನೇನು ಪೇಚಿ ಬೀಳುವವನಲ್ಲ! ಏನಾದರೂ ನೆವ ಒಡ್ಡಬೇಡ. ಹೇಳುವದಿದ್ದರೆ ಹೇಳು ನೀನಾದರೂ ಏನು ಹೇಳುವಿ? ನಿನ್ನ ನಡತೆ ನ್ಯಾಯವಲ್ಲವೆಂತಲೇ ಹೀಗೆಲ ಸಾವಿರ ಮಾತಿನಲ್ಲಿ ಸುತ್ತಾಡಿ ಹುತ್ತ ಬಡಿಯುತ್ತಿರುವಿ!

ಕೃಷ್ಣ: ಮುನಿಗಳೇ ನಿಮ್ಮ ಅನಿಕೆಯಂತೆ ಅನ್ನಿರಿ ಬೇಕಾದುದನ್ನು ! ನಾನು ಅನ್ಯಾಯಿಯಲ್ಲ. - ಆಗಿಲ್ಲ, ಆಗಲಿಕ್ಕಿಲ್ಲ. ಆದರೆ .........ದ್ರೌಪದಿಯು ಬರಲಿಲ್ಲವಲ್ಲ! ಪಾಪ ಎಷ್ಟು ತಡವಾಗುವದೋ! ಹಿರಿಯರ ಹೆರವರ ಆದರ ಆತಿಥ್ಯಗಳಲ್ಲಿ ತೊಡಗಿದೆ ಅವಳ ತನುಮನದ ತ್ರಾಣವೆಲ್ಲ ಮುನಿಗಳೇ ನಿಮ್ಮ ಚರ್ಚೆ-ಚರ್ವಣೆ ಇನ್ನೊಮ್ಮೆ ಮಾಡೋಣವಂತೆ ಈಗ ಆ ರಗಳೆ ಸಾಕು. ರಾಗ ತೆಗೆಯಿರಿ.

ನಾರದ: ರಾಗವೇ ಆಯಿತು. ರಾಗವಾದರೆ ರಾಗ! ನೀನು ರೇಗದಿದ್ದರೆ ಸರಿ

ನೋಡು ಇನ್ನೊಮ್ಮೆ ನನ್ನ ಪ್ರಶ್ನೆಗೆ ಸರಿಯಾಗಿ ಸರಿಯಾದ ಸಮಾಧಾನ ಮಾಡಲೇ ಬೇಕು. ತಿಳಿಯಿತೇ? **(ತಂಬೂರಿ ದನಿಗೂಡಿಸಿ ಭಜನೆಯೊಂದನ್ನು ಹಾಡತೊಡಗುವನು. ಎರಡು ನುಡಿಗಳಾದೊಡನೆಯೇ ಕೃಷ್ಣನು ರೇಗಿಕೊಂಡು ನಡುವೆಯೇ ತಡೆಯುವನು.)**

ಕೃಷ್ಣ: ಸಾಕು ದಾಸಯ್ಯರೇ, ಸಾಕು! ಭಕ್ತರೆಂದರೆ ಭಗವಂತನ ಭಟ್ಟಂಗಿಗಳೆಂತ ತಿಳಿದಿರಾ? ನನ್ನ ಯೋಗ್ಯತೆ ನನಗೆ ಚನ್ನಾಗಿ ಗೊತ್ತಿದೆ. ನೀವು ಹಾಡಿ ಹೊಗಳಿ ಹೇಳಬೇಕೆಂತಿಲ್ಲ. ಜನರಿಗೆ ಬೋಧಿಸುವದು ಇದೇ ಭಕ್ತಿಯ ಸೂತ್ರವೇ? ಈ ಮಾದರಿಯ ನಿಷ್ಕ್ರೀಯ ಸ್ತುತಿಪಾತವು ನನಗೆ ಸೇರದು. ತಮ್ಮ ಗುಣಕರ್ಮಗಳಿಗನುಸಾರವಾಗಿ ಲೋಕಸಂಗ್ರಹದ ಕರ್ತವ್ಯವನ್ನು ತಪ್ಪಿಸಿಕೊಂಡು, ಹೀಗೆ ಭಾವೋನ್ಮಾದದಲ್ಲಿ ತಾಳಗೆಟ್ಟು ತಾಳ ಕುಟ್ಟುವದರಿಂದ ದೊರಕುವಷ್ಟು ನನ್ನ ಭಕ್ತಿಯೋಗವು ಅಗ್ಗವಲ್ಲ! ನನ್ನಂತೆ ನಡೆಯಲು ಎಡಬಿಡದೆ ದುಡಿಯುವದೇ ನನ್ನ ನಿಜವಾದ ಭಕ್ತಿಯು!

ನಾರದ: ಅದೆಲ್ಲ ಯಾರು ಅಲ್ಲವೆಂದರು? ಭಕ್ತರಿಗೆ ಭಕ್ತಿಯನ್ನು ಕಲಿಸುವಷ್ಟು ಕಂಗೇಡು ಭಗವಂತನಿಗೆ ಬರಬೇಕಾಗಿಲ್ಲ. ಸುಮ್ಮನೆ ಮುಂದೆ ಕೇಳಬಾರದೇ? ಕೇಳುವ ತಾಳ್ಮೆಯಿಲ್ಲದೇ ಹಾಡಲು ಹೇಳುವದೇಕೆ? ಕೊನೆಯವರೆಗೂ ಕೇಳಿ ನಿನ್ನ ಅಭಿಪ್ರಾಯವನ್ನು ಕೊಡು. **( ನಕ್ಕು ತಿರುಗಿ ಹಾಡಲಾರಂಭಿಸಿ ಉಳಿದ ನುಡಿಗಳೊಂದಿಗೆ ಹಾಡು ಮುಗಿಸುವನು.)**

ಕೃಷ್ಣ: **( ಸಂತೋಷದಿಂದ )** ಸೈ ! ಸೈ! ಇದು ಸರಿ! ಜನರಲಿ ನಲಿವ ಜನಾರ್ದನ ಆರಾಧನೆಯೇ ನಿಜವಾದ ಭಕ್ತಿಯ ವಿಧಿಯು! ಮುಕ್ತಿಯ ನಿಧಿಯು! **( ನಗುತ್ತ )** ಇದು ನಿಮ್ಮದೇ ಕಪಿತ್ವವೇ?

ನಾರದ: ಇದು ಕವಿತ್ವವು! ಕಪಿತ್ವವು ಇದೀಗ ಕಂಡುಬಂತಲ್ಲ-ತಾಳ್ಮೆಗೆಟ್ಟು ಸಿಟ್ಟುಗೊಂಡು ಹರಿಹಾಯುವದು ಅದರದೇ ಲಕ್ಷಣ! **( ಇಬ್ಬರೂ ನಗುವರು.)**

**( ದ್ರೌಪದಿಯು ಒಳಗೆ ಬರುವಳು. ಆದರೆ ತನ್ನಲ್ಲಿಯೇ ವ್ಯಗ್ರವಾಗಿದ್ದುದರಿಂದ ಕೃಷ್ಣ-ನಾರದರನ್ನು ಪರಾಂಬರಿಸುವದಿಲ್ಲ.)**

ದ್ರೌಪದಿ: ಅಬ್ಬ! ಕೊನೆಗೂ ತಿರುಗಿ ಬಂದೆನು! ಆದರೆ ಬಿಡುವೆಲ್ಲಿಯದು? ಮತ್ತೆ ಮಯಸಭೆಗೆ ಹೋಗುವದಿದೆ! ನಮ್ಮ ಸಾಮಂತಚಕ್ರದ ನಿಮಂತ್ರಿತ ಅರಸು-ಅರಸಿಯರೆಲ್ಲ ಅಲ್ಲಿ ನೆರೆದಿರುವರು. ಅವರನ್ನೆಲ್ಲ ಸಮ್ರಾಜ್ಞಯೆಂತ ಪ್ರಗಟವಾಗಿ ಉಪಚರಿಸುವ ವಿಧಿಯು ಜರುಗುವದಿದೆ! ಹೋಗಲು ತಪ್ಪಿದರೆ ಅನರ್ಥವಾದೀತು! ಆ ಸಭೆಯನ್ನು ನೆನಿಸಿದೆನೆಂದರೆ ಎದೆಯು ನಡುಗುತ್ತದೆ ! ಕೌರವರ ಅರಸು ಮಕ್ಕಳೆಲ್ಲ ತಮ್ಮ ಆತಿಥ್ಯದಲ್ಲಿ

ಕುಂದು-ಕೊಂಕುಗಳೇನಾದರೂ ಇದ್ದರೆ ಅರಸಿ ಜಗಳ ಕೆದರಲು ಎವೆಯಿಕ್ಕದೆ ಎಚ್ಚರದಿಂದ ನೋಡುತ್ತಿರುವರು! ಅವರ ಗೌರವದಲ್ಲಿ ಸ್ವಲ್ಪವೂ ತಪ್ಪಿದರೆ ಕೌರವವೇ ತೆರೆದೀತು ನಮ್ಮನ್ನು ನುಂಗಲಿಕ್ಕೆ! ಅಯ್ಯೋ! ಈ ಸಮಯ ನನ್ನ ಕೃಷ್ಣನಿರಬೇಕಾಗಿತ್ತು ನನ್ನ ಬೆಂಬಲಕ್ಕೆ! ಆದರ ಅವನೆಲ್ಲಿ ಬರುವನು? ಅವನಿಗೆಲ್ಲಿ ನನ್ನ ಕರೆ ಹೋಗಿದೆ?......... (**ಹಿನ್ನೆಲೆಯಲ್ಲಿ ನಾರದರು ಕೃಷ್ಣನನ್ನು ನಗುತ್ತ ನೋಡುವರು. ಕೃಷ್ಣನು ಸುಮ್ಮನಿರಲು ಸೂಚಿಸುವನು.**)..... ಕರೆಯ ಹೊರತು ಹೊರಟು ಬರಲು ಕೃಷ್ಣನು ಒಪ್ಪಬಹುದೇ? ಏಕೆ ಒಪ್ಪಬಾರದು? ಏಕೆ ಬರಬಾರದು? ನನ್ನ ಕೃಷ್ಣನು ಉಪಚಾರ ಆಡಂಬರಗಳಿಗಾಗಿ ಬಾಯ್ಬಿಡುವವನಲ್ಲ...... (**ಈಗ ಕೃಷ್ಣನು ಗೆಲುವಿನಿಂದ ನಾರದರನ್ನು ನೋಡುವನು. ನಾರದರು ಸುಮ್ಮನಿರಲು ಸನ್ನೆ ಮಾಡುವರು.**).......... ನಾನು ಕೃಷ್ಣನಲ್ಲಿ ನಿರಪೇಕ್ಷವಾಗಿ ಪ್ರೇಮವಿಟ್ಟು ನಡೆದುಕೊಂಡಿಲ್ಲವೇ? ಆತನೂ ಅಷ್ಟೇ ಅಹೇತುಕ ಭಾವದಿಂದ ನನ್ನೊಡನೆ ಏಕೆ ನಡೆದುಕೊಳ್ಳಬಾರದು? ಅಂತಃಕರಣದ ಕರೆಯು ಅಂತಃಕರಣಕ್ಕೆ ಕೇಳಿಸದೇ? ನನ್ನ ಕೃಷ್ಣನು ತಾನೇ ಬಂದಾನೇ? ..........
(**ಮಂದೆ ಬರುವಳು.**)

ಮಂದೆ: ದೇವಿಯುವರೇ! ಪಾಕಶಾಲೆಯಲ್ಲಿ ಗೊಂದಲವೆದ್ದು ಬಿಟ್ಟಿದೆ! (**ಆಕೆಯ ಲಕ್ಷ್ಯ ಹಿಂಬದಿಗೆ ಹೋಗಿ ದಿಗಿಲಿನಿಂದ ತಡೆಯುವಳು. ಕೃಷ್ಣನು ತುಟಿಗೆ ಬೆರಳಿಟ್ಟು ಸುಮ್ಮನಿರಲು ಸೂಚಿಸುವನು.**)

ದ್ರೌಪದಿ: ಏನೇ ಒಮ್ಮೆಲೇ ಸುಮ್ಮನಾದಿ? ಏನಾಯಿತು?

ಮಂದೆ: ಅದೋ! ಅಲ್ಲಿಯ ಗದ್ದಲ ಇಲ್ಲಿಯತನಕ ಕೇಳಿಸುತ್ತದೆ! ಪ್ರತಿಯೋರ್ವ ವಲ್ಲಭನೂ ತಾನೇ ಬಲ್ಲವನೆಂತ ಮೇಲಾಟದಿಂದ ಗೊಂದಲ ವೆಬ್ಬಿಸುತ್ತಿರುವನು. ಯಾರಿಗೆ ಯಾರೂ ಕೇಳುವದಿಲ್ಲ! ಶಕುನಿ ರಾಜರು ಅದೇತರ ಸಲುವಾಗಿಯೋ, ಒಳಗೆ ಹೋಗಿದ್ದರಂತೆ! ಆದರೆ ಅಡಿಗೆಯವರೆಲ್ಲ ಒಟ್ಟಾಗಿ ಅವನ್ನು ಮನವಾರೆ ಬಯ್ದು ಕಳುಹಿಸಿದರಂತೆ!

ದ್ರೌಪದಿ: (**ಗಾಬರಿಯಾಗಿ**) ಅಯ್ಯೋ! ದೈವವೇ ! ಏನು ಮಾಡಲಿ! ಇವರನ್ನೆಲ್ಲ ಹಿಡಿತದಲ್ಲಿಟ್ಟು ನಡಿಸುವದೆಂತು? ಅತ್ತ ಅವರನ್ನು ಒಡಂಬಡಿಸುವದಾದರೂ ಹೇಗೆ? ಅಯ್ಯೋ ನನ್ನ ಕೃಷ್ಣನು ಇದೀಗ ಇಲ್ಲಿ ಇರಬೇಕಿತ್ತು?

ಕೃಷ್ಣ: (**ಎದ್ದು ಮುಂದೆ ಬರುತ್ತ**) ಇದ್ದರೆ ಕಣ್ಣೆತ್ತಿ ನೋಡುವವರು ಬೇಕಲ್ಲವೇ? ಮೂಲೆಗುಂಪಾಗಿ ಇಲ್ಲಿ ಬೀಳುವದೇನು ದ್ವಾರಕೆಯಲ್ಲಿರುವದೇನು?

ದ್ರೌಪದಿ: (**ಹರ್ಷ ನಿರ್ಭರಳಾಗಿ**) ಬಂದಿಯಾ? ನಿಜವಾಗಿಯೂ ಬಂದಿಯಾ?

ಅಹಹಾ! ಎಂದು ಬಂದೆ? ಏಕೆ ಕರೆಯಲಿಲ್ಲ? ಎಲ್ಲದ್ದಿ?

ೃಷ್ಣ: ಆಗಿನಿಂದಲೂ ಇಲ್ಲಿಯೇ ಇದ್ದೆನು. ಅಂತಃಕರಣದ ಕರೆಯು ಅಂತಃಕರಣಕ್ಕೆ ಕೇಳಿಸಬೇಕಲ್ಲವೇ ? ( ನಕ್ಕು )

ೌಪದಿ: ಕರೆಯುವ ಅಂತಃಕರಣ ಒಂದೇ ನನ್ನದು! ಅಹಹ ! ನಾನಿಂದು ಧನ್ಯಳು! ನನ್ನ ಕೃಷ್ಣನೇ ಅಂಥವನು!

ೃಷ್ಣ: ಆದರೆ ನೀನು ಮಾತ್ರ ಎಂಥವಳು ಕೃಷ್ಣೇ ?

ೌಪದಿ: ಕೊನೆಗೂ ನನ್ನ ಮೊರೆಯನ್ನು ಕೇಳಿದಿ!

ೃಷ್ಣ: ಆದರೆ ನೀನೆಲ್ಲಿ ನನ್ನ ಮೋರೆ ಕಾಣಲು ಸಿದ್ಧಳಿದ್ದಿ?

ೌಪದಿ: ಕೃಷ್ಣಾ ! ಕ್ಷಮಿಸು. ನನ್ನ ಲಕ್ಷ್ಯಕ್ಕೆ ಬರಲಿಲ್ಲ. ಬಂದು ಬಹಳ ಹೊತ್ತಾಗಿರಬಹುದು. ಮೋರೆ ಬಾಡಿಹೋಗಿದೆ. ಹಸಿವಾಗಿರ ಬಹುದಲ್ಲವೇ ?

ೃಷ್ಣ: ಆದರೆ ಕೇಳುವವರಾರು? ಗೊಲ್ಲರ ಮಕ್ಕಳಿಗೆ ಬಲ್ಲಿದವರಲ್ಲಿ ಕೇಳುವರ್‍ಯಾರು? ............

ಾರದ: ( ತಾನೂ ಮುಂದೆ ಬಂದು ) ಗೋಸಾವಿಯ ಗೊಗ್ಗನನ್ನೂ ಕಾಣುವವರ್‍ಯಾರು?

ೌಪದಿ: ( ಇನ್ನೂ ಅಚ್ಚರಿಗೊಂಡು ) ಇದೇನು? ನಾರದ ಮಹರ್ಷಿಗಳೇ? ತಾವೂ ಬಂದಿರುವಿರಾ? ಕ್ಷಮಿಸಿರಿ. ನನ್ನ ಚಿಂತೆಯಲ್ಲಿ ನಾನಿದ್ದೆ! ಅಹಹಾ ! ನನ್ನ ಭಾಗ್ಯಕ್ಕೆ ಇಂದು ಎಣೆಯೇ ಇಲ್ಲ (ನಾರದರ ಪಾದಕ್ಕೆ ಎರಗುವಳು.)

ಾರದ: ಅಖಂಡ ಸೌಭಾಗ್ಯವತೀ ಭವ! ಆಯುಷ್ಮತೀ ಭವ!

ೃಷ್ಣ: ಕೃಷ್ಣೇ! ನೀನು ನನ್ನನ್ನು ಮರೆತರೂ ನಾನು ನಿನ್ನನ್ನು ಮರೆಯಲಿಲ್ಲ ಕಂಡಿಯಾ?

ೌಪದಿ: ನಾನು ಮರೆತೆನೆಂಬುದು ಹೇಗೆ ಕೃಷ್ಣಾ? ಕೂಸು ಆಟದಲ್ಲಿ ಮೈ ಮರೆತಾಗಲೂ ತಾಯಿಯನ್ನು ಮರೆಯುವದುಂಟೇ? ನನ್ನ ದೇಹದ ರೋಮ ರೋಮಗಳು, ಜೀವದ ರೇಣು ರೇಣುಗಳು ನಿನ್ನ ನೆನಪಿನಲ್ಲಿ ನಲಿನಲಿದು ನಗುತ್ತವೆ! ಆದರೆ ಆಡಿತೋರಿಸಲೇಕೆ? ತೋರಿಸುವದಾದರೂ ಎಂತು? ನಿನ್ನರಿವು ಎಲ್ಲವನ್ನೂ ಬೆಳಗಿಸಿ ಬೆಳಕಿನಂತೆ ಕಾಣದೇ ಕಂಗೊಳಿಸುವ ಕಾಯಕವದು! ಕೃಷ್ಣ! (ಭಾವಪರವಶಳಾಗಿ ಆತನನ್ನು ತಬ್ಬಿಕೊಂಡು ಕಣ್ಣು ಮುಚ್ಚಿ ಆತನ ಹೆಗಲಿಗೆ ಆನಿ ನಿಲ್ಲುವಳು. ಕೃಷ್ಣನು ಮಮತೆಯಿಂದ ಮೈದಡವಿ "ಕೃಷ್ಣೇ !" ಎಂತ ಉಸುರುವನು.)

ನಾರದ: ಅಹಹಾ ! ಇಂತಹ ಪ್ರೀತಿಯು ನಿಜವಾಗಿಯೂ ನಿರುಪಮವೂ! ನಿರತಿಶಯವು!

ಕೃಷ್ಣ: ಅದಿರಲಿ, ಕೃಷ್ಣೇ ! ನೀನಿನ್ನು ವಿಲಂಬಿಸಬೇಡ. ನಿನ್ನ ಪಾಕಶಾಲೆಯ ಪಾರುಪತ್ಯವನ್ನೆಲ್ಲ ನನಗೆ ಒಪ್ಪಿಸು. ನಾನು ಅಲ್ಲಿಗೆ ಹೋಗಿ ತಕ್ಕ ವ್ಯವಸ್ಥೆ ಕೈಗೊಳ್ಳುವೆನು!

ದ್ರೌಪದಿ: ಏನು? (**ನಂಬಿಗೆಯಿಲ್ಲದ ನಗೆಯಲ್ಲಿ**) ನೀನು ಅಡಿಗೆಯ ಮೇಲಧಿಕಾರಿಯೇ

ಕೃಷ್ಣ: (**ನಗುತ್ತ**) ಅಲ್ಲದೇ ಮತ್ತೇ? ಅಡಿಗೆಯ ಮೇಲೆ ಬರೇ ಉಣ್ಣುವವರದೇ ಅಧಿಕಾರವೇ?

ದ್ರೌಪದಿ: ವಿನೋದವಿರಲಿ. ಕೃಷ್ಣಾ ಇಂಥ ಕೆಲಸಕ್ಕಾಗಿ ಇಲ್ಲಿಗೆ ಬಂದಿಯಾ? ಆದಾಗದು. ಅರಸರಿಗೂ ಹಿರಿಯರಸ ನೀನು. ದೇವಮಾನವರಿಗೆಲ್ಲ ಅಧಿದೇವನು ನೀನು!

ಕೃಷ್ಣ: ಮತ್ತೇನು ನಾನು ? ಬರೇ ಮರುಳಿ ನೀನು!

ದ್ರೌಪದಿ: ಅದೇನಿಲ್ಲ. ನೀನು ಬಳಿಯಲ್ಲಿದ್ದರೆ ಸಾಕು. ಸುತ್ತಲೂ ಸುಳಿಯುತ್ತಲಿದ್ದರೆ ಸಾಕು. ಆದೇ ನನಗೆ ಬೆಂಬಲವು.

ಕೃಷ್ಣ: ಎಂತಹ ಕೀಳು ಕೆಲಸ ಕೊಟ್ಟಿಯೇ! ( **ನಕ್ಕು** ) ನಿನ್ನ ಕಾಲಸುತ್ತಲೂ ಸುಳಿದಾಡಲು ನಾನೇನು ಬೆಕ್ಕಿನ ಮರಿಯೇ? ಅಲ್ಲವೇ ದ್ರೌಪದಿ, ನಿನ್ನ ತಿಳುವಳಿಕೆ ತಪ್ಪಿದೆ. ಕೆಲಸದಲ್ಲಿ ಕೀಳು ಮೇಲೆಂಬ ಎಣಿಕೆಯಿಲ್ಲ. ಎಲ್ಲ ಕರ್ತವ್ಯವೂ ಪವಿತ್ರವು, ಪೂಜಾರೂಪವು. ಇರಲಿ. ಆ ಚರ್ಚೆ ಈಗ ಅಪ್ರಸ್ತುತ. ನಾನು ಹೊರಟೆನು ಪಾಕಶಾಲೆಗೆ. ಅರಸರಿಗೂ ಹಿರಿಯರಸನೆಂದಮೇಲೆ, ಯಾರೂ ಆರಿಸದ ಕೆಲಸವನ್ನು ನಾನೇ ಆರಿಸಬೇಕಾಯಿತಲ್ಲವೇ? (**ಹೋಗುತ್ತ ನಿಂತು**) ಮೇಲಾಗಿ, ನನಗೆ ಚಿಕ್ಕಂದಿನಿಂದಲೂ ಹಾಲು ಬೆಣ್ಣೆಗಳ ವಿಷಯ ಸ್ವಲ್ಪ ವಿಶೇಷ ವ್ಯಾಸಂಗ!

ನಾರದ: ಈಗ ಸರಿ, ಒಳ್ಳೇ ಪಾರುಪತ್ಯ ವಹಿಸಿದಿ! ದ್ರೌಪದೀ, ನೀನು ಮೋಸ ಹೋದಿ! ಕಳ್ಳರ ಕೈಗೇ ಕಣಜದ ಕೀಲಿಯನ್ನು ಕೊಡುವಂತೆ ಆಯಿತು ನೋಡು!

ಕೃಷ್ಣ: ಆ ಮುನಿಗಳ ಮಾತಿಗೆ ಕಿವಿಗೊಡಬೇಡ. ಕೃಷ್ಣೆ! ಅವರ ಹಾಡಿಗೆ ಮಾತ್ರ ಕಿವಿಗೊಡಬೇಕು! ನಾರದರೇ ಕಳ್ಳರನ್ನು, ಹೀಗೆ ಹೊಣೆಗಾರಿಕೆಯ ಹೋರೆಗಳಿಗೆ ಹೂಡಿಯೇ ಹಾದಿಗೆ ತರಬೇಕಾಗುತ್ತದೆ. ಮತ್ತೆ ನೋಡಿ, ನನಗೇನೋ ಶಕಕರ್ತನೆಂದು ಆಗ ಶಾಪಿಸಿದ್ದಿರಲ್ಲವೇ? ಅದೇ ಕೂಡಿಬಂತು ಈಗ ಯೋಗಾಯೋಗ! ಪಾಕಾಧಿಪತ್ಯವಹಿಸಿ

ಶಕಕರ್ತನಾದೆನು! ಹಃ ಹಃ ಹಃ ಹಃ ಹಃ ( **ನಗುತ್ತ ಹೋಗುವನು. ದ್ರೌಪದಿಯು ಸಸ್ಮಿತ ವಿಸ್ಮಿತಳಾಗಿ ಆ ನಿಟ್ಟಿನಲ್ಲಿಯೇ ನೋಡುತ್ತ ನಿಲ್ಲುವಳು.)**

**ದ್ರೌಪದಿ:** **(ನಿಮಿಷನಂತರ ಆತನು ಹೋದ ದಿಶೆಯಲ್ಲಿ ಕೈಜೋಡಿಸಿ)** ಜಗಜ್ಜೀವನ ವಿಭೂತಿ ಪುರುಷನೇ! ಅನಂತಪ್ರಣಾಮುಗಳು! ನಾರದರೇ, ಸೇವಾಧರ್ಮದಲ್ಲಿಯೇ ಸಾರ್ವಭೌಮತೆಯ ಮರ್ಮವನ್ನು ಕಂಡು ಕಾಣಿಸುವ ಎಂಥ ಅಲೌಕಿಕ ಮಹಾತ್ಮ್ಯ ವಿದು!

**ನಾರದ:** ಅಹುದು ದೇವಿ! ನೀನು ಧನ್ಯಳು! ನಿಮ್ಮೀರ್ವರ ಅನ್ಯೋನ್ಯ ಅನನ್ಯ ಸ್ನೇಹವನ್ನು ಕಂಡು ಕೊಂಡಾಡಿ ನಾನು ಧನ್ಯನು! ನಾನೂ ಒಂದು ಕೆಲಸವನ್ನು ಕೈಗೊಳ್ಳುವೆನು. ಯಾಗಕ್ಕಾಗಿ ಬರಹೋಗುವ ಅತಿಥಿಗಳ ಆದರಸತ್ಕಾರವು ಸರಿಯಾಗಿ ಸಾಗಿಸುವಂತೆ ನೋಡಿಕೊಳ್ಳುವೆನು.

**ದ್ರೌಪದಿ:** ನಾನೇನು ಹೇಳಲಾರೆ. ತಮ್ಮಂತಹ ಮಹಾನುಭಾವರು.......

**ನಾರದ:** ಅದು ಸಾಕು ಬಿಡು. ನಾವು ಮಹಾನುಭಾವಿಗಳಲ್ಲ, ಸಹಾನುಭಾವಿಗಳು! ಭಗವಂತನ ಹೆಜ್ಜೆಯಲ್ಲಿ ಹೆಜ್ಜೆಯಿಟ್ಟು ನಡೆಯುವದು ಭಕ್ತರ ಕೆಲಸವಲ್ಲವೇ? ಗೊಲ್ಲ ಹೋದಲ್ಲಿ ಗೋವು. ನೀನು ಮಯಸಭೆಗೆ ಹೋಗಲು ಸಿಂಗರಿಸಿಕೊಳ್ಳು ನಡೆ. **(ದ್ರೌಪದಿಯು ನಮಸ್ಕರಿಸುವಳು.)** ಕಲ್ಯಾಣಮಸ್ತು! **(ದ್ರೌಪದಿ ಹೋಗುವಳು.)** ಅಹಹ, ಎಂಥ ಅದ್ವಿತೀಯ ಸ್ತ್ರೀಯು! ಭೂಮಿಗೇ ಭೂಷಣಭೂತಳು! ಸನಾತನ ಸಂಸ್ಕೃತಿಯ ಸಾಮ್ರಾಜ್ಯಲಕ್ಷ್ಮಿಯು! ಸರಸ ಸಜ್ಜನಿಕೆಯ ಸೌಭಾಗ್ಯದೇವಿಯು! ಇವಳ ಮಹಿಮೆಯನ್ನು ರುಕ್ಮಿಣಿ-ಭಾಮೆಯರು ಮನಗಾಣುವರೆಂದೋ! ಅದೋ ಬಂದೇ ಬಿಟ್ಟರು ಜ್ವಾಲಾಮುಖಿಗಳು! **(ಎಡಬಲದಿಂದ ಅನುಕ್ರಮವಾಗಿ ರುಕ್ಮಿಣಿ ಸತ್ಯಭಾಮೆಯರು ಬರುವರು.)**

**ರುಕ್ಮಿಣಿ:** ( **ಬಂದು** ) ದ್ರೌಪದೀ ! ದ್ರೌಪ.......... ಅಯ್ಯ. ಇದ್ಯಾರು?

**ನಾರದ:** ( **ದೇಶಾವರಿ ನಗೆಯಿಂದ** ) ನಾನು ನಾರದನು.

**ಭಾಮೆ:** ( **ಬಂದು** ) ದ್ರೌಪದೀ ! ನನಗೊಂದು .......... ಅಂs ಇದೇನು?

**ನಾರದ:** ಇ-ದ-ಲ್ಲ ಇವನು ! ನಾನೇ, ನಾರದನೇ ಸರಿ. ವಸ್ತುವಲ್ಲ ವ್ಯಕ್ತಿ.

**ರುಕ್ಮಿಣಿ:** ಏನು ಮಹರ್ಷಿಗಳೇ ಎಂದು ಬಂದಿರಿ?

**ಭಾಮೆ:** ಕೃಷ್ಣನನ್ನು ಕಂಡಿರಾ?

**ನಾರದ:** **(ಅಸಹಾಯನಂತೆ)** ಯಾರಿಗೆ ಮೊದಲು ಉತ್ತರವನ್ನು ಕೊಡಲಿ? ನಾನು ಬಂದದ್ದು ತೀರ ನಿಜ! ನಿಮ್ಮ ಕಣ್ಣೇ ಅದಕ್ಕೆ ಸಾಕ್ಷಿ. ಬಂದದ್ದು

ಈಗಲೇ-ಅಂದರೆ ತುಸು ಆಗ. ಕೃಷ್ಣನನ್ನೂ ಕಂಡಿರುವೆನು. ನಾನೇ ಮೊದಲು ಕಂಡೆನು. ಆಯಿತೇ?

ರುಕ್ಮಿಣಿ: ಅಂsss ಕಂಡಿರಾ? ಎಲ್ಲಿರುವನು?

ಭಾಮೆ: ಏನೆಂದನು? ನಾವು ಬಂದಿರುವೆವೆಂತ ಆತನಿಗೆ ಗೊತ್ತಿದೆಯೇ? ನಮಗೆಲ್ಲಿ ಸಿಗುವನು?

ನಾರದ: ಹಾಗೆಲ್ಲ ಸಿಗುವ ಸ್ಥಿತಿಯಲ್ಲಿ ಅವನಿಲ್ಲ ಈಗ.

ರುಕ್ಮಿಣಿ: ಅದೇಕೆ? ಬೇನೆಗೀನೆ ಬಿದ್ದಿರುವನೇ?

ನಾರದ: ಇನ್ನೂ ಬಿದ್ದಿಲ್ಲ! ಮತ್ತೇನಿಲ್ಲ. ಇನ್ನೆಲ್ಲಿಯೂ ಅವನು ಸಿಗುವಂತಿಲ್ಲ. ನೀರು ಕುಡಿಯುವ ನೆವದಿಂದ ಪಾಕಶಾಲೆಗೆ ಹೋಗಿ ನೋಡಿದರೆ ನಿಮ್ಮ ಶ್ಯಾಮಸುಂದರನು ಧೂಮಧೂಸರನಾಗಿ ವಿರಾಜಿಸುವದು ಕಂಡುಬಂದೀತು.

ಭಾಮೆ: **(ನಕ್ಕು)** ಅಷ್ಟೇ ತಾನೇ! ಬಂದಂದಿನಿಂದ ದ್ರೌಪದಿಯು ಸವಿಸವಿ ತಿಂಡಿಗಳನ್ನು ತಿನಿಸುವದೊಂದೇ ನಡಿಸಿರಬಹುದು. ಪಾಕಶಾಲೆಯನ್ನು ಬಿಟ್ಟು ಹೊರಗೆ ಬೀಳಲು ಅವನಿಗೆ ವೇಳೆಯೇ ಇಲ್ಲ!

ರುಕ್ಮಿಣಿ: ಇದೀಗ ಸಿಕ್ಕಿತು! ದ್ರೌಪದಿಯ ಮಮತೆಯ ಮಂತ್ರ. ಬಾಯಿಗೆ ತೆರಪಿರದಷ್ಟು, ಬಾಯಿ ತೆರೆದಾಗೆಲ್ಲ ತಿಂಡಿತಿನಿಸುಗಳನ್ನು ತುಂಬುವದೇ ಕೃಷ್ಣನನ್ನು ಒಲಿಸಿಕೊಳ್ಳುವ ಹೊಂಚಾಗಿದೆ. ಸರಿ.

ನಾರದ: ಇದ್ಯಾರಂದರು ಹೀಗೆ? ನಿಮ್ಮದು ತುಸು ತಪ್ಪು ಕಲ್ಪನೆಯಾಗಿದೆ. ಕೃಷ್ಣನು ಪಾಕಶಾಲೆಯಲ್ಲಿ ಬೆಣ್ಣೆ ತಿನ್ನಲು ಹೋಗಿಲ್ಲ. ಅಡಿಗೆಯವರ ಮೇಲೆ ಅಧಿಕಾರ ನಡೆಯಿಸಲು ಪಾರುಪತ್ಯಗಾರನಾಗಿ ನೇಮಿಸಲ್ಪಟ್ಟಿರುವನು.

ಭಾಮೆ: ಅಯ್ಯೋ! ನಿಜವೇ! (ತಬ್ಬಿಬ್ಬಾಗಿ ಕೂಡ್ರುವಳು.)

ರುಕ್ಮಿಣಿ: **(ಸಿಡಿಮಿಡಿಯಾಗಿ)** ಏನು? ದ್ವಾರಕಾಧೀಶ್ವರನು ಅಡಿಗೆಯ ಅಧಿಕಾರವೇ! ಇಂತಹ ಕೀಳು ಕೆಲಸ ಕೈಕೊಳ್ಳಲು ಕೃಷ್ಣನನ್ನು ಯಾರು ಬಲಾತ್ಕರಿಸಿದರು?

ನರದ: ಯಾರೇಕೆ ಬಲಾತ್ಕರಿಸಬೇಕು? ತಾನೇ ಹೋಗಿ ಹೊತ್ತಿಕೊಂಡಿದ್ದಾನೆ ಅಡಿಗೆಯಮನೆಯ ಪಾರುಪತ್ಯದ ಹೊಣೆಯನ್ನು!

ಭಾಮೆ: ಇದ್ದಾಳಲ್ಲವೇ ಅವನ ಮೆಚ್ಚಿನ ತಂಗಿ-ಆ ದ್ರೌಪದಿಯೆ ಹೇಳಿರಬಹುದು.

ನಾರದ: ಛೇ! ಅವಳು ಬೇಡ ಬೇಡವೆಂದು ಸಾರಿದೂರಿ ಬಿನ್ನವಿಸಿಕೊಂಡಳು. ಆದರೆ

ಹಟಮಾರಿ ಹುಡುಗನಂತೆ ತಾನೇ ಒತ್ತಾಯದಿಂದ ಆ ಕೆಲಸ ಕೈಗೊಂಡಿದ್ದಾನೆ.

ಕ್ಮಿಣಿ: ಅಯ್ಯೋ! ಎಂತಹ ಬುದ್ಧಿಯವ್ವಾ! ನಾವಿನ್ನು ಯಾದವ ಅರಿಸಿಯರೆಂತ ಮೆರೆದ ರಾಣಿರಮಣಿಯರಲ್ಲಿ ತಲೆಯೆತ್ತಿ ತಿರುಗುವ ಬಗೆಯಾದರೂ ಉಂಟೇ?

ಾಮೆ: ಅಹುದಕ್ಕಾ! ನಮ್ಮನ್ನು ನಗೇಗೀಡುಮಾಲೇ ಕೃಷ್ಣನು ಈ ಕಾರಸ್ಥಾನ ಹೂಡಿರಬೇಕು. ನಾವು ಯಾದವ ಪ್ರಮುಖರಲ್ಲಿ ಮುಖತೋರಿಸುವದಾದರೂ ಹೇಗೆ? 'ನಿಮ್ಮ ರಾಜರೆಲ್ಲಿ' ಎಂತ ಕೇಳಿದರೆ ಅಡಿಗೆಯ ಕೋಣೆಯನ್ನು ಕಾಣಿಸುವದೇ?

ಕ್ಮಿಣಿ: ಅಹುದವ್ವಾ ಹೊರಗೆ ರಾಜಮಂಡಲದ ಓಲಗದಲ್ಲಿ ಬರೇ ಅಪಹಾಸ್ಯಕ್ಕೆ ಮುಳುವಾಗಿದೆ ಕೃಷ್ಣನ ಕೃತ್ಯ!.............ಅದೇನಿಲ್ಲ ನಡೆ. ತಾವೂ ನಡೆಯಿರಿ ನಮ್ಮ ಜೊತೆಗೆ. ನೆಟ್ಟಗೆ ಪಾಕಶಾಲೆಗೆ ಹೋಗಿ ಕೃಷ್ಣನ ಕಣ್ಣು ತೆರೆಯೋಣ.

ಾರದ: ಅಗತ್ಯವೇ ಇಲ್ಲವಮ್ಮಾ. ಇಲ್ಲಿಯ ಪಾಕಶಾಲೆಯಲ್ಲಿ ಒಂದಿಷ್ಟೂ ಹೊಗೆಯಿಲ್ಲ. ಕೃಷ್ಣನಿಗೆ ಕಣ್ಣು ಮುಚ್ಚಿಕೊಳ್ಳುವ ಪ್ರಸಂಗವೇ ಬಂದಿಲ್ಲ. ಮೇಲಾಗಿ ಕಣ್ಣಲ್ಲಿ ಎಣ್ಣೆ ಹಾಕಿ ಅಡಿಗೆಯವರನ್ನು ಅಡಿಗಡಿಗೂ ನೋಡಿಕೊಳ್ಳುತ್ತಿರುವನು. ಮತ್ತೇಕೆ ಕಣ್ಣು ತೆರೆಯುವದು?

ಾಮೆ: ಸಾಕು ನಿಮ್ಮ ಹಾಳು ವಿನೋದ. ಮೊದಲು ಹೋಗಿ ಕೃಷ್ಣನನ್ನು ಕರೆದು ತನ್ನಿರಿ.

ಾರದ: ನಾನೇನು ನಿರುದ್ಯೋಗಿ ನೆಂಟನಲ್ಲ, ಕಂಡವರ ಉಸಾಬರಿಗೆ ಹೋಗಲಿಕ್ಕೆ! ಬಿಡುವಿಲ್ಲದ ಬಂಟನಾಗಿದ್ದೇನೆ. ನನಗೂ ಕೆಲಸ ಸಿಕ್ಕಿದೆ. ನಿಮ್ಮೆಲ್ಲರ ವ್ಯವಸ್ಥೆ..................

ಕ್ಮಿಣಿ: ನಮ್ಮ ಅವಸ್ಥೆ ಆಗಿಯೇ ಬಿಟ್ಟಿದೆ, ತಮ್ಮ ಕೃಷ್ಣ ಪರಮಾತ್ಮನ ಅನುಗ್ರಹದಿಂದ. ಆ ದೇವಕಿಯ ಕೂಸಿಗೆ ಕಿವಿಹಿಡಿದು ತಿಳಿಸಿರಿ, "ಇಂಥ ಮಾನಗೇಡಿಯಾದ ಕೆಲಸ ಮಾಡಬೇಡ! ರುಕ್ಮಿಣಿಯ ಕೊರಳಾಣೆಯಿದೆ" ಎಂತ.

ಾಮೆ: ಅಹುದು, ಮುನಿಗಳೇ, ಕೃಷ್ಣನನ್ನು ಹುಡುಕಿ ತನ್ನಿರಿ. ಆ ಅಡಿಗೆ ಭಟ್ಟರ ಹಿಂಡಿನಲ್ಲಿ ನಾವೆಲ್ಲಿ ಅಡ್ಡಾಡುವದೇ? ತಾವೊರ್ವರೇ ಹೋಗಿ ಬನ್ನಿರಿ. ಪಾಕಶಾಲೆಯಿಂದ ಆತನಿಗೆ ಮೊದಲು ಹೊರಗೆ ಬರಲು ಹೇಳಿರಿ. ಇಲ್ಲವಾದರೆ ಸತ್ಯಭಾಮೆಯು ಇಂದ್ರಪ್ರಸ್ಥ ಬಿಟ್ಟು ಹೊರಟು

ಹೋಗುವಳೆಂತ ಹೆದರಿಸಿರಿ. ಎಂದೆಂದಿಗೂ ಮಾತಾಡಲಿಕ್ಕಿಲ್ಲವೆಂತ ಹೇಳಿರಿ.

ನಾರದ: ಸೈ ! ಇದೊಳ್ಳೇ ಉಪದ್ವ್ಯಾಪದ ಉರುಲು ಬಿತ್ತು ಕೊರಳಿಗೆ!

ರುಕ್ಮಿಣಿ:, ಭಾಮೆ: ನಡೆಯಿರಿ. ವಿಲಂಬ ಮಾಡಬೇಡಿರಿ. ಇಷ್ಟೊಂದು ಕೆಲಸ ಮಾಡಿರಿ. ತಮಗೆ ಕೈಜೋಡಿಸುತ್ತೇವೆ.

ನಾರದ: (**ಹತಾಶೆಯಿಂದ**) ಹೂಂsss ! ಒಲ್ಲೆನೆಂದರೆ ತಪ್ಪುವದೇ! (**ಹೋಗುವರು.**)

ರುಕ್ಮಿಣಿ: ನೋಡಿದಿಯಾ ಭಾಮೆ ನಮ್ಮ ಯಜಮಾನರ ಬುದ್ಧಿ! ತಾವ್ಯಾರು ತಮ್ಮ ಗೌರವವೇನು? ಏನೊಂದು ತಿಳಿಯುವದಿಲ್ಲ.

ಭಾಮೆ: ತಡೆ. ಇದೆಲ್ಲ ಆ ದ್ರೌಪದಿಯ ಮಾಟ. ಅವಳೊಮ್ಮೆ ಬರಲಿ. ಸರಳ ಸ್ವಭಾವದವರು ಸಿಕ್ಕರೆ ಅವರನ್ನು ಹೇಗೂ ಬಳಸಿಕೊಳ್ಳಬಹುದು-ಯಾರಿರೂ ಕೇಳುವವರಿಲ್ಲವೆಂತ ಆ ಬಿನ್ನಾಣಗಿತ್ತಿ ತಿಳಿದಿರಿವಳೋ ಏನೋ! ( **ನಾರದರು ಗಾಬರಿಯಾಗಿ ಓಡಿ ಬರುವರು.**) ಏನು? ಓಡಿಬಂದಿರಿ?

ರುಕ್ಮಿಣಿ: ಏನು ನಾರದರೇ ! ನಮ್ಮ ಅರಸರು ಅಧಿಕಾರ ಸಿಕ್ಕಿತೆಂತ ಚರಗಿ ಹೊರುವ ಚಾಕರಿ-ಜಟ್ಟಿಗಳ ಕೈಯಿಂದ ಜುಟ್ಟು ಹಿಡಿದು ಅಟ್ಟಿಹಾಕಿಸಿದರೇ ಅಡಿಗೆಯ ಮನೆಯಿಂದ? ( **ಇಬ್ಬರೂ ನಗುವರು.**)

ನಾರದ: ಅಮ್ಮಾ! ತ್ವರೆಮಾಡಿರಿ. ಕೃಷ್ಣನು ಬೆರಳು ಕೊಯ್ದುಕೊಂಡಿದ್ದಾನೆ. ನೆತ್ತರ ಬಸಿಯುತ್ತಿದೆ, ಒಂದೇಸವನೆ...............

ರುಕ್ಮಿಣಿ: ( **ಗಾಬರಿಯಾಗಿ** ) ಅಯ್ಯೋ! ವಿಧಿಯೇ! ಗಾಯ ಹೇಗಾಯಿತು?

ಭಾಮೆ: ( **ಹಿರಿತನದ ಸಿಟ್ಟನಿಂದ** ) ನನಗೆ ಮೊದಲೇ ಗೊತ್ತು. ಸಲ್ಲದ ಕೆಲಸಕ್ಕೆ ಕೈಹಾಕಿದರೆ ಆಗುವ ಪಾಡೇ ಇದು! ಅಮ್ಮಾ ಈಗೇನು ಮಾಡುವದು?

ನಾರದ: ಮಾಡುವದೇನಿಲ್ಲ. ಒಂದು ಅರಿವೆಯ ಚಿಂದಿ ಬೇಕಾಗಿದೆ, ಗಾಯ ಕಟ್ಟಲಿಕ್ಕೆ. ನಿಮ್ಮಿಂದ ಒಂದು ಹಸನವಾದ ಜಿನುಗಾದ ಅರಿವೆಯ ತುಣಕನ್ನು ಬೇಡಿಕೊಂಡು ಬರಲು ಕೃಷ್ಣನು ನನಗೆ ಕಳುಹಿಸಿರುವನು. ನೀವೇ ಯಾರಾದರೂ ಹೋಗಿ ಗಾಯ ಕಟ್ಟಿ ಬಂದರೂ ಅಡ್ಡಿಯಿಲ್ಲ.

ರುಕ್ಮಿಣಿ: ಅಪಯ್ಯ ! ನಾನೊಲ್ಲೆ. ನನ್ನಿಂದ ನೆತ್ತರ ನೋಡಲಾಗುವದಿಲ್ಲ! ಮೈ ಜುಮ್ಮೆನ್ನುತ್ತದೆ. ( **ಮೈ ನಿಮಿರಿದಂತೆ ನಟಸುವಳು.**)

ನಾರದ: ಹೋಗುವದಿರಲಿ. ಚಿಂದಿಯನ್ನಾದರೂ ತನ್ನಿರಿ, ನಿಮ್ಮ ಮಂದಿರಕ್ಕೆ

ಹೋಗಿ. ಲಗು ತನ್ನಿರಿ. ಆತನೇ ಇತ್ತ ಬರುತ್ತಲಿದ್ದಾನೆ- ಗಾಯಗೊಂಡ ಹುಲಿಯು ಗವಿಗೆ ಬರುವಂತೆ!

ಭಾಮೆ: (ಗಾಬರಿಯಿಂದೆದ್ದು) ಅಯ್ಯೋ! ಅಲ್ಲಿಯೇ ತಡೆಯಲು ಏಕೆ ಹೇಳಲಿಲ್ಲ! ನೀವು ಮಹರ್ಷಿಗಳಂತೆ! ನಿಮಗೂ ತೋಚಲಿಲ್ಲವೇ? ಬರುವಾಗ ದಾರಿಯುದ್ದಕ್ಕೂ ನೆತ್ತರ ಸುರಿದು ಯಜ್ಞಮಂಡಲವು ಮೈಲಿಗೆಯಾಗುವದಿಲ್ಲವೇ? ಹೋಗಿರಿ, ಬರಬೇಡವೆಂತ ಹೇಳಿರಿ. ಎಲ್ಲ ಹುಡುಗಾಟಿಕೆಯೇ!

ನಾರದ: ಛೀ, ನಿಮ್ಮ ಬುದ್ಧಿ! ಅವನಿಗಲ್ಲಿ ಗಾಯದ ವೇದನೆ. ನಿಮಗಿಲ್ಲಿ ಮಡಿಮೈಲಿಗೆಯ ವೇದಾಂತ! ಲಗು ತನ್ನಿರಿ ಒಂದು ಅರಿವೆಯ ಚಿಂದಿಯನ್ನು.

ರುಕ್ಮಿಣಿ: ಏನು ಇನ್ನೂ ತಂದು ಕೊಡಲಿಲ್ಲವೇ ಭಾಮೆಯು! ಮತ್ತೇಕೆ ಲಗುಬಗೆಯಿಂದೆ ಎದ್ದಳು?

ಭಾಮೆ: ( ಸಿಡುಕಿನಿಂದ ) ಹೂಂ......ನಾನೆಲ್ಲಿಂದ ತಂದು ಕೊಡುವದು? ನನಗೆ ತರಲು ಹೇಳಿಲ್ಲ. ನೀವೇ ಕೊಡಬಾರದೇ?

ನಾರದ: ಯಾರೇ ಆಗಲಮ್ಮಾ! ಲಗು ಒಗೆಯಿರಿ ಎಲ್ಲಿಂದಾದರೂ ತಂದು ಒಂದು ಚಿಂದಿಯನ್ನು !

ರುಕ್ಮಿಣಿ: ( ತಿರಸ್ಕಾರದಿಂದ ) ಚಿಂದಿಯಂತೆ ಚಿಂದಿ! ಚಿಂದಿಗಳನ್ನು ಕಟ್ಟಿಕೊಂಡು ಬರಲು ನಾವೇನು ಬಡ ಹೆಂಗಸರೇ?

ಭಾಮೆ: ಅಹುದಕ್ಕಾ. ಎಲ್ಲಿಂದ ಬರಬೇಕು ಚಿಂದಿ? ನನ್ನ ಬಟ್ಟೆಗಳೆಲ್ಲ ಜರತಾರಿಯವು. ನಮ್ಮ ಬಳಿಗಿರುವವೆಲ್ಲ ದೊಡ್ಡ ಅರಿವೆಗಳೇ-ಬೆಲೆಯುಳ್ಳ ಬಟ್ಟೆಗಳೇ, ಚಿಂದಿಯನ್ನೆಲ್ಲಿಂದ ತರಬೇಕು? ಹೋಗಿ ನೋಡಿರಿ. ನನ್ನ ಮಂದಿರದಲ್ಲಿ, ತಮಗೆ ನಂಬಿಗೆಯಿಲ್ಲವಾದರೆ! ಎಲ್ಲ ಸೀರೆ ಬಟ್ಟೆಗಳ ಪೆಟ್ಟಿಗೆಗಳನ್ನು ತೆರೆದು ತಿರುವಿ ಹಾಕಿ ನೋಡಿರಿ. ಈ ಸೀರೆಯಂತೂ ನನ್ನ ಕೃಷ್ಣನು ಮೊನ್ನೆ ನನ್ನ ಹುಟ್ಟುಹಬ್ಬಕ್ಕಾಗಿ ಕೊಟ್ಟ ಉಡುಗರೆಯು! ಇದನ್ನು ಕತ್ತರಿಸುವದು ಸರಿಯೇ. ತಾವೇ ಹೇಳಿರಿ ನಾರದರೆ ಕೃಷ್ಣನ ಮನಸ್ಸು ನೋಯಲಿಕ್ಕಿಲ್ಲವೇ? ಪತಿಯ ಪ್ರೀತಿಯ ಒಪ್ಪುಗಾಣಿಕೆಯನ್ನು ಅಂದಗೆಡಿಸುವದೇ? ಅಯ್ಯೋ ! ನಾನೊಲ್ಲೆ !

ನಾರದ: ಧನ್ಯ ನಿಮ್ಮ ಪತಿಪ್ರೀತಿ! ಈಗ ಚಿಂದಿಯನ್ನು ಬೇಡುವದು ನಿಮ್ಮ ಆ ಪ್ರೀತಿಯ ಪತಿಯ ಸಲುವಾಗಿಯೆ! ಲಗು ಕೊಡಿರಿ.

ರುಕ್ಮಿಣಿ: ಇವರಿಗೇನನ್ನಬೇಕೆ! ಕೊಡಿಕೊಡಿರೆಂತ ಕೊಡಲಿಯೆತ್ತಿ ಕೇಳುವಂತೆ

ಕಾಡುತ್ತಿರುವರು. ಅಲ್ಲ ಮುನಿಗಳೇ ತುಸು ವಿಚಾರ ಮಾಡಿರಿ. ಎಲ್ಲಿಂದ ತರಬೇಕು ಅರಿವೆಯ ಚಿಂದಿ? ಮೊದಲೇ ಗೊತ್ತಿದ್ದರೆ ದ್ವಾರಕೆಯಿಂದಲೇ ತರಬಹುದಾಗಿತ್ತು ಒಂದು ಚಿಂದೆ ತಯಾರಿಸಿ! ಕೃಷ್ಣನ ಕೆಲಸವೇ ಹೀಗೆ– ಇಲ್ಲದ ವೇಳೆಗೆ ಅಲ್ಲದ ವ್ಯಾಪ್ತಿ ತಂದೊಡ್ಡುವದು! ಅಯ್ಯೋ! ಏನು ಮಾಡಲಿ? ಅವನ ಕೈಗೆ ಬಹಳ ನೋವಾಗಿದೆಯೇ! ನನ್ನ ಎದೆ ಬಹಳ ಕಳವಳಗೊಳ್ಳುತ್ತಲಿದೆ ಏನು ಮಾಡಲಿ? ತಂದ ವಸ್ತುಗಳೆಲ್ಲ ಭಾರೀ ಶಾಲುಗಳು. ಗಾಯವು ದೊಡ್ಡವಿರಲಿಕ್ಕಿಲ್ಲವಷ್ಟೇ ! ಭಾಮೆ, ಸುಮ್ಮನೆ ನಿಂತಿರುವಿಯೇಕೆ? ನಾನು ಗಾಬರಿಯಿಂದ ನರಗುಂದಿ ಬಿಟ್ಟಿದ್ದೇನೆ. ನೀನು ಹೋಗಿ ತರಬಾರದೇ ಒಂದು ಚಿಂದಿ!

ಭಾಮೆ: (ಸಿಟ್ಟಿನಿಂದ) ಸೈ ! ಸೈ ! ನಾನೇಕೆ ಹುಡುಕಲಿ? ನೀನೇಕೆ ಹೋಗಬಾರದು? ಪಟ್ಟದರಸಿ ಅರಿವೆಯ ಪಟ್ಟಿಯನ್ನ ತರ ಬಾರದೆಂತ ಕಟ್ಟೇ? ಅಹುದೇ ಮುನಿಗಳೇ?

ನಾರದ: ನಾರಾಯಣ ! ನಾರಾಯಣ ! ನಿಮ್ಮ ಬುದ್ಧಿ ಹೊಗಳಿದಷ್ಟೂ ಕಡಿಮೆ; ಅಮ್ಮಾ ಹೊಗಳಿದಷ್ಟೂ ಕಡಿಮೆ!

ರುಕ್ಮಿಣಿ: ಅಣಕಿಸುವಿರಾ? ತಮಗೆ ತೋರುವದಿಲ್ಲವೇ ನಮ್ಮ ತೊಡಕು? ಕೈಕಟ್ಟಿ ನಿಂತು ಮೂದಲಿಸಲು ಏನು ತಮಗೆ? ನಮ್ಮ ಕೃಷ್ಣನು ಅಲ್ಲಿ ನೋವಿನಿಂದ ಅದೆಷ್ಟು ಕಸಿವಿಸಿಗೊಂಡಿರುವನೋ! ಒಂದು ಚಿಂದಿಯನ್ನಾರಸಿ ತರುವ ಕೆಲಸವೂ ಆಗುವದಿಲ್ಲವೇ? ಓರ್ವ ದಾಸಿಯನ್ನಾದರೂ ಹುಡುಕಿ ತರಬಾರದೇ! ಅವಳಿಂದ ಅರಿವೆಯ ಚಿಂದಿಯ ಶೋಧ ನಡೆಯಿಸುವಾ!

ನಾರದ: ಅಬ್ಬ! ಉತ್ತಮ ವಿಚಾರವಿದು. ನಡೆಯಿರಿ ನೀವಿಬ್ಬರೂ ಅಲ್ಲಿಗೆ. ಅದುವರೆಗೆ ನಾನು ದಾಸಿಯನ್ನು ತರುತ್ತೇನೆ.

ಭಾಮೆ: ಛೀsss! ನನ್ನಿಂದಾಗದಮ್ಮಾ ! ಅಡಿಗೆಯಮನೆಯ ಹೊಲಸು ಕಂಡರೆ-ಅಡಿಗೆಯವರ ಬೆವೆತ ಬರಿ ಮೈಗಳನ್ನು ಕಂಡರೆ ತಲೆಶೂಲಿಯೇಳುವದು ನನಗೆ! ನಮ್ಮ ಕೃಷ್ಣನ ಕಪಟ ನೋಡಿರಿ. ನೂರಾರು ಬಾರಿ ಯುದ್ಧಗಳನ್ನು ಗೆದ್ದುಬಂದರೂ ಒಂದು ಗಾಯ ಮಾಡಿಕೊಳ್ಳದವನು ಇಂದು ಅಡಿಗೆಯ ಮನೆಯಲ್ಲಿ ಕೈಕೊರೆದು ಕೊಳ್ಳಬೇಕೇ?

ನಾರದ: ಇದು ಸರಿ! ಚಿಂದಿ ಸಿಗುವದಿಲ್ಲ. ಗಾಯ ಮಾಡಿಕೊಳ್ಳುವ ಮೊದಲು ತಿಳಿಸಬೇಕಾಗಿತ್ತು. ಅವನೇ ಇಲ್ಲಿ ಬರುವದು ಯೋಗ್ಯವಲ್ಲ. ನೀವು ಅವನೆಡೆಗೆ ಹೋಗುವದು ಸಾಧ್ಯವಿಲ್ಲ. ನಾರಾಯಣ ! ನಾರಾಯಣ! (ದ್ರೌಪದಿಯು ಸಿಂಗಾರಾಗಿ ಬರುವಳು)

ದ್ರೌಪದಿ: ಏನು? ನಾರದರೇ ಏನು ವಾದ ನಡೆದದೆ?

ದ: ಏನಿಲ್ಲ. ನಮ್ಮ ಕೃಷ್ಣನು ಬೆರಳು ಕೊಯ್ದುಕೊಂಡಿದ್ದಾನೆ.

ಪದಿ: ಅಯ್ಯೋ! ಎಲ್ಲಿ? ಆತನೆಲ್ಲಿರುವನು?

ದ: ಅಲ್ಲಿ ಪಾಕಶಾಲೆಯಲ್ಲಿ! ಇತ್ತ ಬರುತ್ತಿರುವನು!

ಪದಿ: ಬೇಡ ನಾನೇ ಬಂದೆನು ಅಲ್ಲಿಗೆ. ದೇವಿಯರೇ ಇದೇನು ನೀವು ಹೀಗೆ ಹರಟುತ್ತ ಹೊತ್ತು ಹಾಳು ಮಾಡುವಿರಿ? ವೇಳೆಯ ಬೆಲೆಯರಿಯದಷ್ಟು ಅವಿವೇಕಿಗಳೇ ನೀವು?

ಣಿ: ಅಲ್ಲ ದ್ರೌಪದಿ, ಇವರಿಗೊಂದು ಅರಿವೆಯ ಚಿಂದಿಯು ಬೇಕಾಗಿದೆಯಂತೆ!

ಃ: ಅಹುದವ್ವಾ! ಎಲ್ಲಿಂದ ತರಬೇಕು ಚಿಂದಿ? ಮೊದಲೇ ತಿಳಿದಿದ್ದರೆ?............

ಪದಿ: ಎಂಥ ತಿಳುವಳಿಕೆಯೇ ನಿನ್ನದು? ಅಪಘಾತಗಳೆಲ್ಲ ತಿಳಿಸಿ ಒದಗುವವೇ ? ಚಿಂದಿ ಬೇಕಲ್ಲವೇ ನಾರದರೆ ?

**(ಅಷ್ಟರಲ್ಲಿ ಗಾಯಗೊಂಡ ಎಡಗೈಯ ತರ್ಜನಿಯನ್ನು ಎತ್ತಿ ಹಿಡಕೊಂಡು ಕೃಷ್ಣನು ಮೆಲ್ಲಗೆ ಬರುವನು )**

ಅಬ್ಬ! ನಾರದರೇ ಸಿಗಲಿಲ್ಲವೇ ಅರಿವೆಯ ಚಿಂದಿ! ನೆತ್ತರ ಹರಿದು ಮೈ ಕೈ ನಿತ್ರಾಣವಾಗಿ ಬಿಟ್ಟಿದ.

ಪದಿ: **( ಆತನ ಬಳಿಗೆ ಧಾವಿಸಿ ಗಾಯಗೊಂಡ ಕೈಯನ್ನು ತನ್ನ ಕೈಯಲ್ಲಿ ತೆಗೆದುಕೊಂಡು ಕಕುಲಾತಿಯಿಂದ )** ಅಯ್ಯೋ! ಕೃಷ್ಣಾ! ಎಷ್ಟು ದೊಡ್ಡ ಗಾಯ ಮಾಡಿಕೊಂಡಿಯೋ! ತಡೆ. ಚಿಂದಿ ಕಟ್ಟಬೇಕಲ್ಲವೇ?

**( ತನ್ನ ಜರತಾರಿಯ ಸೆರಗನ್ನು ಜರ್‌ಜರ್‌ನೆ ಹರಿದು ಒಂದು ಪಟ್ಟಿಯನ್ನು ತೆಗೆಯುವಳು. ಆಗಲೇ ದಾಸಿ ಕುಂದೆಯು ಬರುವಳು)**

ಾ: ಮಹಾರಾಣಿಯವರೇ! ಇನ್ನೂ ವಿಲಂಬವೇ? ನಡೆಯಿರಿ. ಸುಯೋಧನ ದುಃಶಾಸನ ಮೊದಲಾದವರೆಲ್ಲ ತೀರ ಕ್ಷೋಭೆಗೊಂಡಿದ್ದಾರೆ. ಸತ್ಕಾರ ಸಮಾರಂಭಕ್ಕೆಂತ ಕರೆದು ತಾವು ಬರದೇ ಅವರನ್ನು ಅಪಮಾನಗೊಳಿಸ ಲಿರುವಿರೆಂತ ಆಡಿಕೊಳ್ಳುತ್ತಿರುವರು. ನಡೆಯಿರಮ್ಮಾ..........

ದಿ: **( ನಿಧಾನರಾಗಿ ಕೃಷ್ಣನ ಬೆರಳಿಗೆ ಪಟ್ಟಿ ಕಟ್ಟುತ್ತ )** ಅಪಮಾನವಾಗಿದ್ದರೆ ಆಗಲಿ ಕುಂದೇ. ಪ್ರಲಯವಾದರೂ ನಾನೇನು ಇಲ್ಲಿಂದ ಕದಲುವಂತಿಲ್ಲ. ಬರಲು ಇನ್ನೂ ಕೆಲಕಾಲ ವಿಲಂಬವಿದೆ. ಇಲ್ಲಿ ಅತ್ಯಂತ ಮಹತ್ವದ ಕಾರ್ಯವಿದೆ. ನನ್ನ ಕೃಷ್ಣನ ಕೈಗೆ ಗಾಯವಾಗಿದೆ. ಅದಕ್ಕೆ ಪಟ್ಟಿ ಕಟ್ಟುವದಿದೆ.

ಈಗಲೇ ಬರಲಾಗುವದಿಲ್ಲವೆಂತ ಯುಧಿಷ್ಠರ ಮಹಾರಾಜರಿಗೆ ತಿ
ನಡೆ! ( **ಪಟ್ಟ ಸುತ್ತುವಳು**)

ಕೃಷ್ಣ: ( **ಆಕೆಯ ಕೈತಡೆದು** ) ಕೃಷ್ಣೇ! ನೀನು ಹೋಗು. ಇಲ್ಲವಾದರೆ ಘ
ಅನರ್ಥವಾದೀತು! ಕೌರವರು ನಿಮ್ಮ ಸೇಡು ತೀರಿಸಿಕೊ
ಏನಾದರೊಂದು ನಿಮಿತ್ತವನ್ನು ಹುಡುಕುತ್ತಲಿದ್ದಾರೆ.

ದ್ರೌಪದಿ: ( **ನಿಶ್ಚಯದಿಂದ** ) ಸೇಡು ತೀರಿಸಿಕೊಳ್ಳಲಿ. ನನಗೇಕೆ ಅದರ ಪ
ನನ್ನ ನಂಬಿಗೆಯಂತೆ ನಾನು ನಡೆಯುವೆನು. ನೀನಿರುವಿಯಲ್ಲವೇ
ನೆರವಿಗೆ ನಿರಂತರವಾಗಿ, ನನಗ್ಯಾರ ಭಯವಿದೆ? ವಿಶ್ವವೇ ವೈರಿಯ
ನಿಂತು ವಿಷಕಾರಿದರೂ ಅದರ ಕಿಚ್ಚಿನಲ್ಲಿ ಕುರುಳು ಕೂಡ ಕೊಂಕ
ನೋಡಿಕೊಳ್ಳಲು ಈ ಕೈ ಇರುವದಲ್ಲವೇ ನನ್ನ ಕಾವಲಿಗೆ? ( **ಗ**
**ಕಟ್ಟ ಮುಗಿದ ಮೇಲೆ ಆತನ ಕೈಬೆರಳನ್ನು ತನ್ನ ಕಣ್ಣುಗಳಿಗೆ ಹಚ್ಚಿ ಮುದ್ದಿಸು**

ಕೃಷ್ಣ: ಅಹುದು ದ್ರೌಪದಿ! ನಿನ್ನ ಋಣಾನುಬಂಧವು ವಜ್ರಬಂಧದಿಂದ ನ
ನಿನ್ನವನನ್ನಾಗಿ ಮಾಡಿದೆ! ನೀನು ಕಟ್ಟಿದ್ದು ಬರೇ ಚಿಂದಿಯಿಂದ ಬೆರ
ಗೋವರ್ಧನವನ್ನ ಎತ್ತಿಹಿಡಿದ ಕೈಯ ಬೆರಳಿದು. ಸಾಮ್ರಾಜ್ಯದ ಕ
ಭಾವನೆಯನ್ನೇ ಹತ್ತಿಕ್ಕಿಕೊಂಡು ಕಟ್ಟಿದ ಚಿಂದಿಯಿದು. ಚರಾಚರದ
ಶಕ್ತಿಯನ್ನೇ ನೀನು ಅಂತಃಕರಣದ ಪ್ರೇಮತಂತುಗಳಿಂದ ಅ
ಬಂಧನದಲ್ಲಿ ಚಿರವಾಗಿ ಸ್ಥಿರವಾಗಿ ಕಟ್ಟಿ ನಿನ್ನ ಶೀಲ ತತ್
ಸಂರಕ್ಷಣೆಗಾಗಿ ಹೂಡಿಕೊಂಡಿರುವಿ! ನಿನ್ನ ಮೇಲೆ, ನಿನ್ನವರ ಮ
ಶತ್ರುಗಳ ಸೇಡಿನ ಪ್ರಲಯಾಗ್ನಿಯು ಸಿಡಿಲಿನ ತೆರೆಗಳೊ
ಎಲ್ಲೆಡೆಗಳಿಂದಲೂ ಸಾಗಿಬಂದರೂ, ಆ ಅಗ್ನಿ ಸಮುದ್ರವ
ಸಾಗರಬಿದ್ದು-ಅಡ್ಡತಡೆದು ಅಕ್ಷಯ ಅಭಯವನ್ನೀಯಲು ನಿನ್ನ ಬ
ನಿಲ್ಲಲಿಕ್ಕೆ ಈ ನನ್ನ ಉಪಕೃತ ಬಾಹುವು ಯುಗಯುಗದಲ್ಲಿ
ಸಿದ್ಧವಿದೆ!

ದ್ರೌಪದಿ: ( **ಕೃತಜ್ಞತೆಯಿಂದ ನಕ್ಕು** ) ನಾನೇನು ಮಾಡಿರುವೆನು ಅಂತಹ ಶತ
ಗಾಯಕ್ಕೆ ಅರಿವೆ ಕಟ್ಟುವದು ಯಾರಿಗೂ ತಿಳಿಯುವ ಸಂಗತಿಯು.

ಕೃಷ್ಣ: ಅಹುದು. ಆದರೆ ನಮ್ಮ ಈ ಯದುಕುಲದ ಅರಸಿಯರು ಇ
ತಿಳಿಯಬೇಕಾದ ಸಂಗತಿಯಿದು. ಸೀರೆಯೆಂದರೆ ಅರಿವೆಯೆಂ
ಇವರಿನ್ನೂ ಅರಿಯರು! ನಾರದರೇ ತೆಗೆದುಕೊಳ್ಳಿ. ನಿಮ್ಮ ಒಲುವ
ಒಗಟಿನ ಉತ್ತರ! ನನ್ನ ರಾಣಿಯರೇ, ಬಿಚ್ಚಿ ಹೇಳಿವೆ
ಮುನಿಯಬೇಡಿರಿ. ಪ್ರೀತಿ ಮಾಡುವವರಲ್ಲಿ ಏಕಾಗ್ರತೆಗಿಂತ
ಮಾಡುವೆವೆಂಬ ಅಟ್ಟಹಾಸವೇ ನಿಮ್ಮಲ್ಲಿ ಹೆಚ್ಚು ! ನನಗ

ನನ್ನವಳಾಗಿರುವನೆಂಬ ಭಾವನೆಯೇ ನಿಮಗೆ ಹೆಚ್ಚು ಹುಚ್ಚಿಯರನ್ನಾಗಿ ಮಾಡಿದೆ! ತನ್ನನ್ನೇ ಮರೆತು ಇನ್ನೊಬ್ಬರಲ್ಲಿ ಬೆರೆತು ಇನಿಯನೊಂದಿಗೆ ಇನಿದಾಗಿ ಬೆಸೆದು ಎಸೆಯುವದು ಪ್ರೀತಿಯ ಬಗೆಯು. ಆದರೆ ತನ್ನನ್ನೇ ಮೆರೆಯಿಸಿಕೊಳ್ಳುವ ಇನ್ನೊಬ್ಬರನ್ನು ತನ್ನಂಕೆಗೆ ಮಣಿಸಿ ದಣಿಸಿಕೊಳ್ಳುವ ಬಿಂಕವು ನಿಮ್ಮದು! ಒಲುಮೆಯು ಒಂದು ಒಡಪಲ್ಲ. ಒಡೆತನದ ಒಡವೆಯಲ್ಲ. ಅದು ತಿರುಕರ ಅಂಗಳದಲ್ಲಿ ಕೂಡ ಸಿರಿಗುಣಿತದ ರಿಂಗಣ ಹಾಕಿ ರಮಿಸಬಹುದು. ಅರಮನೆಯ ಅಂದಣದ ನೆರಳಿಗೆ ಸಹ ನಿಲ್ಲದೇ ಓಡಬಹುದು. ನನ್ನನ್ನು ಲಭಿಸಿಕೊಳ್ಳುವ ಹವ್ಯಾಸದಲ್ಲಿ, ನನ್ನಲ್ಲಿ ಲೀನವಾಗುವ ಅಭ್ಯಾಸವೇ ನಿಮ್ಮದು ತಪ್ಪಿಹೋಗಿದೆ! ಪ್ರೀತಿಯು ಹಾಗಲ್ಲ. ಅದಕ್ಕೆ ಪ್ರತಿಫಲದ ಆಶೆಯಿಲ್ಲ. ಸುಗ್ಗಿಯ ಹಿಗ್ಗಿನಲ್ಲಿ ತನ್ನಾರೆ ಬಗ್ಗಿಸುವ ಕೋಗಿಲೆಯಂತೆ ಅದು ತನ್ನಲ್ಲಿಯೇ ತಲ್ಲೀನವಾಗಿ ತೃಪ್ತಿಹೊಂದುವದು! ದ್ವೇಷ ತ್ವೇಷಗಳ ಕಲೆ ಕಿಲ್ಮಿಷಗಳ ಕಾವಳವು ಅದನ್ನು ಕವಿಯದು. ಅಲ್ಲ, ಭಾಮೆ ನಿನಗೆ ನನಗಿಂತ ನಾನು ಕೊಟ್ಟ ಕಾಣಿಕೆಯು ಮಿಗಿಲೆನಿಸಿತಲ್ಲವೆ?

ದ: ಈಗಲಾದರೂ ಮನವರಿಕೆಯಾಯಿತಲ್ಲವೇ, ನಿಮ್ಮ ತಪ್ಪು ಯಾವದೆಂತ?

ಮೆ: ಕೃಷ್ಣಾ ನಾನು ಮಂದಮತಿಯು. ಮಂಕುತನದಲ್ಲೆ ನಡೆಯುತ್ತ ಬಂದೆನು. ನನ್ನದು ಅನನ್ಯ ಅಪರಾಧವಾಯಿತು. ಕ್ಷಮಿಸು ವಿಯಲ್ಲವೇ?

ಣಿ: ನನ್ನದೂ ಹಾಗೆಯೇ, ಕೃಷ್ಣಾ ! ಮತ್ಸರಕ್ಕೆ ತುತ್ತಾಗಿ ಭಾಮೆಯನ್ನು ತಾತ್ಸಾರದಿಂದ ಕಾಣುತ್ತ ಬಂದೆನು. ನಾನು ಮೂಢೆ. ನನ್ನ ತಪ್ಪು ಒಡಲಲ್ಲಿ ಹಾಕಬಾರದೇ ( **ಇಬ್ಬರೂ ಕೃಷ್ಣನಿಗೆರಗಲು ಬಾಗುವರು. ಅವರನ್ನು ತಡೆಹಿಡಿದು ಎತ್ತಿ ಕೃಷ್ಣನು ನಸು ನಗುವನು.**)

## ೩

## ಡಾ|| ಗೌರೀಶ ಕಾಯ್ಕಿಣಿಯವರ ಅಪ್ರಕಟಿತ ರೂಪಕ ಮತ್ತು ನಾಟಕಗಳು

# ನರಕ ಚತುರ್ದಶಿ

(ಗೀತ ರೂಪಕ)

## ಪಾತ್ರಗಳು

| | | |
|---|---|---|
| ಕೃಷ್ಣ | ಭಾಮೆ | ಮೇಳ |
| ನರಕ | ಭೂಮಾತೆ | ಅಷ್ಟನಾಯಿಕೆಯರು |
| ಮುರ | ಅದಿತಿ | ರಮಣಿಯರು |
| ಗರುಡ | | ಗಂಡು-ಹೆಣ್ಣು ಸಮ್ಮಿಶ್ರ ದನಿ |
| ಇಂದ್ರ | | |

# ನರಕ ಚತುರ್ದಶಿ

ೀಳದ ಹಾಡು: ಹಿಮಗಿರಿ ಕಂದರ ಪ್ರದೇಶ
ಘನದುರ್ಗಮ ಪ್ರಾಗ್‌ಜ್ಯೋತಿಷ್ಯ
ಗಿರಿ-ಜಲ-ಅನಿಲಾನಿಲ-
ಶಸ್ತಾಸ್ತ್ರ ಪ್ರಾಕಾರಗಳ
ಕೋಟೆ, ಅಕೋ! ಏಳು ಸುತ್ತು
ಹುತ್ತದೊಳಗೆ ಹುತ್ತವಿತ್ತು!

ಅಲ್ಲ ಭೂಮಿ ಪುತ್ರ ಭೌಮ
ದೈತ್ಯಕುಲಕೆ ಸಾರ್ವಭೌಮ
ನಿರಂಕುಶ ಬಲದ ಒಡೆಯ
ಹಿಂಸ್ರ ಪಶುವಿಗಿಂತ ಕಡೆಯ
ಭೂರಕ್ಕಸನ ದಬ್ಬಾಳಿಕೆ-
ನಿರ್ಮಿಸಿತ್ತು ನರಕ
ಕಳೆದುದು ಲೋಕದ ತಾಳಿಕೆ
ಲೋಭ-ಮೋಹದೆರಕ-
ಮುರನು ಅವನ ಸೇನಾಪತಿ

ುರ(ಗರ್ಜಿಸಿ): ಮುತ್ತಿಗೆದ್ದವಮರಾವತಿ
ಅಟ್ಟಹಾಸ) ದೇವತೆಗಳ ಶರಣಾಗತಿ
ಮಾಡಿರೆಲ್ಲ ನಮೋಸ್ತುತಿ!

ೀಳ: ಬಳಲಿ ದೇವಮಾತೆ ಅದಿತಿ
ಅಳುವಿಗಿಲ್ಲ ಇತಿಮಿತಿ-

ಅದಿತಿ: ಅಯ್ಯೋ! ಏನು ಉಪಹತಿ!
ನಾರಕ ಹಾ! ನರಕದ ಗತಿ!

ಓಽ ನನ್ನ ಕರ್ಣಕುಂಡಲ
ಕಿತ್ತನು ಹಾಯ್ ಚಾಂಡಾಲ!
**(ಚಾಂಡಾಲ! ಹಃ ಹಃ ಚಾಂಡಾಲ! ಹಃ ಹಃ ಹಃ)**

ೀಳ : ದೇವೇಂದ್ರನ ಆಕ್ರೋಶ-
'ಹೋಯ್ತು ನನ್ನ ಕಲ್ಪವಕ್ಷ
ಎಲ್ಲಿ ನನ್ನ ಕಾಮಧೇನು?'

| | |
|---|---|
| **ಮೇಳ:** | ನರಕಾಸುರನಟ್ಟಹಾಸ! |
| **ನರಕ :** | ನನ್ನ ಕಾಮಕೆಲ್ಲಾ ವಶ! ಹಃ ಹಃ ಹಃ!<br>ವೀರಪುಂಗವನೇ ನಾನು ಹಃ ಹಃ !<br>ನಿನ್ನ ಶಚಿಯು ನನ್ನ ಧೇನು! ಹಃ ಹಃ ಹಃ! |
| **(ಗರ್ಜಿಸಿ)** | ಯಾರಲಿ ನನ್ನುನ್ನು ತಡೆಯುವ ತ್ರಾಣ?<br>ಯಾರದು ನನ್ನೊಡೆತನಕಾವ್ಹಾನ?<br>ಸುರ-ನರ ಸುಂದರ ರಮಣಿಯರೆಲ್ಲ<br>ನನ್ನಂತಃಪುರದರಗಿಣಿಯರು!<br>ಯಾರಿಹ? ಎಲ್ಲಿಹ? - ನನಗಿದಿರಾಳಿ<br>ಮಣ್ಣು ಮುಕ್ಕಿಸುವೆ-ಮಾಡಲಿ ದಾಳಿ! ಹಃ ಹಃ ಹಃ! |
| **ಮೇಳ :** | ದೇವದೂತನು ಬಂದು ದ್ವಾರಕೆಯೊಳಂದು<br>ಶ್ರೀ ಕೃಷ್ಣನಲ್ಲಿ ಮೊರೆಯಿಡಲು ಶರಣೆಂದು, |
| **ಕೃಷ್ಣ :** | ದೂತಾ!<br>ಇಂದ್ರಾದಿ ದೇವತೆಗಳೆಲ್ಲರಿಗೆ ಅಭಯ!<br>ನರಕಾಸುರನವಧೆಯು ಈ ಹರಿಯ ವಿಜಯ!<br>ನೆತ್ತಿಗೇರಿದ ಕಣ್ಣುಕುರುಡು ದಬ್ಬಾಳಿಕೆ<br>ಪೊಳ್ಳು ಬಿಂಕದ ಮುರ ಮೇಲೆ ಮಾಡಲ್ಕೆ<br>ಇಳಿಸುವನು ಅಳಿಸುವನು ಬಳಿರೆ ಭೂಭಾರ<br>ಲೋಕ ಕಲ್ಯಾಣಕ್ಕೆ ನನ್ನ ಅವತಾರ!<br>ನೀ ಹೊರಡು; ಓ ಗರುಡ,... |
| **ಗರುಡ:** | ಬಂದೆ ಜೀಯ ! |
| **ಕೃಷ್ಣ :** | ಭಾಮೆ! ಎಲ್ಲಿದೆ ಪಾಂಚಜನ್ಯ? ಸುದರ್ಶನಾ? |
| **ಭಾಮೆ:** | ತಂದೆನಿದೋ ನಾಥ, ಇನ್ನೆಂದು ದರುಶನಾ? |
| **ಕೃಷ್ಣ:** | **(ಮಮತೆಯಿಂದ ನಗುತಾ)**<br>ನೀನೂ ಬರುವೆಯಂತೆ! ಓ ಮುದ್ದು ಕಾಂತೆ |
| **ಭಾಮೆ :** | ಅಹುದೇ ? ಪ್ರಿಯತಮಾ, ನಾ ಭಾಗ್ಯವಂತೆ. |
| **ಕೃಷ್ಣ :** | ಎದೆಯ ಕೌಸ್ತುಭ! ಕೊರಳ ವೈಜಯಂತಿ! |
| **ಭಾಮೆ:** | ಅಂತೆಯೇ ನಾ ನಿನ್ನ ಬಾಳ ಸಂಗಾತಿ! |

ಕೃಷ್ಣ: (ಗಂಭೀರನಾಗಿ) ಪ್ರಿಯೇ-
ಹದಿನಾರು ಸಾವಿರ ಹೆಣ್ಣ ಕಣ್ಣೊರಿಸಬೇಕು!

ಭಾಮೆ: ತಾಯ ಸೆರೆ ಬಿಡಿಸಿದಗೆ ಹರಿಬವಿದೆ ಬೇಕು!

ಕೃಷ್ಣ : ಗರುಡನೂ ನನ್ನಂತೆ ತಾಯ ಬಿಡುಗಡೆಯ ಕಲಿ!

ಗರುಡ: ನಿಮ್ಮಿಬ್ಬರನು ಹೊರಲು ನಾನೇ ಮಹಾಬಲಿ!

ಮೇಳ: ಗರುಡ ವಾಹನ ಕೃಷ್ಣ ಭಾಮೆಯರ ಜೋಡಿ
ಪ್ರಾಗ್‌ಜ್ಯೋತಿಷ್ಯದ ಚಂದ ದುರ್ಗವನು ನೋಡಿ
ಬೆರಗಾದರೂ ಬೆದರಲಿಲ್ಲ ಇನಿಸೂ
ಹರಿನಾಮಕ್ಕಿದಿರಹುದೆ ಕೆಟ್ಟ ಕನಸು?
ಗಿರಿದುರ್ಗ ಪುಡಿಗೈದ ಹರಿಯು ಗದೆಯಿಂದ
ಶಸ್ತ್ರ ದುರ್ಗವ ಕಡಿಯೆ ಬಾಣಗಳ ತಂಡ
ಚಕ್ರದಿಂದಗ್ನಿ ಜಲ ವಾಯುವಲಯ-
ಪ್ರಾಕಾರ ಕೆಡುಹಿದನು ಗೈದು ವಿಲಯ
ಕೊಳಲನೂದಿದ ತುಟಿಯು ಪಾಂಚಜನ್ಯ
ಮೊಳಗಿದಬ್ಬರಕೆ ಗಿರಿ-ದರಿ-ಅರಣ್ಯ
ದಶದಿಕ್ಕು ತಲ್ಲಣಿಸಿ ದೈತ್ಯರೆದೆಝಲ್ಲೆನಿಸಿ
ಎದ್ದನೋ ಮುರರಕ್ಕಸಽ
ಸಿಡಿದುರಿದು ಕಡುರಕ್ಕಸಽ.

ಭಾಮೆ: ನಾಥಾ ! ಬಂದನಗೋ ಮುರ ದೈತ್ಯ!

ಕೃಷ್ಣ : ಹೆದರದೆ ಪ್ರಿಯೆ ಕೊಡು ಗದೆಯನ್ನಿತ್ತ

ಮುರ: ಓ ಕುಲಘಾತಕಿ- ಮಾವನ ಕೊಂದವ
ಸುಮ್ಮನೆ ಇಲ್ಲಿ ಸಾಯಲು ಬಂದವ!

ಕೃಷ್ಣ : ಓ ನರಕದ ನಾಯಿ!
ಸಾಯಿ! ಸಾಯಿ! ಸಾಯಿ!

ಮೇಳ: ಮುರನ ಪಂಚಶಿರಗಳ
ತರಿಯೆ ಹರಿಯ ಶರಗಳು
ಅವನ ಏಳು ಮಕ್ಕಳನ್ನು
ಯುದ್ಧಕಟ್ಟೆ ಭೌಮನು
ಕೃಷ್ಣ ಕೋಪ ಜ್ವಾಲೆಗೆ
ಹುತರು-ಹತರು ಹಲುಬಗೆ

ಕೇಳುತಲೂ ಸಮಾಚಾರ
ಕೆರಳಿದ ಕಪಿ ನರಕಾಸುರ!

ನರಕ : ಯಾವನು ಈ ಪುಂಡ ಪೋರ?
ಏನೀತನ ಹಾವಳಿ?
ಕಿವಿಗೆ ಗಾಳಿ ತುಂಬಿ ಕುಣಿವ
ಸೂಳಿಬಿಟ್ಟ ಗೂಳಿ!
ಎಲ್ಲಿದೆ ಗದೆ? ಎಲ್ಲಿದೆ ಗಜ ? ಎಲ್ಲಿ ನನ್ನ ಶಕ್ತಿ?
ಇಂದೆ ಇಲ್ಲೆ ಗೊಲ್ಲಕರುವೆ ನಿನಗೆ ಈಗ ಮುಕ್ತಿ!

ಭಾಮೆ : ಬಂದನದೊ ಪ್ರಿಯ ಕೃಷ್ಣಾ ನರಕಾಸುರ ಘೋರಾ!

ನರಕ : ಭಳಿರೆ ! ಭಳಿರೆ ! ಕಪಟಿ ಕೃಷ್ಣ
ಇಲ್ಲಿಗೇಕೆ ಬಂದಿಯಾ?

ಕೃಷ್ಣ : ಮುರನ ಕೊಂದ ಚಕ್ರದಲಗು
ಮೊಂಡವಲ್ಲ ಕಂಡೆಯಾ?

ನರಕ: ಆದರ ಸೇಡನ್ನುಣ್ಣುವಿ!
ಏಕೆ ಇನಿತು ನನ್ನೊಳು ಹಗೆ?

ಕೃಷ್ಣ : ಅದಿತಿ - ಇಂದ್ರರೊಡವೆಗಳನು
ಅವರಿಗೊಪ್ಪಿಸುವೆಯಾ ಹೇಗೆ?

ನರಕ: ಗೆದ್ದು ತಂದುದ್ದೆನ್ನ ಸೊತ್ತು
ಯುದ್ಧ ಒಂದೇ ನನಗೆ ಗೊತ್ತು!
ಚತುರ್ದಶ ಭುವನಗಳಿಗಳಿಗೆ
ನಾನೇ ಸಾರ್ವಭೌಮ
ಶ್ರೇಷ್ಠ ರತ್ನಗಳಿಗೆಲ್ಲ
ಪ್ರಭುವು ನಾನೇ ಪರಮ!

ಕೃಷ್ಣ : ಹಾಗಿದ್ದರೆ ನರಕ ಸೇರಿ
ಮಾಡು ಹೆಸರು ಸಾರ್ಥಕ-
ಚತುರ್ದಶಿಗೆ ತೊಲಗಲಿಂದು
ಮೂಲೋಕದ ಕಂಟಕ

ನರಕ : ತೊಲಗು ಗೊಲ್ಲ ತೊಲಗು
ಸೇರು ದ್ವಾರಕೆ
ಬಿಟ್ಟು ಹೋಗು- ಭಾಮಾ ಮಣಿ
ನನಗೆ ಕಾಣಿಕೆ

**ಭಾಮೆ (ಕೆರಳಿ) :** ಮುಚ್ಚು ಬಾಯಿ ! ಹುಚ್ಚು ನಾಯಿ!

**ಕೃಷ್ಣ :** ಸಾಯಿ! ಸಾಯಿ! ಸಾಯಿ!

**ಮೇಳ :** ಘನಘೋರ ರಣವೆಸಗಿತು
ಪ್ರಳಯಾಗ್ನಿ ನೆರೆಮಸುಗಿತು
ಗರುಡ ಗರುವಾಯಿಯಲ್ಲಿ
ರೆಕ್ಕೆ ಬಡಿದೊಗೆದ ಚೆಲ್ಲಿ
ಮದ್ದಾನೆ ಸೊಂಡಿಲುಗಳು
ಮುರಿದೊಟ್ಟೆ ಸ್ಥಂಡಿಲಗಳು
ನೆಣ ನೆತ್ತರೋಕುಳಿಯಲಿ
ಮೃತ- ಮಾಂಸ ಮಾರಿಗೆ ಬಲಿ
ಪರಿಘತೋಮರ ಗದೆಗಳು
ಮುಸಲ ಮುದ್ಗರದೊದೆಗಳು
ಆನೆಗೆಸೆದಂತೆ ಮಾಲೆ
ಹರಿಗಾಯ್ತು ದೈತ್ಯಲೀಲೆ
ದೈತ್ಯ ಬಲ ದಿಕ್ಕೆಟ್ಟಿತು
ಸುದರ್ಶನವು ಅದನ್ನಟ್ಟಿತು
ಭಾಮೆಯೆದೆ ಕಂಗೆಟ್ಟಿತು
ಪ್ರಾಣಪಣರಣಕ್ಕಿಟ್ಟಿತು

**ನರಕ:** ಓ ಕೃಷ್ಣ ತಾಳು ಈ ಶಕ್ತ್ಯಾಯುಧ
ಪಚ್ಚಪಸಿತುರುಕಾರ ಆಗು ಸಿದ್ಧ

**ಮೇಳ :** ಹರಿಸುದರ್ಶನ ಕಡಿದ ದೈತ್ಯರುಂಡ
ಮಣಿಮುಕುಟದೊಡ- ಪುಟವ ಚಂಡ
ಶೈಲ ಶೃಂಗವ ಸಿಡಿಲು ಕೆಡುಹುವಂದ
ಭೌಮ ಕುಸಿದನು - ತಾಯ ತೊಡೆಯಕಂಡ
ದಿವದುಂದುಬಿಗಳು ಅಬ್ಬರಿಸೆ
ಸುರಮುನಿ ಜಯದನಿ ಉಗ್ಗಡಿಸೆ
ಗಂಧರ್ವರು ಶುಭ ಹಾಡಿದರು
ಅಪ್ಸರೆಯರು ಕುಣಿದಾಡಿದರು
ಕೊಂಡಾಡುತ ಹರಿಯನು ಭೂತಾಯಿ
ಬಂದಳು - ಮೊಮ್ಮಗನನ್ನ ಕಾಯೆ-

**ಭೂಮಾತೆ:** ನಮಸ್ತೆ ದೇವದೇವೇಶ ಶಂಖ ಚಕ್ರ ಗದಾಧರ
ಭಕ್ತೇಚ್ಛೋಪಾತ್ರ ರೂಪಾಯ ಪರಮಾತನ್ ನಮೋಸ್ತುತೇ

ನಮೋ ಭಗವತೇತುಭ್ಯಂ
ವಾಸುದೇವಾಯ ವಿಷ್ಣವೇ
ಪುರುಷಾಯ ಬೀಜರೂಪಾಯ
ಪರಮಾತ್ಮನ್ ನಮೋಸ್ತುತೆ !

**ಕೃಷ್ಣ :** ಎದ್ದೇಳು ಭೂಮಾತೆ

**ಭೂ :** ನನ್ನೀ ಮೊಮ್ಮಗ ಭಗದತ್ತ
ನಿನ್ನಲಿ ಮೊರೆ, ನಿನ್ನಯ ಚಿತ್ತ
ಕರುಣಿಸಿ ಬಾಲನ ಕಾಪಾಡು
ಪ್ರಾಗ್‌ಜ್ಯೋತಿಷ್ಯಕೊಡೆಯನ ಮಾಡು
ಒಪ್ಪಿಸಿಹೆನು ದೇವತೆಗಳ ವಸ್ತು

**ಕೃಷ್ಣ :** ತಥಾಸ್ತು ತಾಯೇ ಶುಭಮಸ್ತು!

**ಮೇಳ :** ಕೃಷ್ಣನು ಗೈದನು ಪುರಪ್ರವೇಶ
ನೋಡಿದತ್ತ ದುರ್ದಶೆಯೆ ವಿಶೇಷ
ಧನ ಬಲ-ದರ್ಪದ ದುರಹಂಕಾರ
ನರಕರಾಜ್ಯದಲಿ ಹಾಹಾಕಾರ!

**ಆರ್ತ ಧ್ವನಿಗಳು:**

೧) ಅಯ್ಯಾ ಕೊಡಿ ಕೂಳು
೨) ಅಯ್ಯಾ ಕೊಡಿ ಕೂಲಿ!
೩) ನಮಗೆ ನೀಡಿ ಗದ್ದೆ!
೪) ನಮಗೆ ಬೇಕು ವಿದ್ಯೆ!
೫) ನಮಗಿಲ್ಲವೋ ಬಟ್ಟೆ!
೬) ನಾ ಮದ್ದಿಲ್ಲದೆ ಕೆಟ್ಟೆ!
೭) ನಮಗೆಲ್ಲಿದೆ ಕೆಲಸ?
೮) ನಾವೆದ್ದೆವು ವಲಸೆ!
೯) ಕನ್ನೆಗೆ ವರನಿಲ್ಲ!
೧೦) ಬಂದಿದೆ ಬರಗಾಲ!
೧೧) ಉಳಿಯಲು ಮನೆಯಿಲ್ಲ!
೧೨) ಸಾಲಕೆ ಕೊನೆಯಿಲ್ಲ!
೧೩) ಹಲು ಮಕ್ಕಳ ಕಾಟ!
೧೪) ನಮಗೊಂದೇ ಊಟ!

ಲ್ಲರೂ : ದಲಿತರ ತುಳಿಯುವರೊ!
ಉಳ್ಳವರುಳಿಯುವರೋ!
ಬರುವನಿಂದಿರಾವರ
ತರುವನೆಮಗೆ ಉದ್ಧಾರ!

ಷ್ಣ : ನರಕ ರಾಜ್ಯದ ಪ್ರಜೆಗಳೆ
ಇಂದು ನಿಮಗಿದೆ ಬಿಡುಗಡೆ
ಆದಕೆ ಬಾರದು ಆಡೆತಡೆ
ಎಂದು ಮುಗಿಯದ ಮುನ್ನಡೆ!
ನ್ಯಾಯ ಶಾಂತಿ ಸಮಾನತೆಯನು
ನೀಡುವನು ಭಗದತ್ತನು
ನವ ವಿಧಾನದ ನವಮನು!
ಭೌಮಾಸುರನರಮನೆ
ರಮಣಿಯರಿಗೆ ಸೆರೆಮನೆ
ಕೃಷ್ಣನಿಂದ ಮೋಚನೆ
ಏನು ಮುಂದೆ ಯೋಚನೆ?

ಷ್ಣ : ಭಾಮೆ, ಈ ಹದಿನಾರು ಸಾವಿರ
ಅರಗುವರಿಯರ ಕಳುಹಿಸು
ಅವರವರ ರಾಜ್ಯಕ್ಕೆ

ಮಣಿಯರು : ದೇವಾ,
ನಿನ್ನ ನೆರೆಯನೆ ಕರುಣಿಸು!
ಹೋಗಲಾರೆವು ಮರಳಿ ಮನೆಗೆ ನಾವು
ರಕ್ಕಸನ ತೊತ್ತುಗಳು ನಮಗಿಲ್ಲ ಠಾವು
ಪತಿತ ಪಾವನ ನೀನೆ ಪತಿ ಎಮಗೆ! ಗತಿ ಎಮಗೆ!
ಉದ್ಧರಿಸು ಉದ್ಧರಿಸು ವರಿಸಿಹೆವು ನಿನಗೆ

ಷ್ಣ : ಭಾಮೆ?

ಮಣಿಯರು: ಓ ಅಕ್ಕ ಭಾಮೆ! ಅಕ್ಕನು ದೆಯೆಯಿಂದ
ಹುಲಿ ಹಿಡಿದ ಗೋವು ನಾವ್
ಕಾಪಾಡು ಗೋವಿಂದ !

ಷ್ಣ : ಏನೆನ್ನುವಿ ಭಾಮೆ?

ಮೆ: ಏತಕ್ಕೆ ಇನ್ನೂ ಭ್ರಮೆ?
ತಂಗಿಯರೆ ಸ್ವಾಗತವು ನಮ್ಮ ಅಂತಃಪುರಕೆ
ದ್ವಾರಕೆಯ ದ್ವಾರ ತೆರೆದಿದೆ ನಿಮಗೆ ಹರಕೆ

**ಮೇಳ:** ಕಾಮಿನಿಗೆ ಕರಗುವನು ಕೃಷ್ಣ!
ಭಾಮಿನಿಯರ ಮೃಗನಯನ ತೃಷ್ಣ!
ಸುದತಿಯರ ಹದಿನಾರು ಸಾವಿರ
ವಿದುಳದಲಿ ಬೀಳ್ಕೊಟ್ಟು ಸತ್ವರ
ಕೃಷ್ಣ ಭಾಮೆಯರೈದಿದರು ಸುರ
ಲೋಕ ಕಾಣಲು ಅದಿತಿ-ಇಂದ್ರರ

**ಕೃಷ್ಣ:** ದೇವಮಾತೆ ಕೊಳ್ಳು ಈ ಕರ್ಣಕುಂಡಲ

**ಅದಿತಿ:** ನಾ ಧನ್ಯೆ ಭಗವನ್!

**ಕೃಷ್ಣ:** ದೇವೇಂದ್ರ ಕೊಳ್ಳು ನಿನ್ನೀ ಕಾಮಧೇನು

**ಇಂದ್ರ :** ಧನ್ಯೋಽಸ್ಮಿ ಭಗವನ್!

**ಕೃಷ್ಣ :** ಇನ್ನು ಕೋ ಕಲ್ಪವೃಕ್ಷ

**ಭಾಮೆ :** ಹೂಂ ನಿಲ್ಲಿ ಕೊಡಿಲ್ಲಿ ಲಕ್ಷ್ಯ
ಅದು ನನಗೆ ದೇವೇಂದ್ರನಿಂದ ಬಂದ ಉಡುಗೊರೆ!

**ಇಂದ್ರ :** ಅರರೆ! ಅದು ಇಲ್ಲದಿರೆ ಸುರರೆಲ್ಲ ಬದುಕುವರೆ?

**ಕೃಷ್ಣ :** ಅಹುದು ಭಾಮೆ! ಅಹುದು
ಇಂದ್ರನೆಂದುದೆ ದಿಟ

**ಭಾಮೆ :** ಕಲ್ಪವೃಕ್ಷವು ನನಗೆ
ನಾ ಬಿಡೆನು ನನ್ನ ಹಟ

**ಕೃಷ್ಣ (ವ್ಯಗ್ರ) :** ಬಂತಲ್ಲ ಪೀಕಲಾಟ!

**ಭಾಮೆ :** ಕಲ್ಪವೃಕ್ಷಕ್ಕೆ ಬದಲು ಪಾರಿಜಾತ!

**ಇಂದ್ರ :** ನಾನೊಲ್ಲೆ ದೇವಾ! ಒಲ್ಲೆ ನೀ ಮಾತ!

**ಕೃಷ್ಣ :** ನಾ ಬಲ್ಲೆ ಪಾರಿಜಾತವನೊಯ್ಯ ಬಲ್ಲೆ.
ಓ ಗರುಡ ಪಾರಿಜಾತವನು ಕೀಳು
ಹೊರು ಹೆಗಲಿಗೆಮ್ಮೊಡನೆ, ಹಾರು ಏಳು!
ಅಮರರೇ, ಪಾಮರರೆ ಲವವೂ ಕೃತಜ್ಞತೆ
ನಿಮಗಿಲ್ಲ , ನಿಮಗೊಂದೆ ಭೋಗಲಂಪಟತೆ!
ಪಾರಿಜಾತವು ಇನ್ನು ಭಾಮೆಯರ ಮನೆಯಿದಿರು
ದೇವ ವಿಜಯ ಸ್ತಂಭ ಮೆರೆಯುವದು ದಿವ್ಯತರು

**ಮೇಳ :** ಪಡೆದು ಸಿರಿಪಾರಿಜಾತ
ಅರಳಿ ಮುಖಪಾರಿಜಾತ
ಭಾಮೆ ಆರತಿಕಂಗಳ
ಬೆಳಗಿದಳು ಜಯಮಂಗಳ

ದ್ವಾರಕೆಗೆ ವಿಜಯೋತ್ಸವ
ಮನೆಮನೆಗು ದೀಪಾವಳಿ
ಮೊಗ ಮೊಗವು ಚೆಲುವಾರಗೆ
ಕೃಷ್ಣ ಚಂದಿರ ಮಂಡಲ.

ಷ್ಟನಾಯಿಕರು: ರಂಗಗೆ ಅಭ್ಯಂಜನ
ಹೃದಯರಾಗ ರಂಜನಾ
ನರಕಾಸುರ ವಧೆಯಿಂದ
ದಣಿದನಹಾ! ಗೋವಿಂದ
ನಾವು ಅಷ್ಟನಾಯಿಕೆಯರು
ಕಂಪಿನೆಣ್ಣೆ ಪೂಸಿ ಚದುರು
ಮೈಯ ನೋವನಿಳಿಸುವಾ
ಮನದ ಕಾವನಿಳಿಸುವಾ
ರಂಗಗೆ ಅಭ್ಯಂಜನಾ
ಹೃದಯ ರಾಗ ರಂಜನಾ!

ಂಳ: ಊರು-ಕೇರಿ ಎಲ್ಲಾ ನೋಡಿ!
ಮಳೆಗಾಲದ ಕೆಸರ ರಾಡಿ
ಮಡುವು ಕೊಳಕೊಳಚೆ ಕೋಡಿ
ಇದುವೆ ನರಕ, ನಾಶ ಮಾಡಿ
ಕೊಟ್ಟಿಗೆ -ದಾವಣಿ -ದನ
ಹಟ್ಟಿ ಹಕ್ಕೆ ಗೈದು ಹಸನ
ತೊಟ್ಟಿಹರ್ರೈ ಹೊಸವಸನ
ಸುಖ ಸಂತೋಷದ ಪ್ರಹಸನ!

ಂಡು ಹೆಣ್ಣು ಕೂಡಿ: ದೇವವಿಜಯ ನರಕನಾಶ
ಒಳಗು ಹೊರಗು ಸತ್‌ಪ್ರಕಾಶ
ಮೈಗೆ ಗಂಧ ಚಂದನ
ಮನೆ ಮನೆಯೂ ನಂದನ
ನರ-ನರರೂ ಕೃಷ್ಣ ಚಂದ್ರ
ನಾರಿ-ನಾರಿ ಭಾಮೆಯಂದ
ಹಣೆಗೆ ಕಸ್ತೂರಿ ತಿಲಕ-
ಕೊರಳಲ್ಲಿ ವನಮಾಲಿಕೆ
ಹರಿನಾಮವೆ ಎದೆಯ ಪದಕ-
ರೋಮ ರೋಮ ರಸದ ಪುಳಕ
ಮೈಗೆ ಗಂಧ ಚಂದನ ಮನೆ ಮನೆಯೂ ನಂದನ.

# ಗೋಪೀ-ಕೃಷ್ಣ

(ಪುಟ್ಟ ಗೀತರೂಪಕ)

## ಪಾತ್ರಗಳು

ಯಶೋದೆ
ಒಂದನೇ ಗೋಪಿ
ಎರಡನೇ ಗೋಪಿ
ಮೂರನೇ ಗೋಪಿ
ಕೃಷ್ಣನಾಗಿ ನಾಲ್ವರು

# ಗೋಪೀ-ಕೃಷ್ಣ

(ಯೋಶೋದೆಯ ಇದಿರು ದೂರುಗಳು)

**ಂದನೇ ಗೋಪಿ :** ಹರಿಯ ಲೂಟಿ ಭಾರಿ, ಯಶೋದೆ,
ಹರಿಯ ಲೂಟಿ ಭಾರಿ!

**ುಶೋದೆ :** ಏನದು ಲಗು ಹೇಳೇ ಗೋಪಿ?
ಏನದು ಲಗು ಹೇಳೇ!

**ಂದನೇ ಗೋಪಿ :** ಯಮುನಾ ತೀರಕೆ
ಹೋಗಿರೆ ನೀರಿಗೆ
ಕಾಣದೆ ಬಂದಾ
ನಿನ್ನಯ ಕಂದಾ
ಕೊಡವ ನೂಕಿದ
ಹೊಳೆಗೆ ಹಾಕಿದ
ಬಯ್ವಳು ಅತ್ತೇ
ಹೊಡೆವಳು ಲತ್ತೆ (ಬಿಕ್ಕುವಳು)

**ುಶೋದೆ :** ನನ್ನ ಕಂದನೆಲ್ಲಿs ಗೋಪಿ?

**ಂದನೇ ಗೋಪಿ :** ಕಟ್ಟಿಟ್ಟಿಹೆನಲ್ಲಿ - ಮನೆಯಲಿ
ಕಟ್ಟಿಟ್ಟಿಹೆನಲ್ಲಿ!

**ರಡನೆ ಗೋಪಿ :** ಹರಿಯ ಲೂಟಿ ಭಾರಿ, ಯಶೋದೆ
ಹರಿಯ ಲೂಟಿ ಭಾರಿ!

**ುಶೋದೆ :** ಏನದು ಲಗು ಹೇಳೇ ಗೋಪಿ
ಏನದು ಲಗು ಹೇಳೇ!

**ರಡನೇ ಗೋಪಿ :** ಮೊಸರನು ಮಾರಲು ಮಥುರಾ ನಗರಕೆ-
ನಾ ಹೊರಟಿರಲು ಇವ ಬರಬೇಕೇ?
ಬೆಣ್ಣೆಯ ಕಳ್ಳಾ ಕವಣೆಯ ಕಲ್ಲಾ
ಹೊಡೆದಾ ಒಡೆದಾ! ಗಡಿಗೆಯನೆಲ್ಲಾ

**ುಶೋದೆ :** ನನ್ನ ಕಂದನೆಲ್ಲಿs ಗೋಪಿ? ನನ್ನ ಕಂದನೆಲ್ಲಿ?

**ರಡನೇ ಗೋಪಿ :** ಕಟ್ಟಿಟ್ಟಹೆನಲ್ಲಿ - ಮನೆಯಲಿ
ಕಟ್ಟಿಟ್ಟಿಹೆನಲ್ಲಿ!

ಮೂರನೇ ಗೋಪಿ : ಹರಿಯ ಲೂಟಿ ಭಾರಿ, ಯಶೋದೆ
ಹರಿಯ ಲೂಟಿ ಭಾರಿ!

ಯಶೋದೆ : ಏನದು ಲಗು ಹೇಳೇ ಗೋಪಿ
ಏನದು ಲಗು ಹೇಳೇ!

ಮೂರನೇ ಗೋಪಿ : ಹೊಳೆಯಲಿ ಬಿದ್ದೆ ಈಜುತಲಿದ್ದೆ
ಅಲ್ಲಿಗೆ ಬಂದಾ! ನಿನ್ನಯ ಪುಂಡಾ
ತಡಿಯಲ್ಲಿದ್ದಾ! ಸೀರೆಯ ಕದ್ದಾ!
ಅಡಿಗಿಸೆ ದೂರಾs ನಾಚಿಗೆ ಪೂರಾss
ಅವನಿಗೆ ಆಟಾs ನನಗೆ ಸಂಕಟಾs

ಯಶೋದೆ : ನನ್ನ ಕಂದನೆಲ್ಲಿs ಗೋಪೀ? ನನ್ನ ಕಂದನೆಲ್ಲಿ?

ಮೂರನೇ ಗೋಪಿ : ಕಟ್ಟಿಟ್ಟಿಹೆನಲ್ಲಿ - ಮನೆಯಲಿ
ಕಟ್ಟಿಟ್ಟಿಹೆನಲ್ಲಿ!

ಮೂವರೂ
ಗೋಪೀಯರು : ನೋಡೆಯೆ ಪೀಡೆ! ಪೀಡೆಯ ನೋಡೆ
ಅಯ್ಯೋ ಮಾಣಿಸು!,ನೀ ಕೊನೆಗಾಣಿಸು!

ಯಶೋದೆ : ಕಂದನ ಕಾಣಿಸಿ, ತಂದಿಲ್ಲಿರಿಸಿ

ಮೂವರೂ
ಗೋಪೀಯರು : ಹೋಗಿಯೆ ಬರುವೆವು!
ಎಳದೇ ತರುವೆವು!

ಯಶೋದೆ : ತಡೆಯಿರಿ, ತಡೆಯಿರಿ,
ಏನಿದು ಚಿತ್ರ!
ಹರಿಯ ಚರಿತ್ರ ಲೋಕವಿಚಿತ್ರ!
ನನ್ನಯ ಕಂದ ಮುದ್ದು ಮುಕುಂದ
ಒಳಗಿಹ, ತಿನ್ನುತ ತನಿ ಮೊಸರನ್ನವ

ಒಂದನೇ ಗೋಪಿ : ಒಳಗಿಹನಂತೆ!

ಎರಡನೇ ಗೋಪಿ : ಸುಳ್ಳಿನ ಕಂತೆ!

ಮೂರನೆ ಗೋಪಿ : ಬಲು ಗುಣವಂತೆ!

ಯಶೋದೆ : ನಿಮಗೇನಂತೆ? ನಾ ನಿಶ್ಚಿಂತೆ!
ಯಾರಿಗೆ ಬಂಧನ

ನೋಡಿ ಮುಕುಂದನ
ಬಾರೊ ಕಂದಾs
ಓ ಗೋವಿಂದಾss
**(ಬಾಯಿ ಒರಿಸಿಕೊಳ್ಳುತ್ತಾ ಕೃಷ್ಣ ಬರುವನು)**

**ಕೃಷ್ಣ :** **(ಒಳಗಿನಿಂದ ಕೂಗುತ್ತ)**
ಕರೆದೆಯೇನೆ, ಅಮ್ಮಾss
ಬರುವೆ, ಬಂದೆನಮ್ಮಾ

**ಒಂದನೇ ಗೋಪಿ :** ಏನಿದು ಚಿತ್ರ!

**ಎರಡನೇ ಗೋಪಿ :** ಹರಿಯ ವಿಚಿತ್ರ!

**ಮೂರಮೇ ಗೋಪಿ :** ಗೂಢ ಚರಿತ್ರ-
ಗೂಢ ಚರಿತ್ರ!

**ಒಂದನೇ ಗೋಪಿ :** ನಾ ಕಟ್ಟಿಟ್ಟಿಹೆ!

**ಎರಡನೇ ಗೋಪಿ :** ನಾ ಬಿಗಿದಿಟ್ಟಿಹೆ!

**ಮೂರನೇ ಗೋಪಿ :** ನಾ ಹಿಡಿದಿಟ್ಟಿಹೆ!

**ಯಶೋದೆ :** ಹಾಗಿರೆ, ಹೋಗಿರೆ
ತಂದು ತೋರಿಸಿರೆ!

**ಮೂವರೂ ಗೋಪಿಯರು :** ತರುವೆವು ಬರುವೆವು
ಗೋಕುಲದರಸಿ!

**ಕೃಷ್ಣ :** ಏನಿದು ಜಲ್ಪನೆ?

**ಯಶೋದೆ :** ಮೋಹದ ಕಲ್ಪನೆ!

**ಕೃಷ್ಣ :** ಒಳಗಿಹೆ ಮನೆಯಾ
ನಿನ್ನಯ ಸನಿಹ
ಉಣ್ಣುತಲಿದ್ದೆ - ಇನ್ನೆಲ್ಲಿದ್ದೆ?
**(ಆಗ ಗೋಪಿಯರು ತಾವು ಕಟ್ಟಿಟ್ಟ ಕೃಷ್ಣರನ್ನು ನೂಕಿ ಕೊಂಡು ಬರುತ್ತಾರೆ)**

**ಒಂದನೇ ಗೋಪಿ :** ನೋಡಿದೊ ಹರಿಯಾ

**ಎರಡನೇ ಗೋಪಿ :** ಯಾರಿವ, ನರಿಯಾ?

**ಮೂರನೇ ಗೋಪಿ :** ನೋಡೀ ಪುಂಡನ

**ಯಶೋದೆ :** ನಂದನ ನಂದನ! ಏನಿದು ಗೂಢ?
ನಾ ದಿಙ್ಮೂಢಾ! ನಾ ದಿಙ್ಮೂಢಾ!

**ಕೃಷ್ಣ :** ರೂಪ, ರೂಪ ಪ್ರತಿರೂಪನಾಗಿರೆ
ಗೋಪಿ ಗೋಪಿಯಲಿ ದೀಪಿಸಿ ಊಹೆ!
ಎಂತು ಸ್ವಭಾವಾ ಅಂತು ಪ್ರಭಾವಾ!

**ಗೋಪಿಯರು :** ನಂದ-ಯಶೋದಾ ನಂದನ ಜೈ!

**ತಂದ ಮೂರು ಕೃಷ್ಣರು :** ಪರಮಾನಂದನ ಕಂದನೆ ಜೈ!
ಕಲಿಕಲುಮಷಕುಲ ಪುಲಿಂದ ಜೈ!
ಬಕುತ ಹೃದಯ ಮಧುಮಿಲಿಂದ ಜೈ!
ಹರೇ ಕೃಷ್ಣ ಜೈ...... ಹರೇ ಕೃಷ್ಣ ಜೈ!

**(ಕೃಷ್ಣ ಯಶೋದೆಯರನ್ನು ನಡುವೆ ನಿಲ್ಲಿಸಿ ಉಳಿದ ಗೋಪಿ ಕೃಷ್ಣ ಜೋಡಿಗಳು ಸುತ್ತು ಕೋಲಾಟವಾಡು ತ್ತಿರುವಾಗ.........................ತೆರೆ)**

# ಮಕರ ಸಂಕ್ರಮಣ

(ಗೀತ ರೂಪಕ)

## ಪಾತ್ರಗಳು

| | |
|---|---|
| ನಿವೇದಕ | ಸಂಕ್ರಾಂತಿದೇವಿ |
| ಗಾಯಕ | ಭೂಮಿತಾಯಿ |
| ಸಂಕರಾಸುರ | ಮಕ್ಕಳು |
| ಕಿಂಕರ | ಮಕ್ಕಳು |
| ಒಕ್ಕಲಮೇಳ | ಗಂಡು-ಹೆಣ್ಣುಗಳ ಧ್ವನಿ. |

# ಮಕರ ಸಂಕ್ರಮಣ

| | |
|---|---|
| ನಿವೇದಕ : | (ಲಯಬದ್ಧ ಗದ್ಯದಲ್ಲಿ)<br>ಶಕಶಾಲಿವಾಹನ<br>ಇಪ್ಪತ್ತನೆ ಶತಮಾನ<br>ಮೊದಲನೆಯ ವರ್ಷ<br>ಪೌಷ್ಯ ಕೃಷ್ಣ ಏಕಾದಶಿ<br>ಧನ್ಯ ಲೋಕ ಹಿತೈಷಿ<br>ಸೂರ್ಯನು ಪ್ರವೇಶಿಸಿ<br>ಮಕರ ರಾಶಿ! |
| ಗಾಯಕ : | (ಮಾರ್ಗ ಸಂಗೀತದ ರೀತಿ)<br>ಕರ್ಕದಿಂದ ಮಕರಕ್ಕೆ ದಕ್ಷಿಣಾಯನಾ<br>ಕುಗ್ಗಿಸಿತು ಮಬ್ಬಿನಲಿ ಕಾವು-ತೇವಿನಾ<br>ಯಮನೂರ ದಾರಿ, ಓ ಸಾವಿಂಗೆ ಔತಣಾ<br>ಅಯಿತಿಂದು  ಭುವಿಗಾಽ ಶಾಪಮೋಚನಾ<br>ಅರಳಿತೋ ಬಾನು ತೆರೆಯಿತೋ ಲೋಕಲೋಚನಾ!<br>ಮಕರದಿಂದ ಕರ್ಕಕ್ಕೆ ಉತ್ತರಾಯಣಾ<br>ತೆರಳಿತೋ ಸೂರ್ಯನಾ ತೇರು ಇದೇ ಸಂಕ್ರಮಣಾ! |
| ಹೆಣ್ಣು ಮಕ್ಕಳ ದನಿ : | ಸಂಕ್ರಾಂತಿ! ಸಂಕ್ರಾಂತಿ!<br>ಮಕರ ಸಂಕ್ರಾಂತಿ!<br>ಮಧುರ ಸಂಕ್ರಾಂತಿ!<br>ಋತುಚಕ್ರ ಉರುಳಲು<br>ಸಮಗ್ರ ಕ್ರಾಂತಿ! |
| ಸಂಕರಾಸುರನ<br>ಅಟ್ಟಹಾಸದ ದನಿ : | ಹೆ! ಹೆ! ಹೆ! ನನ್ನ ಸಂಕ್ರಾಂತಿ! |
| ಕಿಂಕರಾಸುರ : | |
| ಅಷ್ಟೇ ಅಟ್ಟಹಾಸದಿಂದ: | ಹ! ಹ! ಹೆ- ನನ್ನ ಕಿಂಕ್ರಾಂತಿ! |
| ಸಂಕರ : | ಅಲ್ಲ ಸಂಕ್ರಾಂತಿ! |
| ಕಿಂಕರ : | ಸಲ್ಲಽ - ಕಿಂಕ್ರಾಂತಿ |
| ನಿವೇದಕ : | ಇದೇನು ಭ್ರಾಂತಿ? ಇದೇನು ಭ್ರಾಂತಿ!<br>ದುರುಳ ದಾನವರ ಬುದ್ಧಿ ಭ್ರಾಂತಿ! |

ಸಂಕರ : ಕೇಳಿರಿ. ಭೂಲೋಕದ ಮುಟ್ಠಾಳರೆ
ನಾನು ಸಂಕರಾಸುರ
ನನ್ನದೆ ಸಂಕ್ರಾಂತಿ!

ಕಿಂಕರ : ಕೇಳಿರಿ, ಇಹಲೋಕದ ಮೂಡಾತ್ಮರೆ
ನಾನು ಕಿಂಕರಾಸುರ
ನನ್ನದೆ ಕಿಂಕ್ರಾಂತಿ!

ಹೆಣ್ಣು ದನಿ : ಅಬ್ಬಬ್ಬ! ಅವ್ವಯ್ಯಾ
ಲೋಕಕಂಟಕ ಅಸುರರು
ದೇವಿಸಂಕ್ರಾಂತಿಗೆ ಬಲಿ
ಮಕರ ಸಂಕ್ರಮಣದ ದಿನ
ಸಂಕರಾಸುರ ಬಹುಬಲಿ
ದೇವಿಗೆ ಹತನಾದನು!

ಗಂಡು ದನಿ : ಮರುದಿನ ಕಿಂಕರನ ಸರದಿ
ದೇವಿಗೀರ್ವರ ಆತ್ಮಾಹುತಿ!

ಸಂಕರ : ಹಃ ಹಃ ಹಃ ಇದೇ ನಿನ್ನ ಭ್ರಾಂತಿ!

ಕಿಂಕರ : ಹೇಃ ಹೇಃ ಹೇಃ ನಿನ್ನ ತಲೆ ಭ್ರಮಂತಿ!

ಇಬ್ಬರೂ : ಆತ್ಮಕ್ಕೆಲ್ಲಿ ಆಹುತಿ?
ನಮ್ಮದಲ್ಲ ಅಹತಿ
ಅಸುರರ ಅಸು ಬಿರುಗಾಳಿ -
ಹಬ್ಬಿಸಿಹೆವು ಹಾವಳಿ!
ಹಃ ಹಃ ಹಃ
ಹೇಃ ಹೇಃ ಹೇಃ **(ಕೂಡಿಯೇ ನಗುವರು)**
ಭೂಲೋಕದ ದಿಶೆ ದಿಶೆಗೆ
ಮನುಕುಲದಾ ದುರ್ದಶೆಗೆ
ಮೂಲ ನಮ್ಮ ಲಪಹತಿ
ನಮಗೆಲ್ಲಿಯ ಆತ್ಮಾಹುತಿ?
ಹಃ ಹಃ ಹಃ
ಹೇಃ ಹೇಃ ಹೇಃ **(ಕೂಡಿಯೇ ನಗುವರು)**

ಸಂಕರ : ನನ್ನದೇ ಸಂಕ್ರಾಂತಿ!

ಕಿಂಕರ : ನನ್ನದೇ ಕಿಂಕ್ರಾಂತಿ!

**ನಿವೇದಕ :** ಭಾಪು! ಭಾಪು! ನಿಮ್ಮ ಭಾಪು!
ಸಕಲ ಲೋಕ ಹೊತ್ತಿದೆ
ಸಂಕರತೆಯು ಸತ್ವ-ತತ್ವ
ವೆಲ್ಲ ಕೆಡಿಸಿ ಕುಟ್ಟಿದೆ
ಕಿಂಕರತನ ಮಾನವನ
ಮಾನವನ್ನೇ ಮೆಟ್ಟಿದೆ

ಸಂಕರ-ಕಲಬೆರಕೆ
ಕಿಂಕರ ನಡೆವಳಿಕೆ
ಅಯ್ಯೋ! ಭಾರತಕೆ
ಅವನತಿ ತರಬೇಕೇ?

**ಸಂಕ್ರಾಂತಿ ದೇವಿ :** ಸಂಕ್ರಾಂತಿ ದೇವಿ ನಾ
ಹೊಂದೆ ನಾ ವಾಹನಾ
ಹಂದಿಯೋ ನಂದಿಯೋ
ಪಶುಬಲವೆ ವಾಹನಾ!
ಸಂಕರನ ಕಿಂಕರನ
ಕೊಂದೆ ನಾನು ಭಯ (ನಾನ್ ಉಭಯ)
ಬಾಳಿಗಿದು ಹೊಸಪರ್ವ
ಲೋಕಕ್ಕೆ ಅಭಯ!

**ನಿವೇದಕ :** ದೇವಮಾನವರ ಸ್ತುತಿ
ಎತ್ತುವರು ಆರತಿ. -

**ಹೆಣ್ಣು-ಗಂಡು ದನಿಗಳಲ್ಲಿ** (ಆರತಿ)
ಜಯದೇವಿ ಜಯದೇವಿ
ಸಂಕ್ರಾಂತಿ ದೇವಿ
ಜಯ "ಧ್ವಾಂಕ್ಷಿ" ರಕ್ತಾಕ್ಷಿ
'ರಾಕ್ಷಸಿ' ಮಾಯಾವಿ!
ಯೋಜನ ಷಷ್ಠಿ ವಿಶಾಲಾ
'ಪುರುಷಾಕೃತಿ' 'ಘೋರಾ'
ಲಂಬನಾಸ, ಬಿಂಬೋಷ್ಠೀ
'ಬೈಕ್ಷ'ವೆ ಆಹಾರಾ!
ಕಾವ್ಯಾಭರಣ ವಿಭೂಷಿತೆ

ಹಸಿರುಟ್ಟ ದುಕೂಲಾ
ನವಹಸ್ತಾ ಏಕಮುಖೀ
ಮುಡಿದಿಹೆ ನವಬಕುಲಾ!
ಜಯದೇವಿ ಜಯದೇವಿ....
**(ಆರತಿ ಹಾಡುವಾಗಲೆ ಹಿನ್ನೆಲೆಯಲ್ಲಿ ಸಂಕ್ರಾಂತಿಫಲ ಪಾಠ)**

"ಯಾನಿಕಾನಿಚ ವಸ್ತೂನಿ
ಸಂಕ್ರಾಂತಿಃ ಸ್ವೀಕರೋತಿ ಚ!
ತತ್‌ತತ್ ಮಹಾರ್ಘಂ ನಾಶಂ ಚ
ಕ್ರಮವಿಕ್ರಮ ಭೀತಿದಂ
ಆಗಮೇ ಚ ಭವೇತ್ ಸೌಖ್ಯಂ
ಗಮನೆ ದುಃಖದಾಯಕಂ!
ದರ್ಶನೇತು ಭವೇತ್ ಹಾನಿಃ
ಸಂಕ್ರಾಂತಿ ಫಲ ಮಾ ದಿಶೇತ್!!"

ಂಡಸರ ದನಿ : ಭೂಮಿತಾಯಿ, ಹಿಗ್ಗಿ
ಬರುವದೆಂದು ಸುಗ್ಗಿ
ಹಾಡುವಳೋ!
ಕೊಂಡಾಡುವಳೋ!

ೂಮಿ ತಾಯಿ: ಬಂದಿರೆ ಹೇಮಂತ,
ದೂರವೇ ವಸಂತ?
ಸೂರ್ಯನು ಸಾರಿದ ಮಕರಕ್ಕೆ
ನಕ್ಷತ್ರಂಗಳ ನಿಕರಕ್ಕೆ
ಹಿಗ್ಗು ಮುಟ್ಟಿತೋ ಶಿಖರಕ್ಕೆ
ಇನ್ನು ದಿನ ದಿನವು ಬಲು ಪ್ರಖರs
ಹಕ್ಕಿ ಪಕ್ಕಿ - ತುರು-ಕರು ಮುಖರ!

ಂಡಸರ ದನಿಗಳೂ
ೀರುವವು : ಬೆಳಕು ಚಾಚಿತು ಬಾನ ಬಾಚಿತು
ಬಿಸಿಲು ದೋಚಿತು ನೆಲ-ಜಲ
ಗಾಳಿ ಬೀಸಿತು ಹೂವು ಹಾಸಿತು
ಹೊಂಗಳೆಯು - ಬನಶಾದ್ವಲ!

ವೇದಕ: **(ಲಯ ಬದ್ಧ ಗದ್ಯ ರೀತಿ)**
ಹಿಂದಿನ ದಿನವದು 'ಭೋಗಿ'
ಆರ್ಬಗೆ ತಿಲದುಪಯೋಗಿ

ಹೆಣ್ಣು ಗಂಡು
ಜಾನಪದ ಧಾಟಿಯಲ್ಲಿ: ಮೈಗೆ ಎಳ್ಳಿನ ಕಲಕ
ಎಳ್ಳು ನೀರಿನ ಜಳಕ
ಎಳ್ಳೀರ ಪಾನಕ - ಕುಡಿಯೋಣs ಣs
ಎಳ್ಳಿನ ಅರ್ಚನೆ
ಎಳ್ಳಿಂದೆ ತರ್ಪಣೆ
ದಾನಕ್ಕೆ ಎಳ್ಳನ್ನೆ - ನೀಡೋಣs ಣs

ನಿವೇದಕ : (ಗದ್ಯ ಧಾಟಿ)
ಮರುದಿನ 'ಕರಿ' ದಿನವಂತೆ
ಹೆಂಗಳೆಯರ ಸೊಗ-ಸಂತೆ!

ಹೆಂಗಳೆಯರ ದನಿ : ಮಂಗಲ ಸ್ನಾನಾ
ವಸ್ತ್ರಾಭರಣಾ
ಮುಡಿತುಂಬ ಹೊರೆ ಸೇವಂತೆ
ಹೆಂಗಳೆಯರ ಸೊಗ-ಸಂತೆ!
ಅರಿಶಿನ ಕುಂಕುಮ
ಹಣೆಗೆ ಕರಡಿಗೆ ಕುಸುಮ
ಉಡಿತುಂಬಿಸಲು ಎಲ್ಲ ತನ್ನಿ!
ಅಕ್ಕಿ ಗೋದಿ ಹತ್ತಿ
ಮಣ್ಣ ಕುಡಿತೆಯೊಳಿಟ್ಟ
ಕಬ್ಬನ್ನೂ ಹಂಚೋಣ ಬನ್ನಿ!
ಮದುವಣಗಿತ್ತಿಗೆ
ಅಕ್ಕಮ್ಮ ಅತ್ತಿಗೆ
ಮಿಗಿಲಾಗಿ ಮಡಿಲನ್ನು ತುಂಬಿ
ಎಳ್ಳು ಸಕ್ಕರೆ ತಿನ್ನಿ
ಸವಿಸವಿಮಾತೆನ್ನಿ
ಒಲುಮೆಯ ನಲುಮೆಯ ನಂಬಿ!

ನಿವೇದಕ : ಒಕ್ಕಲ ಹಕ್ಕಲ ಗುಮಟೆಯ ಪಾಂಗು
ಇರುಳಲಿ ಜಾಗರ ಹಗಲಲಿ ಗುಂಗು!

ಒಕ್ಕಲುಮೇಳ:
ಗುಮಟೆಗಳ ಗತ್ತಿಗೆ: ದಿವಸದ ಬಿತ್ತರ
ಗೈಮೆ ಮಹತ್ತರ
ಕರೆ ಉತ್ತರೋತ್ತರ
ಸs ಮೃದ್ಧಿಗೆ

ಕಣಜದ ಎತ್ತರ
ಮುಗಿಲಿಗೆ ಹತ್ತರ
ಹಿರಿ ಆಶೊತ್ತರ - ಅಭಿವೃದ್ಧಿಗೆ
ಕೊನರ್‍ಯಿತು ನೆತ್ತರ
ತನೆ ತನೆ ಚಿತ್ತಾರ!
ಬೆವರಿನ ಅತ್ತರ - ಮಘ ಮಘಿಸೆ
ಮಣ್ಣಿನ ವಾಸನೆ
ಓ ವಾಸುದೇವನೆ!
ಉಳುಮೆ ಉಪಾಸನೆ - ನಾವ್ ನಮಿಸೆ!

ವೇದಕ: ಊರು-ಕೇರಿ-ಬೀದಿ-ಬದಿ
ಶಾಲೆ-ಪೇಟೆ-ಬೇಲೆ-ಗುಡಿ
ಕಿಲಿಕಿಲಿಸುವ ಮಕ್ಕಳು
ಹಂಚುವರು ಸಂಕ್ರಾಂತಿ ಕಾಳು!

(ಹಿನ್ನೆಲೆಯಲ್ಲಿ ಮಕ್ಕಳ ಕಲಕಲ ಕೇಕೆ 'ತಿಳಗುಳಕೊಳ್ಳಿ' 'ಎಳ್ಳುಬೆಲ್ಲ ತಕ್ಕೊಳ್ಳಿ' 'ನಮಸ್ತೆ' ನಮಸ್ಕಾರ ಸರ್, 'ಎಳ್ಳುಂಡಿ ಮ್ಯಾಡಂ' 'ನಮಸ್ತೆ ಅಕ್ಕವರ' ಇತ್ಯಾದಿ ವಿವಿಧ ಧನಿಗಳು, ಜತೆಗೆ ಹಿರಿಕಿರಿ ಕಂಠಗಳ ನಗು-'ಸರಿ' 'ಸರಿ' 'ದೇವರು ಒಳ್ಳೆದು ಮಾಡಲಪ್ಪಾ!' ಇತ್ಯಾದಿ).

ಮಕ್ಕಳ ಹಾಡು : ಎಳ್ಳು ಸಕ್ಕರೆ ಕೊಳ್ಳಿರೋ (ರೇ)
ಗೆಳೆಯರೆ! (ಗೆಳತಿಯರೆ!)
ಒಳ್ಳೊಳ್ಳೆ ಮಾತಾಡಿರೋ (ರೇ)
ಸಕ್ಕರೆ ಅಕ್ಕರೆ ಎಳ್ಳಿಗೆ ಸಿಕ್ಕರೆ
ನವಿರೆದ್ದ ಮುಳ್ಳು
ಸಂಕ್ರಾಂತಿಕಾಳು!!
ಎಳ್ಳಿನ ಎಳೆನಯ
ಬೆಲ್ಲದ ಸವಿಪ್ರಿಯ.

# ದೀಪಾವಳಿ

(ರೇಡಿಯೋ ರೂಪಕ)

## ಪಾತ್ರಗಳು

ಮುಕುಂದ : ಅಗಷ್ಟ ಚಳವಳಿಯ ಭೂಗತ ವೀರ.

ಮುರಾರಿ : ಪೋಲೀಸ ಸುಪರಿಂಟೆಂಡೆಂಟ.

ಮೋಹಿನಿ : ಮುರಾರಿಯ ಹೆಂಡತಿ.

ಮುಕ್ತಾ : ಮುರಾರಿಯ ತಂಗಿ.

---

೧೯೪೭ರಲ್ಲಿ ಮುಂಬಯಿಯ ಆಕಾಶವಾಣಿಯಿಂದ ಬಿತ್ತರಿಸಿದ್ದು.

# ದೀಪಾವಳಿ

(ದೀಪಾವಳಿಯ ದಿನ. ರಾತ್ರಿಯ ಪ್ರಥಮ ಯಾಮ. ಮುರಾರಿಯವರ ಮನೆಯ ಹೊರಬಾಗಿಲು ಮುಚ್ಚಿದೆ. ಒಳಗಿನಿಂದ ಮೋಹಿನಿ-ಮುಕ್ತಿಯರ ಕುಲುಕುಲು ನಗುವ ದನಿ. ಜತೆಗೆ ಸಾರಂಗಿಯ ಸಂಗೀತ ನಾದದ ಜತೆ ಹಾಡುವ ಸ್ವರಗಳು. ಅಷ್ಟರಲ್ಲಿ ಹೊರಗಿನಿಂದ ಕದಬಡಿದ ಸದ್ದು. ಆತ ಮುಕುಂದ. ಆತ ಯಾರೆಂದು ಮುಂದೆ ತಾನೇ ತಿಳಿಯುತ್ತದೆ.)

ಮುಕುಂದ: ಹುಶ್‌ಶ್‌ss ಕೊನೆಗೂ ಪಾರಾದೆ!-- ಅದೂ ಎಷ್ಟು ಹೊತ್ತೋ! ಗಸ್ತಿನ ಪೋಲೀಸರ ಕಣ್ಣು ತಪ್ಪಿಸಿದೆ. ಹಣ್ಣು ಹಣ್ಣಾದೆ! ಅಮ್ಮಾ! ಯಾರು ಒಳಗೆ? ಅಯ್ಯೋss. ಕದ ತೆಗೆಯಿರಿ. ಕೊಂಚ ಕದ ತೆಗೆಯಿರಿ. (ಕದ ತಟ್ಟುತ್ತ) ಹೂಂ. ನಡೆದಿದೆ ಸಂಗೀತ! ನಗು! ಸಿರಿಯಸ್ವರ್ಗ! ಸುಖದ ಸುಗ್ಗಿ!- (ಒಳಗೆ ನಗು) ನಗುವಿನ ನಂದನವನ! ಯಾರಮ್ಮಾ! ಬಾಗಿಲ ತೆರೆಯಿರಿ. (ಮತ್ತೆ ಜೋರಾಗಿ ಬಾಗಿಲ ಬಡಿಯುವನು. ನಗು ನಿಲ್ಲುವದು. ಹಾಡು ತಡೆಯುವದು. ಆದರೆ ಸಾರಂಗಿ ಸರಾಗವಾಗಿಯೇ ಸಾಗುವದು. ಒಳಗಿನಿಂದ ಕೋಮಲಕಂಠದ ಚಿಕ್ಕ ಕೂಗು. 'ಯಾರದು?' ಮತ್ತೆ ಕಿರುದನಿಯಲ್ಲಿ ಹಾಡುತ್ತ ಮುಕ್ತಾ ಕಿಡಕಿಯ ಹತ್ತಿರ ಬಂದು ಅದನ್ನು ತೆರೆಯುವಳು. ಸಾರಂಗಿಯ ಸದ್ದು ಇನ್ನು ಸ್ಪಷ್ಟ ಕೇಳಿಸುವದು.)

ಮುಕ್ತಾ: (ದೊಡ್ಡ ದನಿಯಲ್ಲಿ) ಯಾರದು? ಕೂಗುವರು?

ಮುಕುಂ: ಅಮ್ಮಾ ನಾನು ಬಡಪಾಯಿ. ಪರಸ್ಥಳದವ. ರಾತ್ರಿಯಮಟ್ಟಿಗೆ ಜಾಗ ಕೊಡಿ.

ಮೋಹಿನಿ: (ಸಾರಂಗಿ ನಿಲ್ಲಿಸಿ) ಯಾರೇ ಅದು?
ಕನ್ನಡ ಮಾತು!

ಮುಕ್ತಾ: ಯಾರೋ! ಮೋಹಿನೀ, ಪರಸ್ಥಳವಂತೆ ಏನೋ 'ಪಾಯಿ' ಯಂತೆ! (ನಗುವಳು).

ಮೋಹಿನಿ: ಅದಾವ 'ಪಾಯಿ' ಯೊ ಸಿಪಾಯಿಯೋ? ರೂಪಾಯಿಯೋ? (ಇಬ್ಬರೂ ನಗುವರು)

ಮುಕ್ತಾ: ಯಾರೋ ಬಡಪಾಯಿಯಂತೆ! ಈ ರಾತ್ರಿ ಉಳಿಯುವನಂತೆ!

ಮೋಹಿನಿ: ಹೇಗಿದೆ ಪ್ರಾಣಿ?

ಮುಕ್ತಾ: ಪ್ರಾಣಿ? ಅಲ್ಲ ಮನುಷ್ಯನೇ-

ಮುಕುಂ: ಅಮ್ಮಾ! ನನ್ನ ಪಂಚನಾಮೆ ಒಳಗೇ ಆಗಬಾರದೇ? ಇಲ್ಲಿ ನಿಂತು

ನಿಂತು ಕಾಲು ಹೋದವು. ಛೇ, ಹೀಗೆ ಮೋರೆಗೆ ಟೋರ್ಚು ಬಿಡಬೇಡಿರಿ! ಕಣ್ಣು ಹೋದಾವು!

ಮುಕ್ತಾ: ಅವ್ವಯ್ಯ! ಈ ರೂಪ-ಅರೂಪ! ಮೋಹಿನೀ ಈತ ಬಡಪಾಯಿ ಅಲ್ಲ! ಮೊಗಲಾಯಿ! ಮೋರೆತುಂಬ ಗಡ್ಡ. ಸೊಂಟಕ್ಕೆ ಮಾಪಿಳ್ಳೆ ಮುಂಡ! ತಲೆಗೆ ಗೊಂಡೆ ಟೊಪ್ಪಿಗೆ. ಮೈಗೆ ಪಂಜಾಬೀ ನಿಲುವಂಗಿ!

ಮೋಹಿನಿ: ಸಾಕು ವರ್ಣನೆ. ಇದಾವ ಪಂಚರಂಗಿ ಗಿಳಿಯೋ! ತುಸು ನೋಡೋಣ. **(ಕಿಟಕಿಗೆ ಬಂದು ಅನಿಸಿ)** ಅಯ್ಯೋ! ಎಂಥ ಅವಸ್ಥೆ! ಪಾಪ. ಕಣ್ಣಿನ ಕಳೆ ನೋಡು! ಸ್ವಲ್ಪ ನಿಧಾನಿಸಿ, ಸಾಹೇಬರೇ! ಇಗೋ, ಕದ ತೆರೆದೆ. **(ಜಗ್ಗನೆ ಬಾಗಿಲು ತೆರೆದು)** ಬನ್ನಿ. ಒಳಗೆ ಬನ್ನಿ, ಹೀಗೆ ಬನ್ನಿ. ಇಲ್ಲಿ ಕುಳಿತುಕೊಳ್ಳಿ. ನಿಂತಿರೇಕೆ? ಹೀಗೇಕೆ ಕಣ್ಣು ಬಿಡುವಿರಿ! ಅಯ್ಯೋ! ಮುಕ್ತಾ, ಸಾವರಿಸಿ ಹಿಡಿ ಇವರನ್ನು ಮುಗ್ಗರಿಸಿ ಬಿದ್ದಾರು. ಪಾss ಪ! ಎಷ್ಟು ಹೈರಾಣಾಗ್ಯಾರೋ! ಹಾಂss. ಹೀಗೆ ಕೂತಿರಿ. ಮುಕ್ತಾ ನಡೆ ಒಳಗೆ. ಓಡು. ಬಿಸಿ ಬಿಸಿ ಕಾಫಿ ಮಾಡಿ ತಾ! ತಾ, ಲಗೂತಾ! **(ಮುಕ್ತಾ ಗುಣಗುಣಿಸುತ್ತಾ ಹೋಗುವಳು)**

ಮುಕುಂ: **(ಸುತ್ತಲೂ ನೋಡಿ)** ಇದು ಯಾರ ಮನೆ? **(ಗಾಬರಿಯಿಂದ)** ಅಕೊ ಇದು ಮುರಾರಿ! ಈ ಫೋಟೋ ಇಲ್ಲಿ ಹೇಗೆ? ಪೋಲೀಸ --

ಮೋಹಿನಿ: ಹೌದು ಏಕೆ? ಅವರು ಪೋಲೀಸ ಅಧಿಕಾರಿಗಳು ಡಿ.ಎಸ್.ಪಿ.! ಮುರಾರಿಯೇ. ನನ್ನ ಯಜಮಾನರು.

ಮುಕುಂ: ಎಂಥ ಘಾತ! ಹಾ! ನೀನು ನೀ ಮೋಹಿನೀ. **(ಆಕೆಗೆ)** ಮೋss ನೀ! (ಸಲಿಗೆಯಿಂದ ಕರೆಯುವನು. ಅನೀಚ್ಛೆಯಿಂದ)

ಮೋಹಿನಿ: **(ಒಮ್ಮೆಲೇ ಗಾಬರಿ, ಬೆರಗು)** ಇದೇನು! ನನ್ನ ಹೆಸರು. ಇಂಥ ಕರೆ! ಯಾರು? **(ಚೆನ್ನಾಗಿ ದಿಟ್ಟಿಸಿ)** ಮುಕುಂದಾ! ನಮ್ಮ ತವರೂರಿನ ದೇಸಾಯರ ಮಗ ನನ್ನ --

ಮುಕುಂ: ಹೌದು. ನಿನ್ನ ಮುಕುಂದ.

ಮೋಹಿನಿ: ಓ. ಮುಕುಂದರಾಯ--

ಮುಕುಂ: ರಾಯನೂ ಅಲ್ಲ, ದೇಸಾಯನೂ ಅಲ್ಲ. ಎಂದೊ ನಿನ್ನವನಿದ್ದ ಈಗ ದೇಶದ ದಾಸ! ಪೋಲೀಸರಿಗೆ ಗ್ರಾಸ!

ಮೋಹಿನಿ: **(ಬೆರಗು)** ಮುಕುಂದಾ, ಮುಕುಂದಾ ಕಳೆದ ೫ ವರ್ಷ ಎಲ್ಲಿ ಇಲ್ಲವಾದೀ? ಈಗ ಮತ್ತೆ ಎಲ್ಲಿಂದ ಬಂದಿ?.. ಅಂದು ೧೯೪೨ರ ದೀಪಾವಳಿಗೆ ಮಾಯವಾಗಿದ್ದಿ!

ಮುಕುಂ: (ನಗುತ್ತ) ಮತ್ತೆ, ಇಂದು ೪೭ರ ದೀಪಾವಳಿಗೆ ಮೂರ್ತಿ ಮಂತನಾದೆ!

ಮೋಹಿನಿ: ಆದರೆ ದೀಪಾವಳಿಯ ಹಬ್ಬಕ್ಕೆ ಈ ಗಡ್ಡ ಈ ಮೀಸೆ ಈ ಹಗಲುವೇಷವೇಕೆ? ಈ ವೇಷಾಂತರ, ಇಷ್ಟು ಕಾಲದ ದೇಶಾಂತರ! ಅಯ್ಯೋ! ಮತ್ತೇಕೆ ಧೂಮಕೇತುವಂತೆ ಮೂಡಿ ಬಂದೆಯೋ!-ಅಂದಿನ ಆ ಕನಸು ನನ್ನ ನಿನ್ನ ಕೆಳೆಯ ಆ ಹೊಂಗನಸು ಅಂದೇ ಕರಗಿತು. ಅಂದು ೨ ವರ್ಷ ನಿನಗಾಗಿ ಕಾದೆ. (ಅಳುವಿನ ದನಿ) ಹಾ! ಅಯ್ಯೋ! ಮುಕುಂದಾ ಬೆಂದ ಹೆಣವನ್ನು ಮತ್ತೆ ಸುಡಬೇಡ! (ಮಾತಿನೊಂದಿಗೆ ಉದ್ವೇಗ ಹೆಚ್ಚುವದು)

ಮುಕುಂ: (ಶಾಂತ ಗಂಭೀರ) ಇಲ್ಲ ಮೋಹಿನೀ ಇಲ್ಲ. ಆ ಹೆಣ ಬೆಂದು ಎಂದೋ ಬೂದಿ ಆಯಿತು. ನಿನ್ನ ಮದುವೆ ಆಯಿತು. ಒಳಿತೇ ಆಯಿತು. ನನ್ನ ನಿನ್ನ ಮದುವೆಯ ಹೋಮದಲ್ಲಿ ನಿನ್ನ ಆ ಹೊಂಗನಸಿನ ಕೆಳೆಯ ಎಂದೋ ಆಹುತಿಯಾಗಿಬಿಟ್ಟ. ನಿನ್ನ ಅಪ್ಪ ಅಂದು ನಮ್ಮೂರ ಫೌಜದಾರರಾಗಿದ್ದ ಮುರಾರಿಯ ಉಡಿಯಲ್ಲಿ ನಿನ್ನನ್ನು ಇಟ್ಟ. ತನ್ನ ದೇಸಾಯಿ ದೇಸಗತ್ತಿ ಉಳಿಸಿಕೊಂಡ-ರಾಜನಿಷ್ಠನಾಗಿ! ನೀನೂ ಪಾಪ, ನನ್ನ ಜತೆಗೆ ಕೆಂಡ ಹಾಯಲು ಹೆದರಿದೆ. ಹೋಗಲಿ ಅದೆಲ್ಲ ಒಂದು ಕೆಟ್ಟ ಕನಸು! ಅಂದು ಆ ಉದ್ರೇಕದಲ್ಲಿ ನಾನೂ ಪೋಲೀಸ ಕಚೇರಿಗೇ ಬೆಂಕಿ ಇಟ್ಟು ಪರಾರಿ ಆದೆ. ನನ್ನ ಜೀವ ಸಾವಿನ ಉಡಿಯಲ್ಲಿ ಇಟ್ಟೆ! ಈಗ ಆ ಹುಚ್ಚು ನುಚ್ಚು ನೂರಾಗಿದೆ. ವೇಷಾಂತರ ದೇಶಾಂತರಗಳೊಂದಿಗೆ ಈಗ ನನ್ನ ಜನ್ಮಾಂತರವೂ ಆಗಿದೆ! ಇಕೋ ನಿನ್ನ ಕಾಫೀ ಬಂತು.

(ಮುಕ್ತಾ ಕಾಫೀ ಟ್ರೆ ತರುವಾಗ ಮುಕುಂದನನ್ನು ಪೂರ್ತಿ ಕಂಡು ಪರಿಚಯ ಹಿಡಿದು ಸಂಭ್ರಮದಲ್ಲಿ ಕಾಫೀಟ್ರೆ ಕೆಡುಹುತ್ತಾಳೆ!)

ಮೋಹಿನಿ: ಅದೇನು ಮುಕ್ತಾ! ಕಾಫಿ ಟ್ರೆ ಎಲ್ಲ ಹಾಳು ಮಾಡಿಬಿಟ್ಟೆ! (ನಕು) ಮೋರೆ ಏಕೆ ಇಷ್ಟು ಉದ್ದ ಮಾಡುತ್ತೀ? ಇವರು ಮುಕುಂದ ರಾಯರು!

ಮುಕ್ತಾ: (ಹತ್ತಿರ ಬರುತ್ತ) ಮತ್ತೆ ಈ ಗಡ್ಡ ಮೀಸೆ?

ಮುಕುಂ: ಇಕೋ ಈ ಗೊಂಡೆ ಟೊಪ್ಪಿಗೆಯಲ್ಲಿ ಇಟ್ಟೆ-ಭದ್ರವಾಗಿ! (ನಗುತ್ತ ಹಾಗೆ ಮಾಡುವನು) ತಕೊ. ಯಾವನಾದರೂ ಮೊಗಲಾಯಿ ಸಿಪಾಯಿಗೆ ಒಂದು ರೂಪಾಯಿಗೆ ಮಾರಿಬಿಡು. ದಾಂಡಗಾಯಿ ಬೇಡ! (ಎಲ್ಲರೂ ಖೊಳ್ಳನೆ ನಗುವರು)

ಮೋಹಿನಿ: ಮುಕುಂದ, ಈಕೆ ಯಾರು ಗೊತ್ತಾಯಿತೇ? ನಮ್ಮ ಯಜಮಾನರ

ತಂಗಿ! ಮುಕ್ತಾ. ಈಕೆ ನಿನ್ನ ಪುರಾಣ ಕೇಳಿದ್ದಾಳೆ. ಇವಳು ನಿನ್ನ ಆರಾಧಿಕೆ! ನೀನು ಅವಳಿಗೆ ಹೀರೋ!

ಮುಕುಂ: ಆದರೆ ಇಂದು ನಾನು.... She ರೋ! Heರೋ ಅಲ್ಲ. ಬರಿ ಝೀರೊ! (ಗೋಡೆಯ ಮೇಲಿನ ಗಡಿಯಾರ 'ಢಣ್' ಭಾರಿಸುವದು)

ಮುಕ್ತಾ: ಅರೇ! ಎಂಟೂವರೆ! ಅಣ್ಣ ಬರುವ ಹೊತ್ತಾಯಿತು. ಮಧ್ಯಾಹ್ನವೇ ಪೋಲೀಸರ ಕಚೇರಿಗೆ ಹೋಗಿದ್ದ-ಏನೋ ಫೋನ್ ಕರೆ ಬಂದಿತ್ತು

ಮುಕುಂ: ಅಹುದು. ನನಗೂ ಗೊತ್ತು. ಇಷ್ಟು ಕಾಲ ತಲೆತಪ್ಪಿಸಿಕೊಂಡು ತಿರುಗುತ್ತಿದ್ದ ಒಬ್ಬ ಪ್ರಸಿದ್ಧ ಕ್ರಾಂತಿವೀರನೊಬ್ಬ ಇಂದು ನಗರಕ್ಕೆ ಬಂದಿರುವನಂತೆ. ಅವನ ಬೇಟೆಗಾಗಿ ಹೋಗಿದ್ದಾರೆ ನಿಮ್ಮ ಸುಪರಿಂಟೆಂಡೆಂಟ ಸಾಹೇಬರು.

ಮುಕ್ತಾ: ಅರೇ ನಿಮಗೆ ಹೇಗೆ ಗೊತ್ತು! (ನಾಚಿ ನಕು) ಎಂಥ ಹುಚ್ಚಿ ನಾನು ನಿಮ್ಮ ಶೋಧಕ್ಕಾಗಿಯೇ ಅಣ್ಣ ಹೋದದ್ದು!

ಮೋಹಿನಿ: (ಗಾಬರಿಯಾಗಿ) ಅಯ್ಯೋ! ಹಾಗಾದರೆ ಮುಂದೇನು ಗತಿ? ಮುಕುಂದನನ್ನು ಅಡಗೀಸಲೇಬೇಕು! ಏ ಎದ್ದೆ ಏಕೆ?

ಮುಕುಂ: ನಾನು ಹೊರಟೆ. ಮೋನೀ ಅಲ್ಲ (ಆಕೆಗೆ ನಾಚಿಕೆ. ಅವನಿಗೆ ಮುಜುಗರ ಇಬ್ಬರ ನಗು) ಮೋಹಿನೀ. ಬರಿದೆ ಉಡಿಯಲ್ಲಿ ಸಿಡಿಲು ಕಟ್ಟಿಕೊಳ್ಳಬೇಡ. ಮೊ- ಮುಕ್ತಾ, ಇದೆಂಥ ವಿಚಿತ್ರ! ಶತ್ರುಪನಿಂದ ಪಾರಾಗಲು ತೊಳಲಿ ಬಳಲಿ, ಕೊನೆಗೆ ಶತ್ರುವಿನ ಮನೆಯಲ್ಲಿಯೇ ಸಿಕ್ಕಿಬಿದ್ದೆ! (ನಗುತ್ತಾನೆ)

ಮೋಹಿನಿ: ಇದು ನಗುವ ಹೊತ್ತೇ? ಮುಂದೇನು?--

ಮುಕುಂ: ಮುಂದೆ - ಜೈ ಹಿಂದ್! ಮತ್ತೆ ಭೆಟ್ಟಿ ಎಂದೋ!

ಮೋಹಿನಿ: ಅದಾಗದು! (ಓಡಿ ಹೋಗಿ ಬಾಗಿಲು ಧಡಲ್ಲನೆ ಮುಚ್ಚ ಅಲ್ಲಿಂದಲೇ) ನೀನು ಹೋಗಕೂಡದು. ಇಂದು ದೀಪಾವಳಿಯ ರಾತ್ರಿ. ನಾಳಿನ ದಿನವೂ ಇಲ್ಲಿ ಉಳಿಯಬೇಕು. ಭಾವಬಿದಗಿಗೆ ಈ ತಂಗಿಯಿಂದ ಆರತಿ ಮಾಡಿಸಿಕೊಂಡು ಹೋಗಬೇಕು! ಹೊಸ ಅಣ್ಣ-ತಂಗಿಯರ ಹೊಸಭಾವ-ಬಿದಿಗೆ ಆಗಬೇಡವೇ? (ಕಕುಲಾತಿಯಿಂದ)

ಮುಕುಂ: ಮೋನೀ! ಎಂಥ ಅದ್ಭುತ ಹೆಣ್ಣೇ ನೀನು! ಕೆಳದಿಯಾಗಲು ಬಂದವಳು ಇಂದು ತಂಗಿಯಾದೆ! ನನ್ನ ಪುಣ್ಯ ಹಿರಿದಿದ್ದರೆ ಪುನರ್ಜನ್ಮ ನಿಜವಿದ್ದರೆ, ಮೋಹಿನೀ, ನೀನೇ ನನ್ನ ತಾಯಿ ಆಗುತ್ತೀಯೇ! ನೀನು ದೇವತೆ, ಮೋಹಿನೀ! ದೇವತೆ. ಆದರ

ಮುರಾರಿ ಮನುಷ್ಯ! ನನ್ನನ್ನು ಕಂಡರೆ ಕನಲಿ ಕೆರಳಿ ದೈತ್ಯನೇ ಆಗುವ! ನನ್ನನ್ನು ಇಲ್ಲಿ ಕಂಡರಂತೂ ಹುಚ್ಚು ನಾಯಿಯಾಗಿ ಗುಂಡಿಕ್ಕಿ ಕೊಲ್ಲಬಹುದು! ನಿನ್ನ ಹಟ ಬೇಡ. ಮುದ್ದೂ, ಮೊಂಡ ಹಟ ತರವಲ್ಲ. ನನ್ನನ್ನು ಹೋಗಲು ಬಿಡು ಮೋಹಿನೀ-ಮೋನಿ!

ಮುಕ್ತಾ: ಅದಾಗದು, ಆಗದು! ಮೋಹಿನೀ ಬಾಗಿಲು ಬಿಡಬೇಡ. ಅಣ್ಣ ಬರಲಿ. ಏನಾಗುವದೋ ನೋಡುವಾ. ನಿಮಗಾಗಿ ಅವನ ಗುಂಡಿಗೆ ನಾನು ಎದೆ ಕೊಡುತ್ತೇನೆ. ಇಂದು ಸ್ವರಾಜ್ಯ. ನಾನು ಸ್ವರಾಜ್ಯದ ನವಯುಗದ ಯುವತಿ. ನೀವು ಸ್ವರಾಜ್ಯ ಗಳಿಸಿ ತಂದ ಶೂರಯೋಧ. ಅಣ್ಣ ಈ ಸ್ವರಾಜ್ಯದ ನಮ್ಮ ನಿಮ್ಮ ಸೇವಕ!: ಬರಲಿ ನೋಡುವಾ! (**ಹೊರಗೆ ದೂರದಿಂದ ಬರುವ ಕಾರಿನ ಸದ್ದು. ಕಾರು ಕಿರುಚುತ್ತ ಬಂದು ಮನೆಯ ಮುಂದೆ ನಿಲ್ಲುವ ಸಪ್ಪಳ**).

ಮುಕ್ತಾ: ಅದೋ! ಅಣ್ಣ ಬಂದೇ ಬಿಟ್ಟ! (**ಧಡಧಡ ಬೂಟು ಪಾವಟಗೆ ಏರಿ ಬಂದು ಕದ ಬಡಿಯುವ ಸದ್ದು**)

ಮುರಾರಿ: (**ಹೊರಗಿನಿಂದ**) ಮುಕ್ತಾ! ಮೋಹಿನೀ! ಬಾಗಿಲು ತೆರೆಯಿರಿ. (**ಒಳಗೆ ಬಂದು**) ಇದೇನು? ಹೀss ಗೋ! ಸರಿ. ನಾಟಕ ಒಳ್ಳೇ ರಂಗೇರಿದೆ. ಮುಕುಂದಾ! ಅಪರಾಧಿಗೆ ಅಡಗಿರಲು ಪೋಲೀಸ ಅಧಿಕಾರಿಯ ಮನೆಯೇ ಯೋಗ್ಯ! ಹ:! ಮೋಹಿನೀ (**ಬಿರುಸಾಗಿ**) ಇದೇನು ಮೋಸ! ನಾನಿಲ್ಲದಾಗ ಈ ಮುಕುಂದನೊಡನೆ (**ಛಳಿರ್‌ನೆ ಅವಳ ಗಲ್ಲಕ್ಕೆ ಹೊಡೆಯುವನು. 'ಮೋಹಿನೀ ಅಯ್ಯೋ!' ಎಂದು ಮುಗ್ಗರಿಸುವಳು. ಆಗ ಮೇಜು ಮೊಗಚಿ ಬೀಳುವದು.**)

ಮುಕ್ತಾ: (**ಹಿಡಿಯಲು ಧಾವಿಸಿ**) ಅಣ್ಣಾss! ಏನಿದು ಹುಚ್ಚಾಟ ನಾಚಿಕೆಗೇಡು! ಮೋಹಿನೀ! ಮೋಹಿನೀ!

ಮುಕುಂ: (**ಮಮತೆ, ಗಾಬರಿ**) ಮೋss ನೀ!

ಮೋಹಿನಿ: ನಿಲ್ಲಿ! ನಿಲ್ಲಿ! ನನಗೇನೂ ಆಗಿಲ್ಲ!

ಮುಕ್ತಾ: ಏ ಅಣ್ಣಾ! ಮನೆ ಹೊರೆಗೆ ದಿಕ್ಕಿಲ್ಲದೆ ದಣಿದು ನಿಂತ ಇವರನ್ನು ನಾನೇ ಕನಿಕರ ಪಟ್ಟು ಒಳಗೆ ಕರೆದುಕೊಂಡೆ. ಆಗ ಅವರ ರೂಪವೇ ಬೇರೆ ಇತ್ತು!

ಮುರಾರಿ: ಮುಕುಂದರಾವ್! ಇದರ ಸ್ಪಷ್ಟೀಕರಣ?

ಮುಕುಂದ: ಮತ್ತೇನು ಸ್ಪಷ್ಟೀಕರಣ? ಬೆಳಕು ನೋಡಲು ದೀಪ ಬೇಕೆ?

ಮುರಾರಿ: ಸರಳಮಾತಿಗೆ ಅಲಂಕಾರ ಬೇಕೇ?

ಮುಕುಂ: (ನಕು) ಕಾಣದವರಷ್ಟು ಕುರುಡರು ಇನ್ನಾರು? ಮುರಾರಿ ಸಾಹೇಬ. ನೀವು ಸಶಸ್ತ್ರ ಸಿಪಾಯರೊಂದಿಗೆ ನನಗಾಗಿ ಹುಡುಕಾಡುವದು ನನಗೆ ಗೊತ್ತು. ಆದರೂ ನಗರಕ್ಕೆ ಬಂದೆ ಏಕೆ? ನಿಮ್ಮ ಕೈಸೇರಲಿಕ್ಕೆ ಅಲ್ಲ. ಇಂದು ದೀಪಾವಳಿ ಸ್ವತಂತ್ರ ಭಾರತದ ಮೊದನೆಯ ದೀಪಾವಳಿ. ಇಂದು ಈ ಶುಭ ದಿನಕ್ಕೆ ನಮ್ಮ ಭೂಗತರ ಮೇಲಿನ ಹಳೆಯ ವಾರಂಟುಗಳನ್ನೆಲ್ಲ ನಮ್ಮ ರಾಷ್ಟ್ರೀಯ ಸರಕಾರವು ಹಿಂದೆಗೆದು ಕೊಳ್ಳುವದೆಂದು ನನ್ನ ನಿಮ್ಮಂಥ ಗುಪ್ತ ಅಧಿಕಾರಿ ಮಿತ್ರರಿಂದಲೆ ನನಗೆ ತಿಳಿಯಿತು. ಆದ್ದರಿಂದಲೇ ಹೊರಬಂದೆ! ಸಕಾಲಕ್ಕೆ ಸಾರ್ವಜನಿಕ ವಾಗಿಯೇ ಪ್ರಕಟವಾಗಲಿದ್ದೆ. ಆದರೆ ನಡುವೆ ನಿಮ್ಮ ಸಿಬ್ಬಂದಿಗಳ ಬೇಟೆಯಿಂದ ಪಾರಾಗುವ ಭರದಲ್ಲಿ ಇಲ್ಲಿ ...

ಮುರಾರಿ: (ವ್ಯಂಗ್ಯವಾಗಿ) ಹೌದು, ಇಲ್ಲಿ ಮೋಹಿನಿಯ ಮೋಹದಲ್ಲಿ ಬಂದು ಬಿದ್ದಿ?.. ೫ ವರ್ಷ ಹಿಂದೆ ತಲೆತಿರುಗಿ ಕ್ರಾಂತಿಕಾರಿ ಯಾದೆ! ನಿನ್ನ ಮದುವೆ ತಪ್ಪಿ, ಮೋಹಿನಿ ನನ್ನ ಪ್ರಿಯ ಳಾದವಳು. ನನ್ನ ವಧುವಾದಳು. ಅದರ ಹೊಟ್ಟೆಯುರಿ! –

ಮುಕ್ತಾ: ಬಾಯಿ ಮುಚ್ಚು. ಆ ಹೊಟ್ಟೆಯುರಿಕಾರಬೇಡ. ನಿನ್ನ ಮೋಹಿನಿ ನಿನ್ನವಳೇ ಇದ್ದಾಳೆ. ಅವಳು ಸಭ್ಯಳು ಪರಮಸಾಧ್ವೀ-ಒಬ್ಬ ಪೋಲೀಸನ ಹೆಂಡತಿಯಾದರೇನಾಯಿತು?

ಮೋಹಿನಿ: ಸಾಕು. ಸುಮ್ಮನಿರು! ರಾಯರೇ, ಮುಕುಂದ ಹೊರಟು ಹೋಗುವ ಹಟ ಹಿಡಿದಿದ್ದರು. ಅವರಿಗೆ ಇದು ತಮ್ಮ ಮನೆಯೆಂದು ಒಳಗೆ ಬಂದಾಗ ತಿಳಿಯಿತು!

ಮುಕ್ತಾ: ಹೌದು ಸುಪರಿಂಟೆಂಡೆಂಟ ಸಾಹೇಬರೇ? ಮೋಹಿನಿ ಹಟ ಹಿಡಿದಳು. ನಾಳೆ ಭಾವ ಬಿದಿಗೆಯ ಆರತಿ ಎತ್ತಿಕೊಂಡೇ ಹೋಗೆಂದು ಆಗ್ರಹ ಮಾಡಿದಳು. ಬಾಗಿಲು ತೆರೆಯಲೇ ಇಲ್ಲ. ಅಷ್ಟರಲ್ಲಿ ತಮ್ಮ ಶುಭಾಗಮನವಾಯಿತು. ಅಣ್ಣಾ (ದನಿಏರಿಸಿ) ಉರಿಯೆಂಬುದು ನಿನ್ನ ಈ ಬೆಲ್ಟಿನಡಿಗೆ! ನಿನ್ನ ಹೊಟ್ಟೆಯಲ್ಲಿ. ಮೋಹವೋ ದ್ರೋಹವೋ ನಿನಗಾಗಿದೆ. ಅಲ್ಲಿ ಆ ನಿಲುಗನ್ನಡಿಯಲ್ಲಿ ನೋಡು. ನಿನ್ನ ಮೋರೆ ಹೇಗೆ ಕಪ್ಪಿಟ್ಟಿದೆ ಎಂದು! ನನಗೂ ಗೊತ್ತು.

ಮುರಾರಿ: (ಗೊರಗುಡುತ್ತ) ಏನು ಗೊತ್ತು?

ಮುಕ್ತಾ: ಮುಕುಂದರನ್ನು ಹಿಡಿದು ಕೊಟ್ಟವರಿಗೆ ೫೦೦೦ ರೂ. ಬಹುಮಾನವಿದೆ! ಅದಕ್ಕಾಗಿ ಬಾಯ್ಬಿಡುತ್ತಿರುವಿ. ಮತ್ತೇನು? ಮುಕುಂದರಾವ್, ಒಂದು ದೀಪಾವಳಿಯ ಉಡುಗೊರೆ ೫೦೦೦

ರೂ. ಯ ವಜ್ರದುಂಗುರ. ಹೆಂಡತಿಗೆ ಈ ಗಂಡಂದಿರ Promise!

ಮುಕುಂದ: ಹೌದೇ! ಹಾಗಾದರೆ ಆ ವಜ್ರದುಂಗುರಕ್ಕೆ ನಾನು ಮಾರಿಕೊಂಡೆ! ಮುರಾರಿರಾವ್. ಕೈದು ಮಾಡಿರಿ ನನ್ನನ್ನು, ನಾಳಿನ ಭಾವಬಿದಿಗೆಗೆ ನನ್ನ ತಂಗಿಗೆ ೫೦೦೦ ರೂ.ಗೆ ಆ ಉಡುಗೊರೆ ತೆಗೆಸಿಕೊಡಿ. ಮೋನೀ ದೇಶಭಕ್ತರ ದೀಪಾವಳಿ. ಭಾವಬಿದಿಗೆ ಆಗಷ್ಟ ೧೫ಕ್ಕೇ ಮುಗಿಯಿತು! ೧೪ನೆಯ ರಾತ್ರಿಯೇ ದಾಸ್ಯದ ನರಕ ಚತುರ್ದಶಿಯ ಕೊನೆಯ ರಾತ್ರಿಯಾಯಿತು. ಇಂದು ನಿನ್ನ ಕಂಬನಿಗಳಲ್ಲಿ ಹೊಳೆದ ಮಮತೆಯ ಮಂಗಳಾರತಿಯೇ ಸಾಕು ನನಗೆ!

**(ಈ ನಡುವೆ ಮುಕ್ತಾ ರೇಡಿಯೋ ಸರಿಪಡಿಸಿ ಇಡುವಳು. ಅದರಲ್ಲಿ ದಿನದ ವಾರ್ತೆ ಕೇಳಿ ಬರುವದು.)**

"ಕೇಂದ್ರ ಸರಕಾರದ ಗೃಹ ಮಂತ್ರಿಗಳು ಭಾಯಿ ಮುಕುಂದ ದೇಸಾಯಿಯವರ ಮೇಲಿನ ಎಲ್ಲ ಹಳೆಯ ವಾರಂಟುಗಳನ್ನು ಹಿಂದೆಗೆದು ಆಜ್ಞೆ ಹೊರಡಿಸಿದ್ದಾರೆ. ನಗರ ಕಾಂಗ್ರೆಸ್ ಸಭೆಯು ಸ್ವಾತಂತ್ರ್ಯ ಸೇನಾನಿ ಮುಕುಂದ ದೇಸಾಯರ ಪ್ರಚಂಡ ಸ್ವಾಗತ ಮಾಡಲು ಇಂದು ರಾತ್ರಿ ದೀಪೋತ್ಸವದ ಭವ್ಯ ಮೆರವಣಿಗೆ ಹೊರಡಿಸುವದು. ಅದಕ್ಕಾಗಿ ಆಝಾದ ಮೈದಾನಿನಲ್ಲಿ ಸಮಸ್ತ ನಾಗರಿಕರು ಹಾಜರು ಇರಬೇಕಾಗಿ ವಿಜ್ಞಾಪನೆ!, ಮಾತು ಮುಗಿದೊಡನೆ ಕಹಳೆಯ ಮೊಳಗು.

ಮುಕ್ತಾ: **(ಚಪ್ಪಾಳೆ ತಟ್ಟುತ್ತ)** 'ಸ್ವಾತಂತ್ರ್ಯ ವೀರ ಶ್ರೀ ಮುಕುಂದ ದೇಸಾಯಕೀ ಜೈ! **(ಮೋಹಿನಿಯೂ ಜೈಕಾರದಲ್ಲಿ ದನಿಗೂಡಿಸುವಳು ಗಲ್ಲ ಒರಿಸಿಕೊಳ್ಳುತ್ತ)**

ಮುರಾರಿ: ತಡೆ ಮೋನೀ. ನಾನೇ ಒರಿಸುತ್ತೇನೆ ಗಲ್ಲ. (ಒರಿಸಿ) ಮೋನೀ ನನ್ನನ್ನು ಕ್ಷಮಿಸು. ನಾನು ಮೂರ್ಖ, ಅಲ್ಲ ಪಾಪಿ!

ಮುಕ್ತಾ: **(ಓಡಿ ಬಂದು ಅಪ್ಪಿಕೊಂಡು)** ಅಲ್ಲ ನನ್ನ ಮುದ್ದಿನ ಮೊದ್ದ ಅಣ್ಣ!

ಮುರಾರಿ: ಮುಕುಂದ, ನನ್ನನ್ನು ಕ್ಷಮಿಸಿರಿ.

ಮುಕುಂದ: ಛೇ ಛೇ. ಈ ಬಹುವಚನ ಬೇಕೆ? ನೀವು ಮಾದರಿಯ ಅಧಿಕಾರಿಗಳು. ಕೊನೆಯುಗಳಿಗೆಯುವರೆಗೂ ನಿಮ್ಮ ಡ್ಯೂಟಿ ಮಾಡಿದಿರಿ! ನಿಮಗೆ ಅಲ್ಲ. ನಿನಗೆ ನನ್ನ ಧನ್ಯವಾದಗಳು.

ಮೋಹಿನಿ: ಮುಕುಂದಾ, ನೀವೀಗ ಸ್ವತಂತ್ರರು. **(ಗಂಡನಿಗೆ)** ಕೇಳಿದಿರಾ, ಇನ್ನಾದರೂ...

ಮುರಾರಿ: ನಾ ಅಪರಾಧಿ! ಅಧಿಕಾರದ ದರ್ಪ, ಇನಾಮಿನ ಅಭಿಲಾಷೆ! ಮತ್ತು ..

ಮುಕ್ತಾ: ಮತ್ತೂ ಹಳೆಯ ಹೊಟ್ಟೆಕಿಚ್ಚು ನಮ್ಮ ಅಣ್ಣನ ತಲೆ ಕೆಡಸಿದ್ದವು.

ಮುಕುಂದ: ಆದರೆ ಅದೆಲ್ಲ ಈಗ ಕಳೆದು ಮರೆತು ಹೋಯಿತು! ಮುರಾರಿ ಇನ್ನು ಮೋಹಿನಿಯ ಕ್ಷಮೆ ಬೇಡಿ. ಅವಳ ಕೆನ್ನೆ .

ಮುರಾರಿ: . . . ಒರಿಸುವದೇಕೆ? ಮುದ್ದಿಸುತ್ತೇನೆ!

ಮೋಹಿನಿ: (ನಾಚಿ) ಛೇ ಛೇ. ಇಲ್ಲಿ ಬೇಡ ಆಮೇಲೆ! ಮುಕುಂದಾ ಅಕೋ ಕೇಳು ಮೆರವಣಿಗೆಯ ಜಯಘೋಷ! ನಡೆ, ನಾವೆಲ್ಲ ಹೋಗೋಣ.

ಮುಕುಂದ: ಎಂಥ ಜಯಘೋಷ! ಸಂತೋಷ!

ಮುರಾರಿ: ಮುಕುಂದ! ನಿಮ್ಮ ಭಾಗ್ಯ ದೊಡ್ಡದು!

ಮುಕುಂದ: ನನ್ನದಲ್ಲ ನಮ್ಮೆಲ್ಲರ ಭಾಗ್ಯ - ಇನ್ನೂ ದೊಡ್ಡದಾಗಬೇಕು! ಇದು ದೇಶದ ಭಾಗ್ಯ! ಇಡಿಯ ಪ್ರಪಂಚದ ಭಾಗ್ಯ! ವಿಶ್ವ ವಿಜಯ ಕರಕೇ ದಿಖಲಾಯೇಂ!

ಮುಕ್ತಾ: ತಬ ಹೋವೇ ಪ್ರಣ ಪೂರ್ಣ ಹಮಾರಾ!

ಎಲ್ಲರೂ: ಝೇಂಡಾ ಊಂಚಾ ರಹೇ ಹಮಾರಾ!
ವಿಜಯೀ ವಿಶ್ವ ತಿ ರಂಗಾ ಪ್ಯಾರಾ!

ಮುಕುಂದ: (ಗಂಭೀರ) ಈ ಉತ್ಸವ, ಈ ಜೈ ಜೈಕಾರ! ಎಲ್ಲ ಮರಳು! ಜಾತ್ರೆ ಮರಳು. ಹೊಟ್ಟೆಗೆ ಕಲ್ಲು, ಬೆನ್ನಿಗೆ ಚೂರಿ, ತಲೆಗೆ ಲಾಠೀ, ಕೈಗೆ ರಕ್ತ. ಸುಲಿಗೆ, ಸಾವು ಹಿಂಸೆಗಳ ಬೇತಾಳ ಇನ್ನೂ ಬತ್ತಲೆ ಕುಣಿದಾಡುತ್ತಿವೆ. ಹಾನಿ, ಹಿಂಸೆ, ಹತಾಶೆ, ಹಾಹಾಕಾರ ಇವುಗಳ ಭೈರವ ಯಾತ್ರೆ ನಡೆದಿದೆ. ಇಂಥ ಒಂದು ಉತ್ಸವ ಒಮ್ಮೆಯ ಉತ್ಸಾಹಗಳಿಂದ ಏನಾಗುವದು? ಎಲ್ಲಿದೆ ಸ್ವಾತಂತ್ರ್ಯ? ಯಾರಿಗೆ ಸ್ವಾತಂತ್ರ್ಯ? ಯಾಕೆ ಈ ಉತ್ಸವ? ನಾಡಿನ ನಾಡಿನಾಡಿಗಳಲ್ಲಿ ಕ್ರಾಂತಿಯ ಕೆಮ್ಮಿಂಚು ಹರಿದಾಡಬೇಕು, ಉರಿದಾಡಬೇಕು. ನೆತ್ತರದ ಹನಿಹನಿಯೂ ಕುಡಿಯಾಗಿ ಅರಳಬೇಕು. ಕಿಡಿಯಾಗಿ ಬುಗಿಲೇಳಬೇಕು. ಮನೆಮನೆಯಲ್ಲಿ ಜಾಗ್ರತಿಯ ಜೀವಜ್ಯೋತಿ ಬೆಳಗಬೇಕು! ಅದೇ ದಿವ್ಯ ದೀಪಾವಳಿ! ಅಲ್ಲಿಯತನಕ ಇದೆಲ್ಲ ಉತ್ಸವ ಸಂಭ್ರಮ. ಒಣ ದೀಪೋತ್ಸವ. ಮಧ್ದಿನ ಮನೆಗಳ ನಡುವೆ

ಕೊಳ್ಳಿ ಎತ್ತಿ ಕುಣಿದಾಡುವ ಕೋತಿಗಳ ಕೋಲಾಹಲ. - ಇರಲಿ. ಮುಕ್ತಾ! ಆಗ ಅಂದಂತೆ ಹಾಡು ಕೇಳಿಸುವಿಯಾ? ಕಾಫಿಯಂತೂ ಆರಿ ಹೋಯಿತು!

ೋಹಿನಿ: (ನಕ್ಕು) ಆದರೇನು ಮಾಫಿ ಸಿಕ್ಕಿತ್ತಲ್ಲ! ಮುಕ್ತಾ! ನೀನು ಹಾಡು ದೀಪಾವಳಿಯ ಹಾಡು. ನಾನು ಕಾಫೀ ಮಾಡಿ ತರುತ್ತೇನೆ. ನಮ್ಮ ಸಾಹೇಬರಿಗೂ ಕೊಡೋಣ! **(ಮುರಾರಿಯನ್ನು ಹುಸಿಮುನಿಸಿನಿಂದ ನೋಡುತ್ತಾಳೆ. ಎಲ್ಲರೂ ನಗುತ್ತಾರ. ಆತ ಹೊಡೆಯುವಂತೆ ಕೈ ಎತ್ತುತ್ತಾನೆ. ಆಕೆ ಒಳಗೆ ಓಡುತ್ತಾಳೆ.)**

# 'ಮೀರಾ ಕೆ ಪ್ರಭು'

(ಏಕಾಂಕ)

## ಪಾತ್ರಗಳು

| | | |
|---|---|---|
| ಮೀರಾ (ರಾಣಿ) | : | ಕೃಷ್ಣನ ಭಕ್ತಳು. |
| ಪನ್ನಾ | : | ಮೀರಾಳ ದಾಸಿ |
| ಉಮಾದೇವಿ | : | ಮೀರಾಳ ನಾದಿನಿ |
| ಮೈನಾ | : | ಉಮಾಳ ದಾಸಿ |

# 'ಮೀರಾ ಕೆ ಪ್ರಭು'

**(ಮೀರಾ ರಾಣಿಯ ಮಂದಿರ. ಶ್ರೀ ಕೃಷ್ಣನ ಪ್ರತಿಮೆ-ಪೀಠದ ಮೇಲೆ. ಕೆಳಗೆ ಪೂಜಾ ಸಾಹಿತ್ಯ ದೀಪೋಪಕರಣ ಇತ್ಯಾದಿ. ಎಡಬಲಕ್ಕೆ ತುಸು ಮುಂದೆ ಆಸನಗಳು. ಪನ್ನಾ (ಪರಿಚಾರಿಕೆ) ದೇವರ ಉಪಕರಣಗಳನ್ನು ಸಜ್ಜುಗೊಳಿಸುತ್ತಿರುವಳು. ಹರಡಿದವುಗಳನ್ನು ಸರಿಪಡಿಸುತ್ತಿರುವಳು. ಸಂಭ್ರಮದಿಂದ ಮೀರಾ ದೇವಿಯ ಪ್ರವೇಶ.-)**

ಮೀರಾ: ಪನ್ನಾ, ಪನ್ನಾ, **(ಪನ್ನಾ ಎದ್ದು ನಿಲ್ಲುವಳು)** ಕಂಡೆಯಾ ನನ್ನ ಗಿರಿಧಾರಿಯ ಅದ್ಭುತ ಲೀಲೆ!

ಪನ್ನಾ: **(ಮುಂದೆ ಬಂದು)** ಅದೇನು ದೇವಿಯವರೇ? ನಾನು ಇದೀಗ ಬಂದೆ. ಈ ಪೂಜಾ ಸಾಮಾನು ಸಜ್ಜುಗೊಳಿಸುವದಿತ್ತು! - ಏನೋ ಕೋಲಾಹಲ ಕೇಳಿದೆ. ದೇವಿಯವರ ಭಜನೆ ಫಕ್ಕನೆ ನಿಂತಿತು! ಇಲ್ಲಿ ನೋಡಿದರೆ ಯಾರೂ ಇಲ್ಲ!

ಮೀರಾ: ಹೌದು. ನಿಲ್ಲದೇ ಏನಾದೀತು? ಇಂದು ನಮ್ಮ ಭಜನೆಗೆ ಇಬ್ಬರು ವಿಶೇಷ ಸಾಧುಗಳು ಬಂದಿದ್ದರು!

ಪನ್ನಾ: ಓ. ಆ ಗಡ್ಡ ಮೀಸೆಗಳ ಗೋಸಾವಿಗಳೇ? ಆದರೆ ಅವರೇಕೆ ಹಾಗೆ ಓಡುತಿದ್ದರು. ರಾಜಭಟರು ಅವರನ್ನು ಬೆನ್ನಟ್ಟುತ್ತಿದ್ದರು! ನಾನೇ ಬರುವಾಗ ಕಂಡೆ. ತಮ್ಮನ್ನು ಕೇಳಬೇಕೆಂದಿದ್ದೆ.

ಮೀರಾ: ಹೌದು, ಅವರೇ. ಆದರೆ ಇದೇನು ಪನ್ನಾ? ಮತ್ತೆ ಶುರುಮಾಡಿದಿ-ತಾವು ತಮ್ಮ ಹೇಳಲಿಕ್ಕೆ? ನಾನೂ ನೀನೂ ಎಲ್ಲರೂ ಒಂದೇ - ಈ ಕೃಷ್ಣ ಕನಯ್ಯನ ದಾಸಿಯರು. ನನಗೆ 'ನೀನು' ಎಂದು ಕರಿ.

ಪನ್ನಾ: ಛೇ ಹೋಗಿರಿ. ನಾನೊಲ್ಲೆ. ನನ್ನ ದೇವಿಯವರಿಗೆ 'ನೀನು ಅನ್ನಲೆ?' 'ನೀವು' ಅನ್ನುವೆ. ಅಕ್ಕನಿಗೆ ನೀವು ಅನ್ನಬೇಕು! **(ಮೀರಾ ಅವಳನ್ನು ಅಪ್ಪಿ ಹಿಡಿಯುವಳು, ಮಮತೆಯಿಂದ)**

ಮೀರಾ: ಆಯ್ತು ಮರಾಯ್ತೀ. ಆದರೆ ತಾವು-ತಮ್ಮ ಅನ್ನಬೇಡ!

ಪನ್ನಾ: ಅದೆಲ್ಲ ಇರಲಿ ಮುಂದೇನಾಯಿತು?

ಮೀರಾ: ಹೌದು ನೀ ಕಂಡದ್ದು ಸರಿ. ಪಾಪ, ಆ ಬಡ ಬೈರಾಗಿಗಳನ್ನು ಅಟ್ಟಿಕೊಂಡು ಹೋದರು. ಆ ಹುಂಬರು! ದೇವರೇ **(ಕಣ್ಣು ಮುಚ್ಚಿ ಕೈಜೋಡಿಸಿ)** ಅವರನ್ನು ನೀನೇ ಪಾರು ಮಾಡಪ್ಪ! ಕೃಷ್ಣಕನಯ್ಯಾ! ದಿಕ್ಕಿಲ್ಲದವರಿಗೆ ನೀನೇ ಗತಿ!

ಪನ್ನಾ: ಅವರು ಯಾರು?

ಮೀರಾ: ಯಾರಾದರೇನು? ನನ್ನ ಕೃಷ್ಣನ ದರ್ಶನಕ್ಕೆ ಬಂದರು. ನನ್ನ ಭಜನೆ ಕೇಳಿದರು! ಸಂತೋಷ ಪಟ್ಟು ಹೋದರು!

ಪನ್ನಾ: ಅಷ್ಟೇ ಅಲ್ಲ, ದೇವಿಯವರೇ! ಇಕೋ ನೋಡಿ, ರತ್ನಹಾರವನಿಟ್ಟು ಹೋಗಿದ್ದಾರೆ. ನಿಮ್ಮ ದೇವರಿಗೆ!

ಮೀರಾ: ನಮ್ಮ ದೇವರನ್ನು, ಹುಚ್ಚೀ! ನಾನು ಬೇಡಬೇಡವೆಂದು ಸಾರಿ ಹೇಳಿದೆ. ಆದರೆ ಅವರು ಕೇಳಲಿಲ್ಲ. ಗಿರಿಧಾರಿಯ ಪೀಠದ ಮೇಲೆ ಈ ಹಾರ ಇಟ್ಟು ಹೋದರು.

ಪನ್ನಾ: ಆದರೆ ಇಂಥ ರತ್ನಹಾರ ಈ ಗೋಸಾವಿಗಳ ಹತ್ತಿರ ಹೇಗೆ?

ಮೀರಾ: ದೇವರು ಕೊಟ್ಟಿದ್ದು ದೇವರಿಗೇ ಸಲ್ಲಬೇಕು ಅಂದರು! ಹಾರ ಅವರಿಗೆ ಗಂಗಾಸ್ನಾನ ಮಾಡುವಾಗ ಸಿಕ್ಕಿತಂತೆ. ಪ್ರವಾಹದಲ್ಲಿ ತೇಲಿ ಬಂತಂತೆ! ಎಲ್ಲವೂ ಅದ್ಭುತ. ಕೃಷ್ಣನ ಮಾಯೆ! ಮಹಿಮೆ!

ಪನ್ನಾ: ಸರಿ. ಮಹಾತ್ಮರ ಕಾಣಿಕೆ! ಆದರೆ-

ಮೀರಾ: ಮತ್ತೇನು 'ಆದರೆ'?

ಪನ್ನಾ: ಭಜನೆಗೆ ಕೂತಾಗ ಕೇಳಿದೆ - ಅವರಲ್ಲಿ ಒಬ್ಬ ನಿಮ್ಮ ಹಾಡಿನ ಇಂಪಿಗೆ ಒಮ್ಮೆಲೇ 'ಯಾ ಅಲ್ಲಾ! ಸುಭಾನ್ ಅಲ್ಲಾ!' ಎಂದು ಕೂಗಿದಾ. ಇನ್ನೊಬ್ಬ 'ಶಾಭಾಸ್!' ಎಂದು ತೊಡೆ ತಟ್ಟಿಕೊಂಡ!

ಮೀರಾ: ಹೌದೇ? ನಾನು ಭಜನೆಯಲ್ಲಿ ತಲ್ಲೀನಳಾಗಿದ್ದೆ. ಆದರೆ ಹಾಗೆ ಕೂಗಿದರೇನು ಬಂತು? ಅವರು ಉತ್ತರ ಕಡೆಯವರಿರಬೇಕು. ದೇವರನ್ನು ಅಲ್ಲಾ ಅಂದರೇನು. ನಾನು ಕನಯ್ಯಾ ಎಂದು ಕರೆದರೇನು? ನಮ್ಮ ರಾಣಾರಿಗೆ ಆತ ಏಕಲಿಂಗಜೀ-ಶಿವಶಂಕರ! ಎಲ್ಲಾ ಒಂದೇ.

ಪನ್ನಾ: ಹೌದು, ದೇವಿ. ಇಂದು ಆಗ... ಲಿಂಗಜೀಯ. ಭಜನೆಯನ್ನೇ ಹಾಡುತಿದ್ದಿರಲ್ಲ - ಗೋಸಾವಿಗಳು ಬಂದಾಗ!

ಮೀರಾ: ಹೌದು. ಇಂದು ಸೋಮವಾರ! ಶಿವನವಾರ. ಬಾ ಅದನ್ನೆ ಮತ್ತೆ ಹಾಡುವಾ? ಬೋಲಾನಾಥ ದಿಗಂಬರ ಇಹದುಖ ಮೇರಾ ಹರೋರೆ (ಈ ಮೀರಾ ಭಜನೆ ಇಬ್ಬರೂ ಹಾಡುತ್ತಿ ರುವರು. ಅಷ್ಟರಲ್ಲಿ ಉಮಾದೇವಿ ಮೀರಾಳ ನಾದಿನಿ ಮತ್ತು ಆಕೆಯ ದಾಸಿ ಮೈನಾಳ ಪ್ರವೇಶ).

ಮಾ: (ಆರ್ಭಾಟಿಸಿ) ಸಾಕು! ಸಾಕು! ನಿಲ್ಲಿಸು ಈ ಭಂಡಾಟ. ಭಜನೆಯಂತೆ ಭಜನೆ! ಆ ದೇವರು ಭೋಳೆ ಎಂತ ನಾವು ಭೋಳೆ ಅಲ್ಲ!

ೀರಾ: (ಚಕಿತಳಾಗಿ ಮೆಲ್ಲನೆ ಎದ್ದು) ಇದೇನು? ಉಮಾದೇವೀ. ಇದೇನು ಆಟೋಪಾ! ಏನಾಯಿತು, ಏನಾಯಿತು?

ಮಾ: ಏನಾಯಿತಂತೆ! ಇನ್ನೇನು ಆಗುವದಿದೆ? ನಿನ್ನ ಇಂಥ ನಾಚಿಕಗೇಡಿ ಭಂಡಾಟದಲ್ಲಿ ಇನ್ನು ಏನೇನು ಆಗುವದಿದೆಯೋ! ಆ ಏಕಲಿಂಗಜೀಗೇ ಗೊತ್ತು! ಇವನೂ ಭೋಳಾನಾಥ. ಮೈನಾ ಹೇಳು. ಈ ನಮ್ಮ ನಾಚಿಗೆ ಬಿಟ್ಟ ನಾದಿನಿಗೆ ಏನಾಯಿತೆಂದು!

ೈನಾ: ದೇವಿಯವರೇ ಕಂಡಿದ್ದು ಕಂಡಂತೆ ಹೇಳ್ತೇನೆ! ರಾಣಿಯವರು ಭಜನೆ ಮಾಡುತಿದ್ದಾಗ ಇಬ್ಬರು ಗಡ್ಡದ ಗೋಸಾವಿಗಳು ಬಾಗಿಲಿಗೆ ಬಂದರು. ರಾಣಿಯುವರು ಎದ್ದು ಅವರನ್ನು ಆದರದಿಂದ ಬರಮಾಡಿಕೊಂಡರು.

ಮಾ: ಅವರೇ ಏನು. ಈಗ ಕಂಗೆಟ್ಟು ಕಂಬಿಕಿತ್ತವರು?

ೈನಾ: ಹೌದು, ದೇವಿ ಅವರೇ. ಅವರು ಭಜನೆ ಕೇಳಲು ಬಂದವರಂತೆ, ಕಾಶಿಯಿಂದ.

ೆನ್ನಾ: (ಉತ್ಸಾಹದಿಂದ) ಹೌದು, ಉಮಾ ದೇವೀ ನಮ್ಮ ಮೀರಾ ರಾಣಿಯವರ ಭಜನೆಯ ಕೀರ್ತಿ ಕಾಶಿಯವರೆಗೂ ಹಬ್ಬಿದೆ. ಕೇಳಲಿಕ್ಕೆ ಅನೇಕ ಸಾಧು ಸಂತರೂ ಮಹಂತರು ಬರ್ತಾ ಇರ್ತಾರೆ!

ಮಾ: ಸಾಕು ನಿನ್ನ ಮೀರಾ ಪುರಾಣ. ಮುಂದೇನಾಯ್ತು? ಮೈನಾ?

ೈನಾ: ಅವರು ಮೀರಾದೇವಿಯವರ ಭಜನೆಗೆ ಅವರ ಗಾಯನದ ಇಂಪಿಗೆ ಭಾರಿ ಖುಶಿಯಾಗಿ ಹೋದರು. ಅವರಲ್ಲಿ ಒಬ್ಬ ದೇವಿಯವರ ಹಾಡಿಗೆ ತಾಳ ಹಾಕುತ್ತ ತಲೆದೂಗುತ್ತಿದ್ದ ಕಣ್ಣುಮುಚ್ಚಿಕೊಂಡು. ಮತ್ತೆ ಆ ಇನ್ನೊಬ್ಬ ಗೋಸಾವಿ-

ಮಾ: ಹಾಂ ಅವನೇನು ಮಾಡಿದ? ನಮ್ಮ ಈ ಸಾಧ್ವಿಯ ಕೈ ಹಿಡಿದು ಕುಣಿದನೆ ಗಡ್ಡ ಜೋಲಿಸುತ್ತ?

ೈನಾ: ಛೇ ಛೇ! ಹಾಗೆಲ್ಲ ಅನ್ನಬೇಡಿರಿ. ಮೀರಾ ರಾಣಿಯವರನ್ನು ಹೀಯಾಳಿಸಬೇಡಿರಿ. ನಿಮಗೆ ದಮ್ಮಯ್ಯ!

ಮಾ: ಹೂಂ ಮುಂದೇನಾಯಿತು? ಇದ್ದದ್ದು ಇದ್ದಂತೆ ಹೇಳು. ಬಣ್ಣಣೆ ಬೇಡ, ಹೂಂ!

ಮೈನಾ: ಆಗ - ಆ ದೊಡ್ಡ ಗಡ್ಡದ ದೊಡ್ಡ ಗೋಸಾವಿ ತನ್ನ ಖುಷಿ ತಡೆಯಲಾರದೆ 'ಯಾ ಅಲ್ಲಾ! ಸುಭಾನಲ್ಲಾ!' ಎಂದು ಕೂಗಿದ!

ಉಮಾ: ಅಯ್ಯೋ! ಇದೇನು ಅಸಹ್ಯಾ! ನಮ್ಮ ದೇವರ ಮುಂದೆ ಅ ಮುಸಲ್ಮಾನ ದೇವರ ಹೆಸರು! ಭ್ರಷ್ಟಾಚಾರ! ಶಿವಶಿವಾ!

ಮೈನಾ: ದೇವಿಯವರೇ, ಮುಂದೆ ಕೇಳಿ - ಆ ತುರುಕರು ಕೂಗಿದ ಕೂಡಲೆ ನಮ್ಮ ರಾಣಿಯ ಅಂಗರಕ್ಷರು ಮುಂದೆ ನುಗ್ಗಿ ಅವರನ್ನು ಹಿಡಿಯಲು ಮುಗಿಬಿದ್ದರು! ಆದರೆ ಆ ಖದೀಮರು ದಿಗ್ಗನೆ ಕಾಲುಕಿತ್ತರು. ಆ ಗೋಸಾವಿ ಹಿಂದೂ ಅಲ್ಲ!

ಉಮಾ: ಆತ ಘಟಿಂಗ! ಬದ್ಮಾಷ! ಆತ ತುರುಕ! ಆ ಇಬ್ಬರೂ ಮುಗಲರ ಬೇಹುಗಾರರಿಬೇಕು. ನಮ್ಮ ಮೇವಾಡದ ಅರಮನೆಯಲ್ಲಿ ವೈರಿಯ ಗುಪ್ತಚಾರರ ಪ್ರವೇಶ! ಅದಕ್ಕೆ ನಮ್ಮ ರಾಣಿಯ ಫಿತೂರಿ! ಛೇ ಛೇ ಛೇ ಇನ್ನೇನು ಆಗುವದಿದೆಯೋ ಈ ಸಂತಣಿಯ ಸೋಗಲಾಡಿಯಿಂದ!

ಮೀರಾ: ಅಕ್ಕಾ! ಏನೇನೂ ಆಗುವದಿಲ್ಲ. ಆಗುವದೆಲ್ಲ ಒಳಿತೇ ಆಗುತ್ತದೆ. ನನ್ನ ಕೃಷ್ಣನ ಕೃಪೆಯಿಂದ! ಇಕೋ ನೋಡು ಆ ದೇಶಾಂತರದಿಂದ ಬಂದ ಆ ಗೋಸಾವಿಗಳು ಎಷ್ಟು ಭಕ್ತಿವಂತರು! ನನ್ನ ಕೃಷ್ಣ ಕನಯ್ಯನಿಗೆ ಈ ರತ್ನಹಾರ ಕಾಣಿಕೆಯಾಗಿ ಕೊಟ್ಟು ಹೋಗಿರುವರು!

ಉಮಾ: **(ರತ್ನಹಾರ ಕಿತ್ತುಕೊಳ್ಳಲು ಮುಂದಾಗಿ)** ಅಂ! ಏನಂದಿ? ಆ ಭಣಂಗ ಭಂಡ ಭೈರಾಗಿಗಳು! ಅವರಿಗೆಲ್ಲಿ ಸಿಕ್ಕಿತು ರತ್ನ ಹಾರ? **(ಮೀರಾ ಪೀಠದಿಂದ ಹಾರವನ್ನು ತೆಗೆಯುವಾಗ-)**

ಪನ್ನಾ: ದೇವಿಯವರೇ ಆ ಕೂಗಿದ ಗೋಸಾವಿ ತನ್ನ ಬಗಲಚೀಲದಿಂದ ತೆಗೆದುಕೊಟ್ಟ. ಅದು ಅವರಿಗೆ ಗಂಗೆಯಲ್ಲಿ ಸ್ನಾನ ಮಾಡುವಾಗ ಸಿಕ್ಕಿತಂತೆ!

ಮೀರಾ: ಇದು ನೋಡಿ ಉಮಾ ದೇವಿ! ಎಷ್ಟು ಚಂದವಿದೆ ಈ ಹಾರ! ಗೋಸಾವಿಗಳು ಬಡ ಬೈರಾಗಿಗಳು ನಿಜ. ಆದರೆ ಅವರ ಹೃದಯ ಎಷ್ಟು ದೊಡ್ಡದು ನೋಡು!

ಉಮಾ: ನಿನ್ನ ಮರುಳು ಅದಕ್ಕೂ ದೊಡ್ಡದು! ತಾ ಇಲ್ಲಿ ಆ ಹಾರ! **(ಅದನ್ನು ಮೀರಾಳ ಕೈಯಿಂದ ಕಿತ್ತುಕೊಂಡು ನೋಡಿ)** ಇದು ಗಂಗೆಯಲ್ಲಿ ಬಳಿದು ಬಂದಿತೇ? ಶುದ್ಧ ಸುಳ್ಳು. ನೀನೊಬ್ಬ ಘೋರ ಪೆದ್ದಿ! **(ಹಾರ ದಿಟ್ಟಿಸುತ್ತ)** ಅದೇ ಇದೇನು! ಈ ಪದಕದಲ್ಲಿ ಏನಿದು ಬರೆದಿದೆ! 'ಅಲ್ಲಾ ಹೋ

ಅಕಬರ!'

ೀರಾ: **(ಅಲ್ಲಾನ ಹೆಸರು ಕೇಳಿ ಚಿಕ್ಕ ನಮಸ್ಕಾರ ಮಾಡುತ್ತ)** ಅದೇನು ಮಹಾ! 'ಅಲ್ಲಾ ಹೋ ಅಕಬರ' ಅಂದರೆ ಅರ್ಥವಾಗಲಿಲ್ಲವೇ ಅಕ್ಕಾ! 'ದೇವರು ದೊಡ್ಡವನು' ಎಂತ.

ುಮಾ: ನೀನು ದೊಡ್ಡ ಪೆದ್ದಿ ಎಂತ! ನೀನು ಹಳೆಹುಚ್ಚಿ! ಹಸಿ ಗೊಡ್ಡು! ನನಗೆ ಪಾಠ ಹೇಳುತ್ತಾಳೆ! ಬಂದವನು ಗೋಸಾವಿ ಅಲ್ಲ. ವೇಷ ಬದಲಿಸಿ ಬಂದ ಅಕಬರ ಬಾದಶಾಹ! ಅವನೊಂದಿಗೆ ಬಂದ ಆ ಇನ್ನೊಬ್ಬ ಗೋಸಾವಿ ತಾಳ ಹಾಕುತ್ತಿದ್ದನಲ್ಲ, ಆತ ಬಾದಶಾಹನ ಮಿತ್ರ ಅವರ ಅಸ್ಥಾನ ವಿದ್ವಾನ್ ಸಂಗೀತಗಾರ ತಾನಸೇನ್!

ನ್ನಾ: ಭಲೆ ಭಲೆ! ನಮ್ಮ ರಾಣಿಯ ಭಜನೆಯ ಕೀರ್ತಿ ದಿಲ್ಲಿ-ಆಗ್ರಾ ತನಕ ಕೇಳಿಸಿತು. ಅದಕ್ಕೇ ದಿಲ್ಲಿಯ ದೊರೆ, ಸಂಗೀತದ ದೊರೆ ಇಲ್ಲಿಯವರೆಗೆ ಪ್ರತ್ಯಕ್ಷ ಭಜನೆ ಕೇಳಲು ಬಂದರು, ಭೇಷ್!

ೀರಾ: **(ಹರ್ಷದಿಂದ)** ಏನು ಅಕಬರ ಬಾದಶಾಹ ಬಂದರೇ? ಪ್ರತ್ಯಕ್ಷ ತಾನಸೇನರು ಬಂದು ನನ್ನ ಭಜನೆ ಕೇಳಿ ಹೋದರೇ! ಧನ್ಯ. ನಾನೇ ಧನ್ಯ! ಕೃಷ್ಣ ಕನಯ್ಯಾ! ಗಿರಿಧಾರೀ! ಮೀರಾ ಕೇ ಪ್ರಭೂ! ಇದೆಲ್ಲ ನಿನ್ನ ಲೀಲೆ! ನಿನ್ನ ಲೀಲೆ!

ುಮಾ: ಲೀಲೆ ಅಲ್ಲ ಶಾಪ! ದೇವರ ಶಾಪ! ನಮ್ಮ ಮೇವಾಡದ ರಾಜ್ಯಕ್ಕೆ ಬಡಿದ ಶಾಪ! ನಿನ್ನ ಪಾಪದಿಂದ! ನಮ್ಮ ರಾಣಿಯೇ ನಮ್ಮ ರಾಜ್ಯಕ್ಕೆ ಶತ್ರು. ಶತ್ರುಗಳೊಂದಿಗೆ ಫಿತೂರಿ!

ನ್ನಾ: ಹಾಗನ್ನಬೇಡಿ. ದೇವಿಯವರೇ! ಇದರಲ್ಲಿ ಮೀರಾ ರಾಣಿಯ ವರದೇನು ತಪ್ಪು? ಅವರೇನು ಆ ಬಾದಶಾಹನಿಗೆ ಬಿನ್ನಹ ಪತ್ರ ಬರೆದಿದ್ದರೇ ಬಾ ಎಂದು?

ೈನಾ: ಬಿನ್ನಹ ಪತ್ರವೇಕೆ ಬರೆಯಬೇಕು? ಅಕಬರನ ಬೇಹುಗಾರರು ತಿಳಿಸಿರಬೇಕು. ಬಾದಶಾಹ ತಾನಾಗಿ ಬಂದರೂ ಅದು ಒಂದು ಸಾಮಾನ್ಯ ಭೆಟ್ಟಿ ಅಲ್ಲ. ನಮ್ಮ ರಾಣಾರು ಕರೆಯದೇ ಆತ ಬಂದದ್ದು-

ುಮಾ: ಅದೂ ರಾಣಿಯ ಅಂತಃಪುರಕ್ಕೆ ಅದೂ ವೇಷಮರೆಯಿಸಿ ಕೊಂಡು! ಇದು ನಿಜವಾಗಿಯೂ ಅಪರಾಧ! ಪ್ರಜೆಗಳ ಅಪವಾದಕ್ಕೆ ಕಾರಣ!

ೀರಾ: ಅಯ್ಯಾ! ಇದೆಲ್ಲ ಏನು ಆಡುತ್ತೀರಿ? ಏನೋ ತಪ್ಪು ತಿಳುವಳಿಕೆ ಆಗಿದೆ!

ುಮಾ: ಹೌದು ಆದರೆ ತಪ್ಪು ನಿನ್ನದಾಗಿದೆ. ತಿಳುವಳಿಕೆ ನನ್ನದಾಗಿದೆ! ಕೇಳು

ನಮ್ಮ ಈ ದಾಸಿಗೆ ಇದ್ದ ಬುದ್ಧಿ ನಮ್ಮ ಈ ರಾಣಿಗೆ ಇಲ್ಲ. ಎಲ್ಲಾ ಭಜನೆಯಲ್ಲಿ ಭಂಡಾರಿಸಿ ಹೋಗಿದೆ. ಹುಚ್ಚಿಯನ್ನು ನಮ್ಮಣ್ಣ ರಾಣಾ ಏಕೆ ಕಟ್ಟಿಕಂಡನೋ ಆ ಏಕಲಿಂಗಜಿಯೇ ಬಲ್ಲ! ಇದು ಉಡಿಯಲ್ಲಿ ಕೆಂಡ! ಈಗ ನಮ್ಮ ಹಗೆಯ ಕೈಗೆ ಹೊಗೆಯಾಡುವ ಕೊಳ್ಳಿ!

ಮೀರಾ: ಕೆಂಡ, ಕೊಳ್ಳಿ! ದೇವಾ, ದೇವಾ! ಏನೀ ಅಪವಾದ! ನನ್ನದೇನು ಅಂಥ ಅಪರಾಧ?

ಉಮಾ: ಮತ್ತೆ ಅಪರಾಧವೇನೆಂದು ಕೇಳುತ್ತೀ? ನಾಚಿಕೆ ಬಿಟ್ಟ ಕುಲಗೇಡಿ!

ಮೀರಾ: ಅಂಥದೇನಾಗಿದೆ? ಭಜನೆ ಅಪರಾಧವೇ? ಅದಕ್ಕೆ ಸಾಧುಸಂತರು ಬರುವದು ಅಪಾರಾಧವೇ? ಬೊಬ್ಬಾಟವಾಗಬಾರದೆಂದು ದೊಡ್ಡ ಜನ ವೇಷ ಬದಲಿಸಿ ಬಂದರೆ ಅದು ಅಪರಾಧವೇ? ಬರುತ್ತಾರೆ ಭಜನೆ ಮಾಡಿ ಕೇಳಿ ಆನಂದ ಪಡೆಯುತ್ತಾರೆ!

ಉಮಾ: ಅ ಹಾ ಹಾ! ಆನಂದ ಪಡೆಯುತ್ತಾರೆ! ಇನ್ನೇನು ಪಡೆಯುತ್ತಾರೆ? ಶತ್ರು ದೊರೆ ರಾಣಿವಾಸಕ್ಕೆ ವೇಷಾಂತರ ಮಾಡಿ ಆನಂದ ಪಡೆಯಲು ಬರುತ್ತಾನೆ. ನೀನು ಮಹಾ ಪತಿವ್ರತೆ! ಕೃಷ್ಣಭಕ್ತೆ! ಆ ಕೃಷ್ಣನ ಲೀಲೆಯಂತೆಯೇ ನಿನ್ನ ಲೀಲೆ! ಪತಿವ್ರತೆಯಲ್ಲ, ನೀನು ಪತಿವ್ರಥಾ! ನಿನಗೆ ಇಂಥ ಸಾಧು ಸಂತರ ಸಹವಾಸವೇ ಬೇಕು. ಆನಂದ ಪಡೆಯಲಿಕ್ಕೆ. ಆ ಗಂಡನು ಇದ್ದೂ ವ್ಯರ್ಥ! ಆತ ಶುದ್ಧ ಮೂರ್ಖ. ಹೆಂಡತಿ ಮಹಾ ಭಗವದ್ಭಕ್ತಳೆಂದು ಕಣ್ಣಿದ್ದೂ ಕುರುಡನಾಗಿ ಕೂತಿದ್ದಾನೆ. ಎಷ್ಟು ಸಲ ಹೇಳಿದೆ. ಸಾರಿ ದೂರಿ ಹೇಳಿದೆ. ಕಿವಿಗೊಡುವದೇ ಇಲ್ಲ. ಇಲ್ಲಿ ತಾಳ ತಂಬೂರಿಗಳ ಅಬ್ಬರದಲ್ಲಿ ಏನು ನಡೆದಿದೆ ಎಂದು ನೋಡಲು ಬರುವದಿಲ್ಲ. ಇದೀಗ ಅತಿ ಆಯಿತು. ಆದದ್ದೆಲ್ಲ ಒಳಿತೇ ಆಯಿತು! ಮೀರಾ ಕಿವಿಗೊಟ್ಟು ಕೇಳು. ಈ ರತ್ನಹಾರವನ್ನು ರಾಣಾನಿಗೆ ತೋರಿಸಿ ರಾಜದ್ರೋಹದ ಬಗ್ಗೆ ನಿನಗೆ ದೇಹಾಂತ ಶಿಕ್ಷೆ ಕೊಡಿಸುತ್ತೇನೆ. ನಮ್ಮ ಮೇವಾಡಕ್ಕೆ ಅಂಟಿದ ಈ ಮಾಹಾಮಾರಿ - ಹೂಂ ಮೀರಾ ಅಲ್ಲ ಮಹಾಮಾರಿ! ಇನ್ನು ಶಾಶ್ವತವಾಗಿ ಉಚ್ಚಾಟಿಸುತ್ತೇನೆ.

ಮೀರಾ: (ದಿಗ್ಭ್ರಾಂತಳಾಗಿ) ಅಕ್ಕಾ! ಇದೆಲ್ಲ ಏನು? ಅರ್ಥವಾಗುತ್ತಿಲ್ಲ!

ಉಮಾ: ಅರ್ಥವಲ್ಲ, ಅನರ್ಥ. ರಾಜ್ಯಕ್ಕೆ ನಮ್ಮ ರಾಣಾರಿಗೆ ಬಂದ ಅನರ್ಥ. ನಿನ್ನದು ರಾಜದ್ರೋಹ! ನಿನಗೆ ಮರಣದಂಡನೆ!

ಮೈನಾ: ಬೇಡ, ದೇವಿ. ಬೇಡ. ಅದೊಂದು ಮಾಡಬೇಡಿ! ಅಷ್ಟೊಂದು ವಿಕೋಪಕ್ಕೆ ಹೋಗಬೇಡಿ! (ಉಮಾಳ ಕಾಲಿಗೆ ಬೀಳುತ್ತಾಳೆ)

ಮಾ: (ಆಕೆಯನ್ನು ದೂರ ಒದ್ದು) ಸಾಕು ನಿನ್ನ ಬಿನ್ನಾಣ. ಮೀರಾಳ ಭಂಡಾಟದ ತರಲೆ ಹೇಳಿ ನನ್ನನ್ನು ಎಳೆದು ತಂದವಳೂ ನೀನೇ; ಇದೀಗ ನನ್ನ ಕಾಲು ಎಳೆಯುವವಳೂ ನೀನೇ! ನೀನು ಇಲ್ಲೇ ನಿಲ್ಲಬೇಕು. ಅವರ ಮೇಲೆ ಕಣ್ಣಿಡು. ನಾನು ರಾಣಾನನ್ನು ಕಂಡು ಮೀರಾಳಿಗೆ ಮರಣ ದಂಡನೆಯ ರಾಜಾಜ್ಞೆ ಪಡೆದು ಬರುತ್ತೇನೆ. ಹಾಂ! ಇದು ಕೇವಲ ರಾಜದ್ರೋಹ. ಮೊಗಲ ಬಾದಶಹ ನೊಂದಿಗೆ ನಮ್ಮ ರಾಣಿಯೇ ನಡೆಯಿಸಿದ ಫಿತೂರಿ! ಒಳಸಂಚು! ಅದಕ್ಕಾಗಿ ಬಾದಶಹನಿಂದ ಅಮೂಲ್ಯ ರತ್ನಹಾರದ ಲಂಚ! ರಾಣಾನೇ ನೋಡಲಿ. (ಹಾರ ತನ್ನ ಕೊರಳಿಗೆ ಹಾಕಿಕೊಂಡು ರಭಸದಿಂದ ಹೋಗುತ್ತಾಳೆ.)

ೀರಾ: ಕೃಷ್ಣ ಕನಯ್ಯಾ! ಮೀರಾ ಕೆ ಪ್ರಭು! ಗಿರಿಧಾರಿ! ಇದೇನು ನಡೆದಿದೆ? ನಿನ್ನ ಲೀಲೆ! ನೀನೇಗತಿ! (ಕಣ್ಣುಮುಚ್ಚಿ ಕೈಮುಗಿದು ನಿಲ್ಲುವಳು. ಆಗ ಬಿದ್ದಲ್ಲಿಂದ ಮೈನಾ ಬಿಕ್ಕುವಳು) ಮೈನಾ, ಮೈನಾ! ಏಳು. ಏಳು ನಿನಗೇನೂ ಭಯವಿಲ್ಲ! ಏಳು. ಅಳಬೇಡ (ಹೀಗೆನ್ನುತ್ತ ಅವಳನ್ನು ಎಬ್ಬಿಸಿ ಕಣ್ಣು ಒರಸಿ ತಬ್ಬಿ ನಿಲ್ಲುವಳು. ಮೈನಾ ಮುಜುಗರ ಪಟ್ಟು ದೂರ ಸರಿದು ನಿಲ್ಲುವಳು.)

ೀರಾ: (ಕ್ಷಣ ಹೊತ್ತು ಮೌನ. ನಿಟ್ಟುಸಿರು.) ಮೈನಾ ಬಾ ನಮ್ಮೊಂದಿಗೆ ಭಜನೆ ಮಾಡೋಣ. ಉಮಾ ದೇವಿ ಬರುವನಕ. ಬಾ ಪನ್ನಾ. (ಕೃಷ್ಣನ ಪ್ರತಿಮೆಯತ್ತ ಹೋಗಿ, ಅಡ್ಡಬಿದ್ದು 'ಓಂ ನಮೋ ಭಗವತೇ ವಾಸುದೇವಾಯ!' ಎಂದು ಆವನ ಪಾದಕ್ಕೆ ಎರಗುತ್ತಾಳೆ. ಮತ್ತೆ ತುಂಬ ಹಿಗ್ಗಿನಿಂದ ಏಳುತ್ತಾಳೆ.) ಪನ್ನಾ! ಇದು ಶುಭದಿನ. ನನ್ನ ಬಾಳಿನ ಮಂಗಲಾಚರಣೆಯ ದಿನ. ರಾಣಾನಾ ಕೈಯಿಂದ ನನಗೆ ಮರಣ - ಇದಕ್ಕಿಂತ ದೊಡ್ಡ ಸೌಭಾಗ್ಯ ಇನ್ನಾವದು! ಬಾ ಪನ್ನಾ. ಬಾ ಮೈನಾ ಇನ್ನು ದೂರ ನಿಂತಿ ಏಕೆ? ನಮ್ಮನ್ನು ಸೇರು ಭಜನೆಯಲ್ಲಿ ದನಿ ಸೇರಿಸು!

(ಮೀರಾ ಕಾಲಿಗೆ ಗೆಜ್ಜೆ ಕಟ್ಟಿಕೊಂಡು ನಿಲ್ಲುವಳು. ಪನ್ನಾ ಡೋಲು ಬಾರಿಸ ಹತ್ತುವಳು ಮೀರಾ ಕುಣಿಯುವಳು)

"ಪಗ ಘುಂಗರುಬಾಂಧಕರ
ನಾ ಚೀ ರೇ - -"

(ಕುಣಿತ ತೀವ್ರಗೊಂಡಂತೆ ದೂರನಿಂತ ಮೈನಾ ಮೆಲ್ಲನೆ ಹತ್ತಿರ ಸರಿಯುತ್ತ ಬಂದು ನಿಂತು, ಮುಂದೆ ತಾಳಲಾರದೆ ತಾನೂ ಪನ್ನಾಳ ಪಕ್ಕದಲ್ಲಿ ಕುಳಿತು ತಾಳ ಹಾಕ ಹತ್ತುವಳು. ಎಲ್ಲರೂ ನಗುವರು. ಮೀರಾಳ ಹಾಡು ಕುಣಿತ ಸಾಗುವವು.)

(ರಭಸದಿಂದ ಉಮಾಳ ಪ್ರವೇಶ)

ಉಮಾದೇವಿ : ಅಂ! ಇದೇನಿದು? ಮೈನಾ! (ಕೂಗುವಳು) ನೀನೂ? ಈ ತಾಳಗೆಟ್ಟ ತಾಳಕುಟ್ಟುವರನ್ನು ಸೇರಿಬಿಟ್ಟೆಯಾ? ಈಚೆಗೆ ಬಾ! ಅದೇನ ಮಾಟವೋ ಈ ಗೈಯಾಳಿಯದು? ಮೈನಾ! ಇತ್ತ ಬಾ! ಇಕೊ ಈ ರಾಜಾಜ್ಞೆ - ಆ ರಾಜದ್ರೋಹಿಗೆ ಕೊಡು! ಓದಲಿ. ರಾಣಾನಿ ಎಲ್ಲ ವರದಿ ಮಾಡಿದೆ. ಒದರಿ ಹೇಳಿದೆ! ಆ ಹಾರವನ್ನೂ ಕೊಟ್ಟೆ ಕಣ್ಣು ಕೆಕ್ಕರಿಸಿ ಅಕಬರನ ಪದಕವನ್ನು ನೋಡೇನೋಡಿದ! ಈ ಕಣ್ಣು ಪೂರ್ತಿ ತೆರೆಯಿತು! ನೋಡು ಓದಿನೋಡು ನೀನೂ ಕಣ್ಣ ತೆರೆದು. ಇನ್ನು ಕಣ್ಣು ಪೂರ್ತಿ ಮುಚ್ಚಿ ಭಜನೆ ಮಾಡುವದು ಸಾಕು ಇನ್ನು ಶಾಶ್ವತವಾಗಿ ಕಣ್ಣು ಮುಚ್ಚುವದು! ಹ: ಹ: ಹ:! (ಮೀರಾ ರಾಜಾಜ್ಞೆಯನ್ನು ಓದುವಾಗ) ಏನು ಓದಿದೆಯಷ್ಟೇ? ಅರ್ಥವಾಯಿತೇ?

ಮೀರಾ: ಅರ್ಥವಾಗಲಿಲ್ಲ! ನಾನು ರಾಜದ್ರೋಹಿ! ಸುಳ್ಳು. ಅಪ್ಪಟ ಸುಳ್ಳು

ಉಮಾ: ಸುಳ್ಳಲ್ಲ. ಕೇವಲ ಸತ್ಯ ಪೂರಾಸತ್ಯ. ಸತ್ಯವಲ್ಲದೆ ಇನ್ನೇನೂ ಅಲ್ಲ ಅದಕ್ಕಾಗಿಯೇ ಈ ಶಾಸನ, ವಿಷಪ್ರಾಶನ!

ಮೈನಾ: ಬೇಡ ದೇವಿ ಬೇಡ! ಮೀರಾದೇವಿ ನಮ್ಮ ರಾಣಿಯರು!

ಉಮಾ: ಏ ಹುಚ್ಚಿ! ಮುಚ್ಚು ಬಾಯಿ. ನಿನಗೇನು ಗೊತ್ತು! ರಾಣಿಯಾದ್ದ ರಿಂದಲೇ ಈ ಉಗ್ರಶಾಸನ. ಶೀಘ್ರ ಮರಣ ದಂಡನೆ! ನಡ ಹೋಗು. ವಿಷ ಅರೆದು ಸಿದ್ಧವಾಗಿರಬೇಕು ಇಷ್ಟರಲ್ಲಿ. ಹೋಗಿ ತೆಗೆದುಕೊಂಡು ಬಾ!

ಮೈನಾ: ಹೋಗುತ್ತೇನೆ. ಆದರೆ ತಿರುಗಿ ಬರುವದಿಲ್ಲ. ಅದನ್ನು ನಾನೇ ಕುಡಿಯುತ್ತೇನೆ. ಇದಕ್ಕೆಲ್ಲ ನಾನೇ ಹೊಣೆ. ನಾನು ನಿಮ್ಮನ್ನು ಇಲ್ಲಿ ತಂದವಳು! ಅಯ್ಯೋ! ನನ್ನ ಬುದ್ಧಿ (ಬಿಕ್ಕುವಳು)

ಉಮಾ: ಇದೇನು ಅಪಸ್ಮಾರ! ನಿಲ್ಲು. ನಾನೇ ಹೋಗಿ ತರುತ್ತೇನೆ. ಏ ಮೀರಾ! ನಾನು ಹೋಗಿ ಬರುವನಕ ಇಲ್ಲಿಯೇ ನಿಲ್ಲು. ಓಡಿ ಹೋಗಬೇಡ.

ಮೀರಾ: ಓಡಿ ಹೋಗುವದೇ? ನಾನು? ರಾಣಿಯಾಗಿ ರಾಣಾನ ಅಪ್ಪಣೆ, ನನ್ನ ಪತಿ ದೇವರ ಆಜ್ಞೆ ಮೀರುವೆನೇ? ಅಯ್ಯೋ! ಮಂಕೇ! (ಉಮಾದೇವಿ ಹೋಗುವಳು) ರಾಜಾಜ್ಞೆ ನನಗೆ ದೈವಾಜ್ಞೆ! ನಾನು ಇನ್ನು ಹೋಗುವದು ವೈಕುಂಠಕ್ಕೇ! (ಕೃಷ್ಣನ ಪ್ರತಿಮೆಯತ್ತ ಓಡಿ ಪಾದಕ್ಕೆ ಬಿದ್ದು) ಕೃಷ್ಣಾ! ಕನಯ್ಯಾ! ಗಿರಿಧಾರಿ! ಇದೆಂಥ ಯೋಗ ತಂದುಕೊಟ್ಟೆ! ಇದು ನನಗೆ 'ಅಮೃತ ಸಿದ್ಧಿ' ಯೋಗ. ಇನ್ನು ನಿನ್ನಲ್ಲಿ ಐಕ್ಯ! ಸಾಯುಜ್ಯ! (ಹಿಗ್ಗಿ ಉತ್ಸಾಹದಲ್ಲಿ ಹಾಡುವಳು ಕುಣಿಯುವಳು. - ಅದೇ ಮೊದಲು ಹಾಡಿದ ಗೀತ. ಮೀರಾಳ ಉಲ್ಲಾಸ ಕಂಡು ಪನ್ನಾ ಮೈನಾ ಬಿಕ್ಕಿ ಬಿಕ್ಕಿ ಅಳುವರು)

ಏ ಹುಚ್ಚಿ ಅಳುವಿರೇಕೆ? ಬನ್ನಿ ನೀವೂ ಹಾಡಿ. ಇದು ಅಮೃತಯೋಗ. ಮುಂದಿನ ಮುಕ್ತಿಯ ಮಂಗಲಾಚರಣ! **(ಉಮಾದೇವಿ ಬರುವಳು - ವಿಷದ ಪಾತ್ರಯೊಡನೆ)**

ಮಾ: ಎಲಾ! ಮತ್ತೆ ಶುರುವಾಯಿತೇ ಹುಚ್ಚು ಕುಣಿದಾಟ! ಏ. ನಿಲ್ಲಿಸು. ಇಕೋ ನಿನ್ನ ಶ್ರೀ ಕೃಷ್ಣನ ಪ್ರಸಾದ! ಇಷ್ಟೆಲ್ಲ ದಿನ ನಡೆಸಿದ ಪೂಜೆಯ ಫಲ! ಕುಡಿದು ಸಾಯಿ! ರಾಜ್ಯದ ಅರಿಷ್ಟ ತೊಲಗಲಿ! ಕುಡಿ. **(ಬಟ್ಟಲು ಕೊಡುವಳು. ಮೀರಾ ಅದನ್ನು ಒಯ್ದು ದೇವರ ಪೀಠದಲ್ಲಿ ಇಡುವಳು)**

ೀರಾ: ದೇವಾ! ಇದು ನಿಜವಾಗಿಯೂ ನಿನ್ನ ಪ್ರಸಾದ. ನನ್ನ ರಾಣಾನ ಕೈಯಿಂದ ಕಳುಹಿಸಿದ ನೈವೇದ್ಯ! ಶ್ರೀ ಕೃಷ್ಣಾರ್ಪಣಮಸ್ತು!

**(ವಿಷದ ಬಟ್ಟಲನ್ನು ಎತ್ತಿಕೊಂಡು ಹಣೆಗೆ ಹಚ್ಚಿ ತಾನೇ ಕುಡಿಯಲು ಮಾಡುವಳು. ಅಷ್ಟರಲ್ಲಿ ಕೃಷ್ಣಪ್ರತಿಮೆ ಇದ್ದಲ್ಲಿ ಶ್ರೀ ಕೃಷ್ಣನೇ ಕಾಣಿಸಿಕೊಳ್ಳುವನು. ಮೀರಾಳ ಕೈ ಹಿಡಿದು ಬಟ್ಟಲನ್ನು ಕಸಿದುಕೊಂಡು ತಾನೇ ಕುಡಿಯುವನು.)**

ೀ ಕೃಷ್ಣ: ಎಲ್ಲಾ, ಠಕ್ಕೀ! ಆಡೋದೊಂದು ಮಾಡೋದೊಂದು! ಆಂ! ಕೃಷ್ಣಾರ್ಪಣವೆಂದೆ. ಕೃಷ್ಣ ಯಾರು! ನೀನೋ? ನಾನೋ? ನನಗೆ ಕೇವಲ ತೋರಿಸಿ ನೀನೇ ಗುಳುಂ ಮಾಡುವದೇ? ಹ: ಹ: ಹ: ಭಕ್ತಳಂತೆ! ಎಂಥ ಮೋಸ! ಹ: ಹ: ಹ:!

ೀರಾ: **(ಆಶ್ಚರ್ಯ - ಆನಂದ - ಗಾಬರಿ ಎಲ್ಲ ಕೂಡಿ)** ಅರೇರೇ! ಇದೇನು ಮಾಡಿಬಿಟ್ಟೆ! ವಿಷ ಕುಡಿದು ಬಿಟ್ಟೆಯಾ? **(ಮೂರ್ಛೆ ಹೋಗುವಳು) (ಕೃಷ್ಣ ಪ್ರಕಟವಾಗುವಾಗ ಕಣ್ಣು ಕುಕ್ಕುವ ಪ್ರಕಾಶ. ಅದಕ್ಕೆ ತಲೆತಿರುಗಿ ಉಮಾ ಮೈನಾ, ಪನ್ನಾ, ಕುಸಿದು ಬಿಳುವರು - ಕಣ್ಣಿಗೆ ಕತ್ತಲು ಕವಿದು! ಈಗ ಮೀರಾ ಚೇತರಿಸಿಕೊಳ್ಳುವಾಗ ಅವರು ಕಣ್ಣುಜ್ಜಿಕೊಳ್ಳುತ್ತ ಏಳುವರು. ಆ ಅದ್ಭುತ ನೋಡುವರು.)**

ಷ್ಣ: ಮೀರಾ! ಮೀರಾ! ಏಳು. ಏಳು! ಕಣ್ಣು ತೆರೆ! ಹೆದರಬೇಡ. ಈ ವಿಷದಿಂದ ನನಗೆ ಏನೂ ಆಗಿಲ್ಲ. ಆಗುವದೂ ಇಲ್ಲ! ಗೋಕುಲದಲ್ಲಿ ಹಾಲು ಬೆಣ್ಣೆ ಕುಡಿದು ಕುಡಿದು ತಿಂದುತಿಂದು ಪುಷ್ಟವಾಗಿದೆ ಈ ಪಿಂಡ! ಒಂದು ಗುಟುಕು ವಿಷದಿಂದ ಹಾಗೆಲ್ಲ ಸಾಯುವದಿಲ್ಲ. ಅನಂತ ಕೋಟಿ ಬ್ರಹ್ಮಾಂಡಗಳೇ ನನ್ನ ಹೊಟ್ಟೆಯಲ್ಲಿ! ಒಂದು ಕುಡಿತೆ ವಿಷಕ್ಕೆ ಅಲ್ಲಿ ಸ್ಥಾನವಿಲ್ಲವೇ! **(ಮೀರಾಳನ್ನು ಎತ್ತಿ ಹಿಡಿದು ಮಮತೆಯಿಂದ ಮೈದಡವಿ)** - ಉಮಾದೇವೀ! ಯಾರು ಮಿತ್ರ? ಯಾರು ಶತ್ರು? ನಮಗೆ ನಾವೇ ಶತ್ರು. ನಮಗೆ ನಾವೇ ಮಿತ್ರ. "ಆತ್ಮೈವ ಆತ್ಮನೋ ಬಂಧು: ಆತ್ಮೈವ ರಿಪುರಾತ್ಮನಃ" ಮೀರಾ ಯಾರಿಗೂ ಯಾವ

ದ್ರೋಹವನ್ನೂ ಮಾಡಿಲ್ಲ. ಮಾಡಲಾರಳು! ಆಕೆ ಭಗವದ್ಭಕ್ತೆ ಜಗತ್ತಿನ ಭಕ್ತರದೆಲ್ಲ ಒಂದೇ ಕುಲ. ನನ್ನ ರಾಜ್ಯದಲ್ಲಿ ದ್ರೋಹವೆ ಇಲ್ಲ. ಮೋಹವಿದ್ದಲ್ಲಿ ದ್ರೋಹ! ಮೀರಾ ನನ್ನ ಅನನ್ಯ ಭಕ್ತೆ. ಮೀರಾ ಇನ್ನು ನಡೆ. ಪ್ರಪಂಚದಲ್ಲಿ ಭಗವದ್ಭಕ್ತಿಯನ್ನು ಪ್ರಚಾರಗೊಳಿಸು ನಿನಗೆ ಸದಾ ಅಭಯ! **(ಅಂತರ್ಧಾನ) (ಉಮಾ ದೇವಿ, ಮೈನಾ, ಮೀರಾ ಕಾಲಿಗೆ ಬಳುವರು.)**

ಉಮಾ: ನಮ್ಮನ್ನು ಕ್ಷಮಿಸು! ನನ್ನನ್ನು ಕ್ಷಮಿಸು! ನಾನು ಪಾಪಿ! ದೇವರಿ ವಿಷ ಕುಡಿಸಿದೆ! ನರಕದಲ್ಲಿಯೂ ನನಗೆ ಗತಿ ಇಲ್ಲ! ಅಯ್ಯೋ ನನ್ನ ಬಾಳೇ! **(ಮೀರಾಳ ಕೈ ಹಿಡಿದು ಪಾದಕ್ಕೆ ಹಣೆ ಜಜ್ಜಿಕೊಳ್ಳುವಳು**

ಮೈನಾ: ರಾಣಿಯವರೇ ದೇವಿಯವರೇ ನನ್ನ ಉದ್ಧಾರ ಮಾಡಿಸಿ. ಇನ್ ನನಗೆ ಗತಿ -?

ಮೀರಾ: ನಿನಗೆ, ನಮಗೆ ಎಲ್ಲ ಆತ ಅಲ್ಲಿ ನಗುತ್ತ ನಿಂತ ನನ್ನ ಗಿರಿಧಾರಿಯೆ ಗತಿ. ಗೋವರ್ಧನ ಗಿರಿಯನ್ನೇ ಕಿರಿಬೆರಳಿನಿಂದ ಹೊತ್ತವ! ನಿವ ಕಿರಿಹೊಣೆಗಳನ್ನು ಹೊರಲಾರನೇ..... ಅಕ್ಕಾ ಉಮಾದೇವಿ ನಿಮ್ಮದೇನು ತಪ್ಪು? ರಾಜ್ಯದ ಹಿತಕ್ಕಾಗಿ ನಿಮಗೆ ಸರಿಕಂಡಂತೆ ನಿವ ಕರ್ತವ್ಯ ಮಾಡಿದಿರಿ.

ಉಮಾ: **(ಬಿಕ್ಕುತ್ತ)** ಇಲ್ಲ. ಮೀರಾ! ಇಲ್ಲ. ನಾನು ಮಾಡಬಾರದ್ದು ಮಾಡಿದೆ ರಾಣಾನನ್ನು ತಪ್ಪು ದಾರಿಗೆ ಎಳೆದೆ. ಮಹಾಮೂರ್ಖಳಾದೆ ದುಷ್ಟಳಾದೆ! ನಿನ್ನ ಹಿರಿಮೆ ಅರಿಯದೇ ಹೋದೆ **(ಅಳುವಳು)**.

ಮೀರಾ: ಛೀ ಛೀ! ಹೀಗೆ ಅಳಬಾರದು. ಹಿರಿಯರು ಅಳಬಾರದು. ನಿಮಗಿಂ ನಾನು ಕಿರಿಯಳು. ಯಾರು ಹಿರಿಯ, ಯಾರು ಕಿರಿಯಾ? ಹಿರಿವ ಎಲ್ಲ ಅವನದು. ನನ್ನ ಪ್ರಭು ಕೃಷ್ಣ ಕನಯ್ಯನದು. ಕಣ್ಣು ಒರಸಿಕೊ ಕೃಷ್ಣನ ಆರಾಧನೆ ಮಾಡು. ಆತ ಎಲ್ಲ ಪಾಪ ತಾಪಗಳಿಂದಲು ಕಾಪಾಡುವನು. ಅವನನ್ನೇ ನಂಬು.

**(ದಿಗ್ಗನೆ ಎಚ್ಚರಾದಂತೆ ಅವರಿಂದ ದೂರವಾಗಿ ಕೃಷ್ಣನ ಪೀಠಕ್ಕೆ ಹೋ ಎರಗಿ ತನ್ನ ಏಕತಾರಿ ಟಿಪ್ರಿಗಳನ್ನು ಎತ್ತಿಕೊಳ್ಳುತ್ತಾಳೆ.)** ಉಮಾದೇವಿ ಅಕ್ಕಾ ನನ್ನನ್ನು ಹರಸು. ನಾನು ಹೊರಟೆ. ಹೇಗೂ ದೇಹಾಂತ ಶಿ ಪಡೆದವಳು-ನನಗೆ ರಾಜ್ಯದಲ್ಲಿ ಸ್ಥಾನವಿಲ್ಲ. ಕೃಷ್ಣನ ಆದೇಶವಾಗಿದೆ ಇನ್ನು ಕೃಷ್ಣನಾಮ ಸಂಕೀರ್ತನೆಯೊಂದೇ ಗುರಿ. ನನ್ನದು ಭಕ್ತಿಯ ಕಾಲುದಾರಿ. ಅರಮನೆ, ಅಧಿಕಾರ, ವೈಭವಗಳ ರಾಜಮಾಗ ನನ್ನದಲ್ಲ. **(ಹಾಡುತ್ತ ನಿಧಾನವಾಗಿ ಹೋಗುವಳು)**.

# ಅಂಬೆ

## ಪಾತ್ರವೃಂದ

ಅಂಬೆ

ಅಂಬಿಕೆ

ಅಂಬಾಲಿಕೆ

ಸತ್ಯವತಿ

ಭೀಷ್ಮ

ಶಾಲ್ವ

ಕಾಶೀರಾಜ (ಪ್ರತಾಪಸೇನ)

ಡಂಗುರದವ

ಚಾರಣರು

# ಅಂಬೆ

**ಡಂಗುರದವರು :** ಕೇಳಿರಿ ಕಾಶೀಪೌರರೆ ಬಿಮ್ಮನೆ
ದೊರೆ ಪ್ರತಾಪಸೇನರ ಅಪ್ಪಣೆ!
**(ಡೋಲಿನ ಸದ್ದು ಮತ್ತೆ ಮತ್ತೆ)**
ಚೈತ್ರಶುದ್ಧ ಪಂಚಮಿಗೆ
ಮಹೋತ್ಸವ ರಾಜ್ಯಕ್ಕೆ **(ಡೋಲು)**
ರಾಜಕುವರಿಯರ ಸ್ವಯಂವರ
ಕಟ್ಟಿರಿ ಗುಡಿತೋರಣ ಸಿಂಗಾರ! **(ಡೋಲು)**
**(ವಾದ್ಯ ಸಂಗೀತ ವಿಜೃಂಭಣೆ ಕೇಕೆ ಹಾಸ್ಯ ಜನಜಂಗುಳಿ ಘೋಷ)**

**ವೃಂದಗೀತ :** ಅಂಗವಂಗ ಕಳಿಂಗ ಕಾಶ್ಮೀರ
ಮದ್ರ ಮತ್ಸ್ಯ ಸೌರಾಷ್ಟ್ರ ಸೌವೀರ
ಬಹುಮಾನದ ಭೂಪರ ಪರಿವಾರ
ರಾಜಾಂಗಣದಲ್ಲಿ ರಾಜರಬ್ಬರ
ಬಂಗಾರದ ಅಂಗಾಂಗದೈಸಿರಿ
ಸಯಂವರಕೆ ಸಂದಣಿಸಿದೆ ಭಾರಿ!

**ಚಾರಣರು :** ಶ್ರೀ ಶ್ರೀ ಶ್ರೀ ಕಾಶೀಪುರವರಾಧೀಶ್ವರ ರಾಜಾಧಿರಾಜ
ಪ್ರತಾಪಸೇನ ಮಹಾರಾಜರಿಗೆ ಬಹುಪರಾಕುsss!

**ಪ್ರಸೇನ :** ಸ್ವಸ್ತಿ ಸ್ವಾಗತ ತಮಗೆ ಬಹುಮಾನಿತ ಭೂಪತಿ ಸ್ತೋಮಕೆ
ಮೂವರು ಕನ್ಯಾಮಣಿಗಳು ಇವರು ಅಂಬೆ, ಅಂಬಿಕೆ,
ಅಂಬಾಲಿಕೆಯರು
ಇವರನ್ನು ಗೆಲ್ಲಬೇಕು
ವರಮಾಲೆ ಸಲ್ಲಬೇಕು
ಇದಕೆ ವೀರಶುಲ್ಕ
ಮನ್ನಿಸಿರಿ ನಿಷ್ಕಲಂಕ!

**ವೃಂದಗೀತ :** ಆದರೆ ತಲುಪಲೆ ಇಲ್ಲ ಹೇಗೆ?
ಸೌಭರಾಜ ಶಾಲ್ವನಿಗೆ
ಹಾಗೆಯೇ ಕುರುಕುಲ ಹಸ್ತನಿಗೆ
ಹೋಗಿಲ್ಲ ಲಗ್ನದೊಸಗೆ!
ಶಾಲ್ವನೆಡೆಗೆ ಓಡಿದರು
ಅವನ ಗುಪ್ತ ಬೇಹುಗರು

ಕಾಶಿರಾಜನ ಖಟಾಟೋಪ
ಕೇಳಿ ಶಾಲ್ವನಿಗೆ ಪಿತ್ತ ಪ್ರಕೋಪ!

ಲ್ವ : ಸೌಭರಾಜ ಶಾಲ್ವನಾ
ನನಗಿಲ್ಲ ಆಮಂತ್ರಣಃ!
ಕಾಶೀರಾಜನ ಕರೆ
ಪಡೆದನು ಪ್ರತಿಯೊಬ್ಬ ದೊರೆ
ನಾನಾದೆ ಕಣ್ಮರೆ
(ಸಿಟ್ಟನಿಂದ)
ಮುರಿದೊಗೆವೆನು ಅವನ ಗರ್ವ
ವಿಜೃಂಭಿಸಲಿ ಯುದ್ಧ-ಪರ್ವ
ಕಾಶೀರಾಜ ಕುಮಾರಿಯರು
ಇನ್ನು ನನ್ನದೆ ಅರಸಿಯರು!
ಇದೇ ನನ್ನ ಮನೋರಥ
ಎಲೆ, ಸಾರಥಿ ಹೂಡು ರಥ!
(ಖುರಪುಟ ಚಕ್ರಗಳ ಗತಿಭಾರ ಸದ್ದು)

ೃಂದಗೀತ : ಗಂಗಾತೀರದೊಳಿಹರು
ಮೂವರು ಅರಗುವರಿಯರು
ನಡೆದಿದೆ ಚೆಲುವಿನ ಆಟ
ಶಾಲ್ವನ ಕಂಗಳ ಮಾಟ!
ಅಡಗಿಹ ಭೂಪ
ನೋಡಿದ ರೂಪ
ಅದುವೆ ದೈವದ ಶಾಪ!
(ನೀರಾಟದ ನಗೆ ಕೇಕೆ ಸಂಭ್ರಮ ಹಿನ್ನೆಲೆಯಲ್ಲಿ ಯೋಗ್ಯವಾದ್ಯ ಸಂಗೀತ)

ುಮಾರಿಯರು : ಇಂದುಮುಖಿಯರೆ!
ಸುಂದರ ಸಖಿಯರೆ!
ಆಡಿರಿ ಜಲಕ್ರೀಡೆ
ಬಿಟ್ಟು ಭಿಡೆ - ವ್ರೀಡೆ
ಏನಿದು ಚಕ್ಕಂದ
ಸಖಿ, ಸಖಿ, ಸಖಿ
ನಾವ್ ಅತಿ ಸುಖಿ
ಹಿಗ್ಗಿನ ಉಕ್ಕಂದ

ಶಾಲ್ವ : ಯಾರಿವರು - ಕಾಮಾಕ್ಷಿ
ಈ ಚೆಲುವಿಗೆ ನಾ ಸಾಕ್ಷಿ
ನಿಂತಿಹೆ ಪೊದೆಯಲಿ ಪಕ್ಷೀ!

ಅಂಬೆ : ಅಲ್ಲಿ ನೋಡು ಅಂಬಾಲಿಕೆ
ಮಾಮರಕ್ಕೆ ತೆಕ್ಕೆ
ಆ ಮಲ್ಲಿಗೆ ಬಳ್ಳಿ
ಗಾಳಿಯೊಡನೆ ತಳ್ಳಿ!

ಅಂಬಾಲಿಕೆ : ನೀನೊಂದು ಮಳ್ಳಿ!
ನಿನಗೂ ಅಂಥ ಗೆಳೆಯ
ಸಿಗುವನು ಬೇಡ ಭಯಾ

(ಎಲ್ಲರ ಕಲಿಕಲಿ)

ಅಂಬೆ : ಮರದ ಬೆನ್ನಿಗೆ ಬಳ್ಳಿಯೋಟ
ಬಳ್ಳಿಗೇ ಮರ ಭಾರ-ದಿಟ!

ಅಂಬಿಕೆ : ಮರವೋ ಮುಳ್ಳ ಕಂಟಿಯೋ
ನೀನೆಂಥ ಹುಚ್ಚ ತುಂಟಿಯೋ
ಇಂದಿನ ಬಳ್ಳಿಗೆ ನಾಳಿನ ಫಲ
ಯಾರ ಮಾಲೆಗಿದೆ ಯಾರ ಕೊರಳು?

ಅತ್ತೆ : (ತಡೆಯದೆ ಮುಂದೆ ಬಂದು)
ತಾಳಿರಿ ತಾಳಿರಿ! ನನ್ನನು ಕೇಳಿರಿ!
ನನ್ನ ಕೊರಳಿಗೇ ಮಾಲೆ, -ಕುಮಾರಿ!

ಕುಮಾರಿಯರು : (ದಿಗಿಲು)
ಅವ್ವಯ್ಯ! ನೀನಾರಯ್ಯ!
ಹೇಗೆ ಬಂದಿನೀನಿಲ್ಲಿಗೆ?

-ಹೋಗಯ್ಯಾ?

ಶಾಲ್ವ : ಸೌಭ ದೇಶದ ದೊರೆ
ಶಾಲ್ವ ನನ್ನ ಹೆಸರು
ನಾಳೆ ಸ್ವಯಂವರಕೆ
ನಾನೇ ಸ್ವಯಂ-ವರ ನಿಜಕೆ!
ನಿಮ್ಮ ಬಾಗ್ಯಕೆ-ನಾನೇ ನೇಸರು!
(ತನ್ನ ಸಿಂಗಾರವನ್ನು ನೋಡಿಕೊಳ್ಳುತ್ತ ನಗುತ್ತ ನಿಲ್ಲುವ)

ಮಾರಿಯರು : (ತಮ್ಮಲ್ಲಿಯೇ)
- ನೋಡಲು ಚೆಲುವ
- ಮಾತಿಗು ಚತುರ
- ಬಾಸಿಗ ಬಿಗಿಯಲು
- ಬಹಳ ಆತುರ! (ನಗುವರು)

ಲ್ವ : ಅಪ್ಸರೆಯರಲಿ ರಂಭೆ
ಹಾಗೆ ನಿಮ್ಮೊಳು ಅಂಬೆ
ಯಾರು? ಯಾರು? ಏನೆಂಬೆ?
ಯಾರು ಯಾರೋ-ನಾನೆಂಬೆ!

ಂಬೆ ಮೌನ

ಳಿದವರು : ನಾಳಿನ ವಧು
ಇಣಕುವಳದೊ
ಬಳ್ಳಿಯಂತೆ
ಬಳಕುವಳದೊ
ಮರದ ಮುಂದೆ.
ಈ ಇಲ್ಲಿ ನಿಂತಿದೆ
ಕೆಂದಾವರೆ!
ನಾಚಿ ಕೆಂಪು ಮೋರೆ! (ನಗು)
(ಅಂಬೆ ಹುಸಿಮುನಿಸಿನಲಿ ಅಂಬಾಲಿಕೆಯ ಚಿವುಟುವಳು)

ಅಂಬಾಲಿ : ಅಯ್ಯೋ! ಅಂಬೆ! ನೋಡೆ ಇಲ್ಲಿ
ಏಕೆ ಚಿವುಟು ಏನು ಕಳ್ಳಿ!
ಈ ಇಲ್ಲಿದೆ - ನೋಡಿಕೊಳ್ಳಿ
ಅಂಬೆಯಲ್ಲ ಉರಿಕೊಳ್ಳಿ

ಅಂಬೆ : ಚಿವುಟು ಅಲ್ಲ ತಪರಾಕಿ
ಕೊಡುವದಿದೆ ಬಾಕಿ!
-ಅಧಿಕ ಪ್ರಸಂಗಿ!

ಅಂಬಾಲಿ : ಅಂಬೆ ಈಕೆ
ನಾ ಅಂಬಾಲಿಕೆ
ಇವಳೇ ಆ ಲವಂಗೀ!

ಶಾಲ್ವ : (ನಿಟ್ಟುಸಿರು) ಯಾರ ಭಾಗ್ಯದಲ್ಲಿದೆಯೋ
ಈ ಶುಭಾಂಗೀ!
ಯಾರಿಗೆ ಅರ್ಧಾಂಗೀ!

**ಅಂಬೆ :** (ವಿನಯ)
ರಾಜಾ ಅಹುದು ನಾನೆ ಅಂಬೆ
ನನ್ನ ಹೆಸರು ಏಕೆ? ಎಂಬೆ

**ಶಾಲ್ವ :** ಮಾಡುವೆಯಾ ಅನುಗ್ರಹ?

**ಅಂಬಾ :** .. ಏನಿದು ಆಗ್ರಹ?

**ಅಂಬಿಕೆ :** ಅಹುದೆನೇ ಅಕ್ಕಾ

**ಅಂಬಾಲಿಕೆ :** ಬಳ್ಳಿಗೆ ಮರ ಸಿಕ್ಕ!

**ಅಂಬೆ :** (ಹುಸಿ ಮುನಿಸು)
ಹೊಯ್ಮಾಲಿ! ವಾಚಾಳಿ!
ನಾನೆ ಹೇಳ್ವೆ, ತಾಳಿ
ರಾಜನ್ ನನ್ನ ಹತ್ತಿರ
ನಿಮಗಿಲ್ಲ ಉತ್ತರ
ನಾಳೆಗಿದೆ ಸ್ವಯಂವರ
ವೀರಶುಲ್ಕ ಗೆಲ್ಗೆ ವರ
ಕಾದಾಡಿರಿ ಬಲವತ್ತರ
ಗೆದ್ದವರ ಚರಣಕೆ
ನಾವು ಶರಣು - ಕಾಣಿಕೆ!

**ಶಾಲ್ವ :** ನಾನು ಸಿದ್ಧ ಆದರೆ
ಆತನಕ ತಡೆಯಲಾರೆ
(ದೈನ್ಯದಿಂದ) ಜೀವ ನಿನ್ನ ಎದೆಗೆ ಸೆರೆ
ಬದುಕಲಾರೆ ನಾಳೆವರೆ-
ನೀವೀಗ ಒಪ್ಪದಿರೆ!
ಸ್ವಯಂವರ ಈಗಲೆ
ಕೈಗೆ ಕೈ ಬಿಡದಲೆ
ರಥವನೇರು-
ತಡೆವರಾರು?

**ಅಂಬೆ :** (ಅಧೀರಳಾಗಿ) ಬೇಡ ಬೇಡ ವೃಥಾ
ಹಿಡಿಯಬೇಡ ಹಟ
ಈಗ ಒಲ್ಲೆ ಸರ್ವಥಾ
ಹೀಗೆ ನಿನ್ನೊಡನೋಡಲು
ಜಗಕೇ ನಗೆ ಪಾಟಲು?

ತೊರೆದು ಕುಲಾಚಾರ
ಮರೆತು ತಂದೆಯ ವಿಚಾರ
ಮೆರೆದು ಮನೋವಿಕಾರ
ಬರುವೆನೆಂತು ನಾನು?
ಇದು ಮರುಳು ಅಲ್ಲವೇನು?

ಶಾಲ್ವ : ಅಂತು ಪ್ರಾಣ ಹೀರುವಿ!

ಅಂಬೆ : ಶೀs ಶೀs ಏನನ್ನುವಿ?
ನಾಳೆ ನಿನ್ನ ಕೊರಳೊಳೆ
ನನ್ನ ತೋಳ ಜಯಮಾಲೆ!

ವೃಂದಗೀತ : ಬಂತು ಬಂತು ಮರುದಿನ
ದೊರೆಗುವರರ ದಿಬ್ಬಣ್ಣ
ಸ್ವಯಂವರಕೆ ಸಿದ್ಧರಣ
ಶಾಲ್ವನ ಬಲಕುಲ್ಬಣ!

ಶಾಲ್ವ : ಪ್ರತಾಪಸೇನಾ! ಹೇ ಮುಠ್ಠಾಳಾ!
ಶಿಕ್ಷೆ ಮೊದಲು ನಿನಗೆ
ಕರೆಯೆ ಇಲ್ಲ ನನಗೆ

ಪ್ರತಾಪ : ಕ್ಷಮಿಸು ಶಾಲ್ವ, ಮರೆತೆ!
ತಡಮಾಡಿದ ದೂತ
ಸೌಭಕೆ ಕಳುಹಿದೆ ಆಮಂತ್ರಣ
ಮೊದಲೆ ಆಯ್ತು ನಿನ್ನಾಗಮನ!
ಆದುದೆಲ್ಲ ಒಳ್ಳೆಯದೇ
ವೀರಶುಲ್ಕ ಗೆಲ್ಲುವದೇ
ಈಗ ನಿಮ್ಮ ಕಾರ್ಯ!
ನೀವೆ ವೀರವರ್ಯ!

ಶಾಲ್ವ : ಅದು ನಮಗನಿವಾರ್ಯ!
ಸಂತೋಷ, ಬಲು ಸಂತೋಷ!
ಮಾಡಿಲ್ಲವೆ ಮೋಸ?
ತಣಿಯಿತೆನ್ನ ರೋಷ!
ನಿನ್ನ ಕನ್ಯಾರತ್ನಗಳಿಗೆ
ನನ್ನ ತೊಡೆಯೇ ಹೊನ್ನತಳಿಗೆ!
(ಪ್ರಚಂಡ ಶಂಖಧ್ವನಿ. ವೀರಗರ್ಜನೆ)
ಇದೇನು ಸ್ತೋಮ!

**ಎಲ್ಲರು :** ಭೀಷ್ಮ! ಭೀಷ್ಮ! ಭೀಷ್ಮ ಬಂದ!

**ಭೀಷ್ಮ :** ಅರಸರೋ ಅಗಸರೋ ಮಾಡಿ ದಾಳಿ
ನಾ ಬಂದೆ! ನನ್ನೊಡನೆ ಹೂಡಿ ವೈಹಾಳಿ
ಕತ್ತೆಗಳೆ! ತುಳಿದಾಡಿರಿ ಧೂಳಿ!
ಬಾಯ್ತುಂಬ ಧೂಳಿ!
ಬಂದಿಗೆ ಭೋರ್ಗರೆವ ಬಿರುಗಾಳಿ!
**(ಎಲ್ಲರೂ ಭಯ ಚಕಿತರು. ಬಹುಭೀತರು)**

**ಅರಸರು :** ಅಯ್ಯಾ! ಶಂಖಧ್ವನಿ
ಭೀಷ್ಮನ ರಣದುಂದುಭಿ!

**ವೃಂದಗೀತ :** ಬಂದನು ಪ್ರಚಂಡ ಭೀಷ್ಮ
ಕೇಡಿನ ಕಾಡಿಗೆ ಉರಿಗ್ರೀಷ್ಮ!
ಸ್ವಯಂವರದ ಪಲಾಂಗಣ!
ಅರಸರೋ ಅಗಸರೋ
ಅಗಸರ ಕತ್ತೆಗಳ ಹೆಸರೋ!

**ಅರಸರ ಕೂಗೂ :** ಭೀಷ್ಮ! ಪಿತಾಮಹ ಭೀಷ್ಮ! ಗಾಂಗೇಯ ಭೀಷ್ಮ! ಶಾಂತನವ
ಭೀಷ್ಮ ದೇವವ್ರತ ಭೀಷ್ಮ! ಶರಣು ಶರಣು ಶರಣು!
**(ಎಲ್ಲ ಒಮ್ಮೆಲೆ ಸ್ತಬ್ಧ ಮೌನ)**

**ಭೀಷ್ಮ :** ಕುರುಸಾಮ್ರಾಟರ ಆಜ್ಞೆ! ವಿಚಿತ್ರ ವೀರರ ಪ್ರತಿಜ್ಞೆ!
ಸ್ವಯಂವರವು ಉಧ್ವಸ್ತ!
ಇದು ಅವ್ಹಾನ ಸರ್ವ ಸಮಸ್ತ!
ಕುರು ಸಾಮ್ರಾಟರ ಮರೆತ
ಆಮಂತ್ರಣ ಅಸ್ತವ್ಯಸ್ತ!
ಕಾಶಿರಾಜನು ಭ್ರಾಂತಿಗ್ರಸ್ತ
ಸ್ವಯಂವರವೇ ಸಮಾಪ್ತ!

**ಕಾಶೀರಾಜ :** ಅಡ್ಡಬಿದ್ದೆ ಸೆರಗೊಡ್ಡಿದೆ
ಕ್ಷಮಿಸಿ ಕ್ಷಮಿಸಿ, ಎಡವಿದೆ.
ವೀರಶುಲ್ಕ ತಮ್ಮದು
ಕನ್ನೆಯರ ಕೈ ಹಿಡಿದು ಉದ್ದರಿಸಿ

**ಭೀಷ್ಮ :** **(ಸಂತುಷ್ಟ)**
ಕುರುಕುಲ ಚಕ್ರವರ್ತಿ
ಸರ್ವರತ್ನಕಧಿಪತಿ

ಸ್ವೀಕರಿಸಿದೆ ಈ ಕನ್ಯಾರತ್ನ
ವ್ಯರ್ಥ ನಿಮ್ಮ ಯುದ್ಧದ ಯತ್ನ!
ಸಾಕು ಮಾಡಿರಿ ಅಣಕದ ಯುದ್ಧ
ಪರಾಕ್ರಮದ ಬಾಯಬಡಿವಾರ ಶುದ್ಧ
ಏನೆಲ್ಲ ನಿಮ್ಮ ದರ್ಪ?
ನೀವೆಲ್ಲ ನಿರ್ವಿಷ ಸರ್ಪ!

(ಅಟ್ಟಹಾಸ)

ಬನ್ನಿರಿ ಕನ್ನೆಯರೇ,
ರಥವೇರಿರಿ ಮಾಡಿ ತ್ವರೆಕುರು ಪತಿಗಿದು ವೀರಪಣ
ಸ್ವಯಂವರವು ಪೂರ್ಣ
ಇನ್ನಾರಿಹರು ಇದಿರು?
ಬನ್ನಿ ಮುರಿವೆನವರ
ಒಣ ಹೆಮ್ಮೆಯ ಬಿದುರ!

ಎಲ್ಲ ಅರಸರು : ನಾವು ಸೋತೆವು
ಶಸ್ತ್ರವಿಟ್ಟೆವು
ಕೈಯ ಕಟ್ಟಿದೆವು?
ಭೀಷ್ಮನಿಗೆ ಜಯ
ಯಾರಿಗೆ ಭಯ?
ಶರಣು ಬಂದಿಹೆವು!

ಶಾಲ್ವ : ಶಾಲ್ವನಲ್ಲ ಶರಣು
ನೀವೆಲ್ಲರು ಹೇಡಿ
ಭೀಷ್ಮನ ಭಟ್ಟಂಗಿ
ಹಸಿಹುಸಿ ಸೂಲಂಗಿ!
ನನ್ನದು ಪ್ರತಿಭಟನೆ.

ಭೀಷ್ಮ : ಇದು ಬರಿ ಒಣ ನಟನೆ
ನಿನಗಿದು ದುರ್ಘಟನೆ.

ಶಾಲ್ವ : ಅರಸರಡ್ಡ ಬಿದ್ದರು
ನಾನು ಅಡ್ಡ ಹಾಯುವೆ.

ಭೀಷ್ಮ : ಹಾಯು ಹಾಯು
ಬಿದ್ದು ಸಾಯು
ಒಂದೆ ಒದೆತಕೆ ಭಂಗ

ಒದ್ದೆಯಾಯಿತು ಜಂಘ!
**(ಶಾಲ್ವನನ್ನು ಒದ್ದು ಕೆಡುಹಿ ಗಹಗಹಿಸಿ ನಗುತ್ತ ರಥ ಓಡಿಸಿ ಹೋಗುವನು)**

**ವೃಂದಗೀತ :** ರಾಜಮಾತೆ ಸತ್ಯವತಿಯ ಸನಿಯ ಭೀಷ್ಮನರುಹಿದ ಗೆದ್ದ ಕನ್ನೆಯರ ಕಥೆ

**ಭೀಷ್ಮ :** ಅಮ್ಮಾ ಕಾಶೀರಾಜನ ಕನ್ನೆಯರು ಅಂಬೆ, ಅಂಬಿಕಾ, ಅಂಬಾಲಿಕೆಯರು. ಅಂಬೆ ಹಿರಿಯಳು.

**ಸತ್ಯವತಿ :** ನಿನ್ನ ವರಿವಳು

**ಭೀಷ್ಮ :** ಶಾಂತಂ ಪಾಪಂ!
ಶಾಂತಂ ಪಾಪಂ!

**ಅಂಬೆ :** ಆಂ ಏನು ಪಾಪ?
ಇದು ಅಪಲಾಪ!
ನಿನ್ನ ಪ್ರತಾಪ ನಾ ಬಲ್ಲೆ!

**ಭೀಷ್ಮ :** **(ನಕ್ಕು)** ಏನು ಬಲ್ಲೆ?
ಜಗಕೆ ಗೊತ್ತು
ನನ್ನ ಪತ್ತು!
ನೀನು ತಿಳಿಯಲೊಲ್ಲೆ
ಅದರ ಗತ್ತು!
ನೀನು ಏನು ಬಲ್ಲೆ?

**ಅಂಬೆ :** ಪಣವ ಗೆದ್ದ ಕಣದಲ್ಲೇ
ನಿನ್ನಿಂದಲೆ
ನಾ ಐದೆಯಲ್ಲೇ?

**ಭೀಷ್ಮ :** ಮುಗುದ ಬಾಲೇ
ನಾ ಮದುವೆಯಾಗಲೊಲ್ಲೆ!
ತಂದೆನು ನಿಮ್ಮನು
ತಮ್ಮವರಿಸುವನು
ನಾನು ಅವನ ಬಂಟನು
ಅಂದು ಭೂಪರೆಲ್ಲರೂ
ಇದನು ಬಲ್ಲರು.
ನಾನು ಬ್ರಹ್ಮಚಾರಿ
ಸಾವಿನನಕ ವ್ರತಧಾರಿ
ಸತ್ಯವ್ರತಕೆ ಕೊನೆ ಇಲ್ಲೆ!

**ಅಂಬೆ :** ಅಯ್ಯೋ! ನನ್ನ ಬಾಳೆ ಭಗ್ನ!
ನಿನ್ನ ಸತ್ಯ ನನಗೆ ವಿಘ್ನ!
ಘೋರ ಪಾಪ ಪೂರ್ತಿ ನಗ್ನ!
ಕೈಯ ಪಿಡಿದು ರಥವೇರಿಸಿ
ಸರಿದು ಮೈಯ್ಯ ಕುಳ್ಳಿರಿಸಿ
ಅರಸರೆದುರು ಸೂರ್ಯಸಾಕ್ಷಿ
ತಂದಿರೆನ್ನ ಪರಿಗ್ರಹಿಸಿ

**ಭಿಷ್ಮ :** ನಿಮ್ಮನೆಲ್ಲ ತಂದೆನು
ತಮ್ಮಗೆ ವಧುವೆಂದೆನು
ನಾನು ಪ್ರತಿಜ್ಞೆಗೆ ಪೂರ್ತಿ
ಬದ್ಧನು ಸತ್ವವ್ರತಿ!
ದೇವವ್ರತ ಧಾರಿ
ಅಮರಣ ಬ್ರಹ್ಮಚಾರಿ!
ಹೇ ಪರಮ ಸುಂದರಿ
ನನ್ನ ಮುದ್ದು ಸೋದರಿ!

**ಅಂಬೆ :** ಏನು ಏನು ಹೇಳುವಿ!
ಕಂಡೆನೇನು ಕನಸ
ಏನಾದುದು ಮೋಸ!
ಅಯ್ಯೋ! ಎಂಥ ಅಪಾಯ!

**ಭೀಷ್ಮ :** ನನ್ನದು ನಿರುಪಾಯ
ನಾನು ಅಸಹಾಯ
**(ಚಿಂತಿಸಿ)** ಬೇರೆ ಏನುಪಾಯ?

**ಅಂಬೆ :** ಉಳಿದಿದೆ ಒಂದಾಸೆ
ಅದ ನೀನು ಪೂರೈಸೆ
ನೀಡುವಿಯಾ ಭರವಸೆ?

**ಭೀಷ್ಮ :** **(ಕುತೂಹಲ)** ಏನದು ಆ ಆಶೆ?
ಹೇಳು ಮಾತು
ಆಡಿದೆನಾನಿದೋ
ಅದಕೆ 'ತಥಾಸ್ತು'?

**ಅಂಬೆ :** (ನಾಚಿಕೊಂಡು)
ಸ್ವಯಂರದ ಮುನ್ನ
ಶಾಲ್ವ ರಾಜನೆನ್ನ

ಕದ್ದನೋ ಹೃದಯಾ
ನನ್ನಲ್ಲಿ ಆ ಮನೀಷ
ಅವನನ್ನೆ ವರಿಸೆ!
ಪೋಪೆನು ಅವನೆಡೆಗೆ
ಬಿಡುವಿಯಾ ಕಡೆ
ನೀನಹುದೆಂದರೆ
ಶಾಲ್ವನೆ ಆಸರೆ

**ಭೀಷ್ಮ :** ಹೋಗು ಹೋಗು ನೀ ಸುಕುಮಾರಿ
ನನಗಿದು ಬಿಡುಗಡೆ! ಆಭಾರಿ!

**(ಅಂಬೆ ಹೋಗುವಳು)**

ಅರಿತಿರೆ ಈ ಮೊದಲೆ
ತರುತಿಹೆನೇ ರಥದೊಳೆ?
ನನ್ನದಲ್ಲ ದೋಷ
ಅಂಬೆಯದೇ ಮೂಕವೇಷ!
ಶಾಲ್ವನಲ್ಲಿ ಸಲ್ವಳು
ಅಂತು ಸುಖವ ಗೆಲ್ವಳು!

**ವೃಂದಗೀತ :** ಶಾಲ್ವನಿದ್ದಲ್ಲಿಗೆ ಬರುವಳು ಅಂಬೆ
ಬೆಂಕಿಗೆ ಹೊಯ್ಯಲು ಎಣ್ಣೆಯ ಚಂಬೆ!

**ಅಂಬೆ :** ಪ್ರಿಯ ಶಾಲ್ವ ಜೀವದ ಗೆಳೆಯಾ!

**ಶಾಲ್ವ :** ಭಯ ಜ್ವಾಲೆ ಜೀವವ ಕಳೆಯಽ

**ಅಂಬೆ :** ನಾನಿನ್ನ ಚರಣದಾಶಿ

**ಶಾಲ್ವ :** ಛೇ! ಅಲ್ಲ ಕೊರಳ ಫಾಶಿ!

**ಅಂಬೆ :** ಸ್ವಯಂವರದ ಮುಂಚೆ
ದೇಹ ನಿನಗೆ ಚಾಚೆ
ಮರೆತೆಯಾ ಆ ಪ್ರಣಯ

**ಶಾಲ್ವ:** ಅಯ್ಯೋ! ಅದೆಂಥ ಪ್ರಲಯ!

**ಅಂಬೆ :** ನೀನು ನನಗೆ ಪ್ರೀತ

**ಶಾಲ್ವ :** ನನಗೆ ನೀನು ಪ್ರೇತ!
**(ತೀವ್ರವಾಗಿ)** ಅಂಬೇ!ಽಽ
ಆ ಭೀಷ್ಮನ ರಥವೇರಿದೆ

ಅವನ ಸನಿಹ ಸೇರಿದೆ
ಆಗಲೆ ನೀ ಮಡಿದೆ

ಅಂಬೆ : ಬೇಡ, ಬಿಡು ಈ ಜಲ್ಪ
ಭೀಷ್ಮ ಮಹನುಭಾವ!

ಶಾಲ್ವ : ಆತ ಮಹನುಭಾವ!
ಮತ್ತೆ ನಾನು ಯಾರು? ದೆವ್ವ!
ಹೆಣ್ಣೆ! ಕೈಮುಗಿವೆ
ಮರಳಿ ಏಕೆ ಬರುವೆ?
ಬಂದದಾರಿ ಚಂದ
ಆ ಮಹನುಭಾವ ಷಂಡ!
ಅವನೆ ಯೋಗ್ಯಗಂಡ!

ಅಂಬೆ : ಪ್ರೀತಿಯ ಬಳ್ಳಿ ಅರಳಿತು ಅಗೆ
ಆ ಹೂವೆಲ್ಲ ಚೆಲ್ಲಿದೆ ನಿನಗೆ!

ಶಾಲ್ವ : **(ಕೋಪಾಟೋಪದಿಂದ)**
ಹೂಗಳನೆಲ್ಲ ತುಳಿದಿಹೆನಂದೇ
ಭೀಷ್ಮನ ಮುಡಿಗಿಡು ಅವುಗಳ ದಂಡೆ!
ಹೋಗೇ ವ್ಯಭಿಚಾರಿಣೀss!

ಅಂಬೆ : ಶಿವ! ಶಿವ! ಏನೀನಾಡುವಿನೀ

ಶಾಲ್ವ : ಕಣ್ಣದು ಸುಳ್ಳೇ?
ನಾನೇನ್ ಮಳ್ಳೇ?
ಭೀಷ್ಮನೆ ಬೆನ್ನಲೆ
ರಥವೇರಿದೆ ಛಲೆ!
ಕೈ ಹಿಡಿದೆಳೆದನೆ?

ಅಂಬೆ : **(ಅಳುತ)** ಬಲಾತ್ಕಾರವನೆ
ಲೆಕ್ಕಿಸಿ ಬಿಕ್ಕಿದೆ
ಸೆರೆಯೊಳು ಸಿಕ್ಕಿದೆ

ಶಾಲ್ವ : ಕಾಲಿಗೆ ಜಡಿಯಿತೆ ಸಂಕೋಲೆ?
ತಡದನವನೆ ಕೆಳ ಹಾರದಲೆ?

ಅಂಬೆ : ಅದೇ ನನ್ನ ತಪ್ಪು

ಶಾಲ್ವ : ತಪ್ಪಲ್ಲ! ನಿನಗದು ಒಪ್ಪು!

**ಅಂಬೆ :** ಇಲ್ಲವೆ ಕ್ಷಮೆ ಇದಕೆ?

**ಶಾಲ್ವ :** ಅದು ಏಕೆ ಕ್ಷಮೆ ಏಕೆ?
ಕೆಟ್ಟಿದೆ ಹಾಲು
ಒಡೆದಿದೆ ಮುತ್ತು
ಎಂದು ಎಲ್ಲ ಇದೆ
ತಿದ್ದುವ ಹೊತ್ತು?
ನೀನು ಸುಮ್ಮನಾದಿ
ಭೀಷ್ಮನ ಮುಖ ನೋಡಿ
ಹಿಡಿ ಆತನ ಹಾದಿ!

**ಅಂಬೆ :** (ಬಿಕ್ಕಿ) ಒಡೆಯಿತು ನನ್ನ ಕಪಾಳ!

**ಶಾಲ್ವ :** ಧರ್ಮಕೆ ಕರ್ಮ ತ್ರಿಶೂಲ!

**ಅಂಬೆ :** ಮಾತಮರ್ಮ ತಿಳಿಯಿತು!

**ಶಾಲ್ವ :** ಜನ್ಮದ ಋಣ ಅಳಿಯಿತು!

**ಅಂಬೆ :** ಮನವೆನ್ನದು ಕೆಟ್ಟಿತು!
ಪೂರಾ, ಹಾಯ್ ಕೆಟ್ಟಿತು!
ಓ ಶಾಲ್ವಾ ಪುರುಷೋತ್ತಮಾ
ಓ ನನ್ನ ಪ್ರಿಯತಮಾ!

ಜನರಲ್ಲಿ ಬನದಲ್ಲಿ
ಮನದಲ್ಲಿ ಚಿಂತನದಲ್ಲಿ
ದಿನರಾತ್ರಿ ನೀನಂತು
ನನ್ನ ಆಶಾ ತಂತು
ಪಟಬಾನಿಗೆ ಹಾರಿದೆ
ಕೈಯು ದಾರ ಹಿಡಿದಿದೆ
ಅಂತೆಯೇ ನಿಮ್ಮಲ್ಲಿಗೆ
ಬಂದೆ ನಾನು ಬಿರುಮಲ್ಲಿಗೆ!

**ಶಾಲ್ವ :** ಸರಿ ಸರಿ ಪರಂತು
ನೀನು ಹೀನ ಕ್ಷುದ್ರ ಜಂತು!
ಹೋಗ ನಡೆ ನಿಲ್ಲಬೇಡ

**ಅಂಬೆ :** ಬೇಡ ನನ್ನ ದೂರಬೇಡ
ಹೀಗೆ ದೂರ ತೂರಬೇಡ!

ಈ ಪಾದಕ ನನ್ನ ತಲೆ

ಲ್ವ : ರೋಷ! ಈ ತಲೆಗೆ ನನ್ನ ಪಾದ!
ಕೋ ಈ ಲತ್ತೆ, ಬೇಕೆ ಮತ್ತೆ?

ಂಬೆ : (ಅಳುತ್ತ) ಅಯ್ಯಯ್ಯೊ! ನಾನಾದೆ ಅನಾಥೆ! ಗತಿಗೇಡಿ! ಬೀಡಾಡಿ

ಲ್ವ : ಹೂಂ ಬೀಡಾಡಿ ನಾss ಯಿ? - ಸಾಯಿ?

(ಅಂಬೆ ಹೋಗುವಳು)

ೃಂದಗೀತ : ಗೋಗರೆಯುತ ಕಂಬನಿಗರೆಯುತ
ಗಾಯಗೊಂಡ ಜಿಂಕೆ
ಮರಳಿ ಭೀಷ್ಮನಲ್ಲಿ ಬರಲು
ಸಿಗದು ಅಲ್ಲಿ ಅಂಕೆ!
ಬಿಡದು ಆವಳ ಶಂಕೆ!

ೀಷ್ಮ : ಮತ್ತೆ ಬಂದಿಯೇಕೆ?
ಸನ್ನಡೆ
ಮತ್ತೆ ಬಂದಿಯೇಕೆ?

ಂಬಾ : ಹೇ ಧರ್ಮಜ್ಞಾ, ಓಪ್ರಾಜ್ಞಾ!
ದಾರಿತೋರಿಸೆನಗೆ
ಬಾಳಿನ
ದಾರಿ ತೋರಿಸೆನಗೆ

ೀಷ್ಮ : ಶಾಲ್ವನ ಮೆಚ್ಚಿ
ಹೋದೆಯಾ ಹುಚ್ಚಿ!
ಅವನೂ ಕೈಬಿಟ್ಟನೆ?
ತಟ್ಟನೆ
ಅವನೂ ಕೈ ಬಿಟ್ಟನೆ?

ಂಬಾ : ನೀನು ಮುಟ್ಟಿ
ನಾನು ಕೆಟ್ಟೆ
ನಿನ್ನ ರಥದಿ ಇಂಬು ಕೊಟ್ಟೆ!
ದೇವರ ಪರಮಾನ್ನ
ಆಯ್ತು ನಾಯಿಯೆಂಜಲ!
ನನ್ನ ಬಾಳೆ ನಂಜಲ!

ದುಷ್ಟಾ!
ನನ್ನ ಬಾಳೆ ನಂಜಲ!

ಭೀಷ್ಮ : ಭದ್ರೇ! ಉದ್ರೇಕದ ಮಾತೇಕೆ?
ಕರ್ಮದ ಕಥೆ ಘೋರ ವಿಲಾಸಿಕೆ!
ಮತ್ತೆ ಕೇಳಬೇಕೇ?
ಅಂಬೆ
ಮತ್ತೆ ಕೇಳಬೇಕೇ?

ಅಂಬೆ : ಹಾಗಿದ್ದರೆ ನನಗಾಶ್ರಯನೀಡು
ಆಗಿಹೆ ಅಸಹಾಯ

ಭೀಷ್ಮ : ನನ್ನದು ನಿರುಪಾಯ!

ಅಂಬೆ : ನಿನಗಿದು ತರವೇ?
ಪತಿ ಇದ್ದರು ನಾ ವಿಧವೆ!
ಎನಗಿದು ತರಲೆ? **(ಅಳುವಳು)**
**(ಒಮ್ಮೆಲೆ ರೊಚ್ಚು)**

ಭೀಷ್ಮ : ಈ ಗೋಳಿಗೆ ನೀನೆ ಕಾರಣ!
ನನ್ನದಿದರ ನಿರಾಕರಣ
ಸ್ವಯಂವರದಿ ಮೌನವಾಸ
ಗೈದೆ ನೀನು, ಅದರ ಶಾಪ
ಆಗಿದೆ ಈ ರೂಪ!
ನಿಜಕೂ
ಆಗಿದೆ ಈ ರೂಪ!
ಕರ್ಮದ ಫಲ ತಪ್ಪದು
ಆಗುವದೇ ಅಪ್ಪುದು!
ಈಗಾದರು ಮನಗಾಣೆ
ವೃಥಾ ಕೋಪ ಮಾಣೆ
ನಿರಪರಾಧಿ ನಾನು!

ಅಂಬೆ : **(ಕೋಪ ಭ್ರಾಂತಳಾಗಿ)**
ಭೀಷ್ಮಾ ಧೂರ್ತಾ ನೀನರಿಯೆ
ಸ್ತ್ರೀ ಮುನಿದರೆ ಹೆಮ್ಮಾರಿ!
ಕೆರಳಿಸಿದನು ಶೂರ್ಪನಖಿಯ
ರಾಮಗಾಯ್ತು ಎಂಥ ಗತಿ?

ಚೆಂಡಿನಂತೆ ಅತ್ತ ಇತ್ತ
ತೂರಾಡಿದಿ ನನ್ನ ಗತಿ
ಹೆಣ್ಣ ಕರುಳ ನುರಿಸಿಡಿ
ಚಂಡಾಳಾ! ದುರ್ಮತಿ!
ನಿಮ್ಮೊಂದಿಗೆ ಕುರುಕುಲ
ಸೇರವದು ರಸಾತಳ!

ೀಷ್ಮ : (ನಕ್ಕು) ನಾನು ಇಚ್ಛಾಮರಣಿ!

ಂಬೆ : (ಉನ್ಮತ್ತಳಾಗಿ) ನಾನು ಸ್ವೇಚ್ಛಾರಮಣಿ!

ೀಷ್ಮ : ಹೇ ಸ್ವೈರಾಚಾರಣೀ
ಶಾಂತಳಾಗು ಹತಭಾಗಿನೀ!

ಂಬೆ : ಶಾಂತಿ! ಶಾಂತಿ! ಬರಿ ಭ್ರಾಂತಿ!
ಭೀಷ್ಮವಧೆಯ ನಂತರ
ಶಾಂತಿಯ ಮನ್ವಂತರ
ಇನ್ನು ಆ ಪರ್ಯಂತರ
ಬಿರಿದುರಿಯುವೆ ನಿರಂತರ!
ಸೇಡಿನದೇ ಎತ್ತರ
ಕೇಡಿನದೇ ಬಿತ್ತರ

ೀಷ್ಮ : ಶಾಂತಳಾಗು ಸೋದರಿ
ಸೈರಿಸು ಬಾಳಿನುರಿ
ಮಾಡು ತಪಸ್ಸ
ನೋಡು ರಹಸ್ಯ
ಭ್ರಾಂತಿ ವ್ಯರ್ಥ ಉಸಾಬರಿ!
ಹೆಣ್ಣಿಗೆ ಸಲ್ಲದೀ ಪೌರುಷ!

ಂಬೆ : (ಮತ್ತೆ ಉನ್ಮಾದವೇರಿ)
ನಾನಲ್ಲ ಹೆಣ್ಣು ನಾನಲ್ಲ ಗಂಡು
ನಾ ನಿರ್ಲಿಂಗಿ! ಘೋರ ಸೇಡು!
ಹೆಣ್ಣ ಕೊಂದನು ಶಾಲ್ವ
ಗಂಡು ಕದಡಿದ ಭೀಷ್ಮ
ಹೆಣ್ಣಿನ ದ್ವೇಷ ಗಂಡಿನ ತ್ವೇಷ
ಬೆರೆತಿತೇರಿದೆ ಜ್ವಾಲೆ ಭುಗಿಲು
ಭೀಷ್ಮ ಬಲಿಪಶು ಇದಕೆ ಆಗಲು

ಧಗಧಗಿಸುವದ್ಯೆ ಇರುಳು ಹಗಲು
**(ಅಟ್ಟಹಾಸ)**
ಜಗದಲಿ ಯಾರಿಯರೆನ್ನಂದ?
ಹತಭಾಗಿನಿ ನಾ **(ಒಮ್ಮೆಲೆ ಅಳು)**
ಕಣ್ಣಿದ್ದರು ಅಂಧ!
ನಾನವಿವೇಕೀ!
ನಾನತಿರೇಕೀ!
ಸಾಲ್ವ ಪಾತಕೀ
ಭೀಷ್ಮ ಘಾತಕೀ
ಮಗಳನೆ ಪಣಕಿಟ್ಟ
ಆ ತಂದೆ -
ಆ ಅರೆನಾಟಕೀ! ಹಃ ಹಃ ಹಃ!
ಎಲ್ಲರನು ಪುಟ್ಟಿಸಿದ
ಮಹಾಮೂಢನೇ
ಆ ವಿಧಾತಾ! ಏಕಾಕೀ!
ಹಃ ಹಃ ಹಃ

ಭೀಷ್ಮ : **(ಕಳವಳದಿಂದ)**
ಅಂಬೆ! ಅಂಬೆ!
ಇದೇನೆಂಬೆ?
ಬರಿದೆ ನೋವನುಂಬೆ!
ಸಾಕು ಉದ್ವೇಗ
ಶಾಂತಳಾಗು ಬೇಗ!

ಅಂಬೆ : ನೋಡುವಿ ನೀನೀಗ
ಇದರ ಆವೇಗ!
ನೋಡು ನೋಡು ಅಂಬೆಯ ಛಲ
ನಿನ್ನ ವಿನಾಶ ನಿಶ್ಚಲ!
ನನ್ನ ಪ್ರೀತಿ-ಪ್ರೇತ
ನಿನಗೆ ಪೆಡಂಭೂತ
ಅದಕ್ಕೆ ಭಸ್ಮೀಭೂತ
ನಿನ್ನ ಮಹಾಭಾರತ!

ಭೀಷ್ಮ : ಆಹಾ! ಏನಿದು ಉತ್ಪಾತ!
ಆಗದ ಆ ಖ್ಯಾತ

ಅಂಬೆ : ಆಗದೇ? ಇಲ್ಲ, ಈಗಿದೆ
ಇಲ್ಲವೆ ಶತಘ್ನಿ!
ಕಾಮಾಗ್ನಿ ಕ್ರೋಧಾಗ್ನಿ
ವಿರಹಾಗ್ನಿ ಚಿಂತಾಗ್ನಿ
ಚಿತಾಗ್ನಿ-ಕೃತಘ್ನಿ
ಇದೇ ನನ್ನ ಪಂಚಾಗ್ನಿ
ಪುನರ್ಜನ್ಮ ಹೊಂದಿ
ನಾ ಸಿದ್ಧ ರಣಚಂಡಿ
ಅಗ್ನಿ ಶಿಖಂಡಿ
ನೀನು ನಿದಂಡಿ
ನನ್ನಿಂದ ನೀ ಕಂಡೀ
ಮರಣ, ಪಾಖಂಡೀ!

ಬೀಷ್ಮ : ತಥಾಸ್ತು ಅಂಬೇ ತಥಾಸ್ತು
ಆಗದಿರು ದುರುದುಂಬಿ
ತಾಮಸವ ನಂಬಿ
ಯಾರದು ಅಪಾಧ?
ಯಾರಿಗೆ ಈ ದಂಡ?
ನನ್ನಿಂದಾಯಿತೆ ಹೆಣ್ಣು ನಷ್ಟ?
ನಾ ದೀನ ಗತಿ ಹೀನ
ಅಯ್ಯೋ ಹಾ ಕಷ್ಟ!

ವೃಂದಗೀತ : ಅಡವಿಗೆ ಹೋಗುತೆ
ಹೂಡಿದಳು ಚಿತೆ
ಅದನೇರಿದಳಾ-
ನಗೆ ವಿಕರಾಳಾ!
(ಹಾಗೆ ನಗೆ ಹಿನ್ನೆಲೆಯಲ್ಲಿ)
ಭುಗಿಲೇರಿತು ಬೆಂಕಿ
ಅಂಬೆಯೊ ಅಕಲಂಕಿ
ಜ್ವಾಲಾಮಾತೆ
ಮೊಲಘಿತು ಮೇಲೆ
'ಭೀಷ್ಮ ವಧಾಯ!
ಬೀಷ್ಮ ವಧಾಯ!'

# ಅತ್ತೆಗೆ ಲತ್ತೆ

(ಒಂದು ಏಕಾಂಕ: ಕೌಟುಂಬಿಕ ಪ್ರಹಸನ)

## ಪಾತ್ರಗಳ ಪರಿಚಯ

| | | |
|---|---|---|
| ಕಾವೇರಮ್ಮ | : | ಅತ್ತೆ |
| ಪಾರ್ವತಮ್ಮ | : | ಅತ್ತೆಯ ಗೆಳತಿ |
| ನಿರ್ಮಲೆ | : | ಮುಗ್ಧ ಸೊಸೆ |
| ಬೇಬೀ | : | ಅತ್ತೆಯ ಮಗಳು |
| ವೇಣು | : | ಸೊಸೆಯ ಗೆಳತಿ (ಪಾರ್ವತಮ್ಮನ ಮಗಳು) |
| ತಾರಾಬಾಯಿ | : | ಬೇಬಿಯ ಅತ್ತೆ. |

ತಿರುಕ.

# ಅತ್ತೆಗೆ ಲತ್ತೆ

(ಒಂದು ಮುಂಜಾವು. ಹಕ್ಕಿಗಳ ಚಿಲಿಪಿಲಿ. ದನಗಳ ಕೊರಳ ಗಂಟೆಗಳ ಸದ್ದು. ದೂರದಲ್ಲಿ ದೇವರ ಗುಡಿಯ ನಗಾರಿ. ನಾಗ ಸ್ವರ (ಶಹನಾಯಿ.)

ಕಾವೇರಮ್ಮನ ಮನೆ. ಹೊಸ್ತಿಲ ಮುಂದೆ ಸೊಸೆ ನಿರ್ಮಲೆ ರಂಗವಲ್ಲಿ ಬರೆಯುತ್ತಿದ್ದಾಳೆ. ನಿಧಾನವಾಗಿ ಪುರಂದರದಾಸರ ಸೊಲ್ಲೊಂದು ಹಾಡುತ್ತಿದ್ದಾಳೆ-ಉದಯ ರಾಗದಲ್ಲಿ)

ನಿರ್ಮಲೆ : 'ಹಕ್ಕಿ ಚಿಲಿಪಿಲಿ ಗೈಯಲಿ
ಕೋಗಿಲೆಯು ಸರವೀಯಲಿ
ನಾಗಸಂಪಿಗೆ ಅರಳಲಿ
ಭಾನು ಉದಯವಾಗಲಿ!
ಭಾನು ಉದಯವಾಗಲಿ! ऽऽऽऽ

(ರಂಗವಲ್ಲಿ ಹಾಕುತ್ತಿದ್ದಂತೆ ಸೊಲ್ಲು ಮಂದವಾಗುತ್ತದೆ. ಆಗ ದೂರದಿಂದ ಒಬ್ಬ ತಿರುಕಿ (ಹುಡುಗಿ) ದೇವರ ನಾಮ ಹಾಡುತ್ತ ಬರುತ್ತಾಳೆ.)

ತಿರುಕಿ : (ಹಾಡುತ್ತ)

'ಆಗಲೂ ನೀ ಕಾಯಬೇಕು
ಈಗಲೂ ನೀ ಕಾಯಬೇಕು
ಬಗವತಿವಾಹನ ವೆಂಕಟರಮಣಾ!
ಆಗ ಈಗ ಪೋಪಾಗ
ಸ್ವಾಮೀ ನೀನಲ್ಲದೆ
ಅನ್ಯ ರಕ್ಷಿಪರಾರು
ಪುರಂದರಾ ವಿಠ್ಠಲಾ!

ನಿರ್ಮಲೆ : ಓಽ ಅಮ್ಮಾ! ನಿಮ್ಮ ವಿಳಾಸ ತಪ್ಪಿತು! ಇದು ಪುರಂದರ ವಿಠ್ಠಲನ ಮನೆಯಲ್ಲ! ಇಲ್ಲಿ ಯಾವ ಸ್ವಾಮಿಗಳು ಇಲ್ಲ! ಮುಂದೆ ಹೋಗಮ್ಮಾ! ಈ ಮನೆಯಲ್ಲಿ ಬೇಡಲು ಬಂದವರಿಗೆ ಬಿಕ್ಕೆ ಇಕ್ಕಲೂ ನನಗೆ ಗತಿಯಿಲ್ಲ, ಅಮ್ಮಾ! (ನಿಟ್ಟುಸಿರು ಬಿಡುವಳು).

ತಿರುಕಿ : ಅಯ್ಯೋಽ! ಅಮ್ಮಾ ಹಾಗನ್ನಬೇಡಿ. ಇಂದು ಸಂಪತ್ ಶುಕ್ರವಾರ! ಮನೆಗೆ ಮಂಗಲ ಬರೆಯಲು ಕೂತಿರುವಿರಿ! ನೋಡಿ, ಮಂಗಳಾಗೌರಿಯಂತೆಯೇ ಕಾಣುವಿರಿ! ಹೀಗೆಲ್ಲ ಅಮಂಗಳ ಆಡಬಾರದಮ್ಮಾ ಏನಾದರೂ ಇಕ್ಕಿರಮ್ಮಾ! ಬೇಡಲು ಬಂದವಳಿಗೆ-

ನಿರ್ಮಲೆ : ನಾನೇ ಬೇಡುತ್ತೇನೆ ತಂಗೀ, ಮುಂದಕ್ಕೆ ಹೆಜ್ಜೆ ಹಾಕಿ. ಮುಂಜಾನೆ ಎದ್ದು ಅಮಂಗಲಕ್ಕೆ ಅವಕಾಶ ಮಾಡಿಕೊಡಬೇಡಿರಿ. ಇದೀಗ ಅತ್ತೆಮ್ಮಾ ಹಾಲು ಕೊಡಲು ಹೋಗಿದ್ದಾರೆ! **(ಗಾಬರಿ ಆಗಿ)** ಅದೋ ಬಂದೇ ಬಿಟ್ಟರು! ಲಗು ನಡಿಯಮ್ಮಾ! ಅವರು ನೋಡಿದರೆ-

**(ಅತ್ತೆ ಕಾವೇರಮ್ಮ ಬರುವಳು. ತಿರುಕಿ ಕಾಲುಕೀಳಹತ್ತುತ್ತಾಳೆ.)**

ಕಾವೇರಮ್ಮ : **(ಬಂದು)** ಏನೇ, ಸೊಸೆ, ಎದ್ದ ಮುಂಜಾವಿಗೇ ಅತ್ತೆ ಅತ್ತೆ ಎಂದು ಶುರುಮಾಡೇ ಬಿಟ್ಟಿಯಾ ರಂಭಾಟ? ಆಂ!

ನಿರ್ಮಲೆ : **(ಗಾಬರಿಯಾಗಿ)** ಏನಿಲ್ಲ ಅತ್ತೆಮ್ಮಾ ಒಬ್ಬ ಬೇಡುವಾಕಿ ಬಂದಳು. ಅತ್ತೆಮ್ಮ ಇಲ್ಲವೆಂದು ಅಟ್ಟಿ ಹಾಕಿದೆ. ಅದೋ ಹೋಗುತ್ತಿದ್ದಾಳೆ!

ಅತ್ತೆ : ಹೋದಳೇ! ನೀ ಯಾರೇ ಮನೆಗೆ ಬಂದವರನ್ನು ಹೊರಗೆ ಅಟ್ಟುವವಳು? ನಾನಿನ್ನೂ ಇದ್ದೇನಲ್ಲ ಜೀವಂತ! ದೆವ್ವದ್ಹಾಂಗೆ ಬದುಕಿದ್ದೀನಿ! ನಾನು ಕಣ್ಣು ಮುಚ್ಚಿದ ಮೇಲೇ ನೀನು ಬಾಯಿ ತೆರೆಯುವದು! ಬಿಕ್ಕೆ ಬೇಡಲು ಬಂದವಳಿಗೆ ' ಇಲ್ಲ, ಒಲ್ಲೆ ' ಅನ್ನುವದಕ್ಕೂ ನಿನಗೆಲ್ಲಿಂದ ಬಂತೇ? ಆಂ? ಯಾರು ಕೊಟ್ಟರು? ಎಲ್ಲಿ? ಎಲ್ಲಿ ಹೋದಳು ಆ ತಿರುಕಿ? ಏ,ಏss ಬೇಡುವಾಕೀ! ಬಾ. ಬಾ ಇಲ್ಲಿ - ನಾನೇ ಕರೆದದ್ದು. **(ಸೊಸೆಗೆ)** ಅಟ್ಟಿದೆಯಂತೆ ಅಟ್ಟಿದೆ! ನಿನಗೇ ತವರಮನೆಗೆ ಅಟ್ಟುತ್ತೇನೆ! ಆಗ ಅಲ್ಲಿ ಚಲಾಯಿಸು ಇದೆಲ್ಲ ಪಾರುಪತ್ಯ! ಏss, ತಿರುಕೀ ಬಾ ಇಲ್ಲಿ! **(ದೇವರ ನಾಮ ಗುಣುಗುತ್ತ ಆ ಭಿಕ್ಷುಕಿ ಬರುವಳು.)**

ತಿರುಕಿ : ಬಂದೆನವ್ವಾ ಬಂದೆ! ಕಾಡಬೇಡಿ, ಸೊಸೆಯಮ್ಮನನ್ನು. ಮುತ್ತಿನ ಮಣಿಯಂತೆ ಇದ್ದಾಳೆ ಮುದ್ದು ಮುದ್ದಾದ ಹುಡುಗಿ! ನಿಮ್ಮ ಮನೆಯ ಭಾಗ್ಯಲಕ್ಷ್ಮೀ!

ಅತ್ತೆ : ಏ ಪಿಶಾಚಿ, ಮುಚ್ಚು ಬಾಯಿ. ನಿನಗೆ ಕರೆದದ್ದು ಈಕೆಯನ್ನು ಹೊಗಳಲಿಕ್ಕೆ ಅಲ್ಲ! ಹರಕುಬಾಯಿ. ನಿನಗೆ ಹೋಗೆಂದು ಹೇಳಲು ಇವಳು ಯಾರು? ಇವಳು ಹೇಳಿದಳೆಂದು ಹೊರಟೆದ್ದು ಹೋಗುವವಳು ನೀನು ಯಾರು? ಆಂ? ಮನೆಯ ಯಜಮಾನಿ ನಾನು! ನಾನೇನು ಇನ್ನು ಸತ್ತಿಲ್ಲ! ದೊಡ್ಡ ದೆವ್ವದ್ಹಾಂಗೆ ಜೀವಂತ ಇದ್ದೀನಿ! ಯಜಮಾನಿ ನಾನು. ಬರುವವರಿಗೆ ಹೋಗು, ಹೋಗುವವರಿಗೆ ಬಾ - ಎಂದು ಹೇಳುವ ಅಧಿಕಾರ ನನ್ನದು. ಈಗ ಬಂದಿಯಲ್ಲ-ನಾ ಕರೆದೆನೆಂದು ಸರಿ. ಇನ್ನು ಹೋಗು ನಡಿ, ಹೂಂ ಕಾಲ್ದೆಗಿ. **(ತಿರುಕಿ ಗಾಬರಿ, ತಬ್ಬಿಬ್ಬು ಆಗಿ ಹೊರಡುವಳು)** ಮತ್ತೆ ಜೋಕೆ. ನಾಳೆಗೀಳೆ ಬಂದಾಗ ನಾನು ಹೇಳದೆ ಹೋದಿಯಾದರೆ! ಜೋಕೆ! ಬಿಕ್ಕೆಗೆ ಗತಿ ಇಲ್ಲ! ಸೊಕ್ಕಿಗೆ ಮಿತಿ ಇಲ್ಲ! ನಡಿ ಹೋಗು!

**ತಿರುಕಿ :** ಶಿವಾ ಶಿವಾ! ಇದೆಲ್ಲೀ ಯಜಮಾನಿಕೆ! ಸೊಸೆ ಇಕ್ಕಲಿಲ್ಲ, ಅತ್ತೆ ಇಕ್ಕುವರೋ ಎಂದುಕೊಂಡೆ! ಆದರೆ ಈ ಅಮ್ಮ ಒಂದು ಗುಮ್ಮನ್ನೇ! **(ಹೋಗುವಳು)**

**ಅತ್ತೆ :** ಏನೇನೋ ಗೊಣಗುತ್ತ ಹೋದಳು! ಸತ್ತವರಿಗೆ ಬೇರೆ ಕೆಲಸವೇ ಇಲ್ಲ. ಹೊತ್ತಾರೆ ಎದ್ದರು. ಹೊಲಸುಮೂತಿ ಹೊತ್ತುಕೊಂಡು ಹೊರಟರು. ಊರ ಸುತ್ತಾಡಲು! ಮತ್ತೆ ಬರಲಿ, ಕಾಲು ಮುರಿದು ಕೈಗೆ ಕೊಡುತ್ತೇನೆ, ಹೂಂ. ಏ ನಿರ್ಮ್ಲಾ, ನಿಂತೆ ಏನು ಮೂಕಿಯಂತೆ! ಸಾಕು ನಿನ್ನ ಸಾರಣೆ ರಂಗೋಲಿ. ನಡಿ ಒಳಗೆ!

**ನಿರ್ಮಲೆ :** ಹೊರಟೆ ಅತ್ತೆಮ್ಮಾ, ಆಗೇ ಹೊರಟಿದ್ದೆ. ನೀವೇ ತಡೆದಿರಿ.ಹೊರಟೇ ಬಿಟ್ಟೆ! **(ಉಪಕರಣಗಳನ್ನೆಲ್ಲ ಎತ್ತಿಕೊಂಡು ಒಳಗೆ ಹೋಗುವಳು).**

**ಅತ್ತೆ :** ಹೂಂ. ಮತ್ತೆ ಇದಿರುತ್ತರ ಇದ್ದೇ ಇದೆ! ಹೊರಟವಳು ಹೋಗಿಯೇ ಬಿಡು. **(ನಿರ್ಮಲೆ ಹೋಗುವಳು)** ಇದೂ ಒಬ್ಬ ಸೊಸೆ! ಕಲಿತವಳು ಬೇರೆ ಮತ್ತೆ! ಏನೋ ಮಾತೃಕ್ಲೇಶನ ಮುಗಿಸಿದ್ದಾಳಂತೆ! ಮಾತೃ ಕ್ಲೇಶನ್ನೋ ಪಿತೃಕ್ಲೇಶನ್ನೋ! ಬಿಡಿಕಾಳಿನಷ್ಟೂ ಬುದ್ಧಿ ಇಲ್ಲ. ಆಂ? ಅದಾರು? ಓss ಪಾರ್ವತಮ್ಮನವ್ರೇ! ಬನ್ನಿ ಬನ್ನಿ - ಇದೇನು? ಇಂದು ಕಾಗೆಯೊಂದಿಗೇ ಗೂಡು ಬಿಟ್ಟಿರಿ! ( **ಪಾರ್ವತಿಯ ಪ್ರವೇಶ).**

**ಪಾರ್ವತಿ :** ಬುದ್ಧಿ ಇಲ್ಲದ ಬಿಡಿ ಕಾಳು ಯಾವದು? ಅಲ್ಲೆ ನಿಮ್ಮ ಅಬ್ಬರ ಕೇಳ್ತಾ ನಿಂತೆ! ಇದೇನು, ಕಾವೇರಮ್ಮ, ಒಳ್ಳೆ ಕಾವೇರಿದಂತೆ ಕಾಣ್ತಾ ಇದೆ! ಇಷ್ಟೇಕೆ ಕೋಪ? ಸೊಸೆ ಕಪ್ಪುಬಸಿ ಏನಾದರೂ ಒಡೆದಳೇ?

**ಕಾವೇರಿ :** ಇನ್ನು ಒಡೆಯಲಿಲ್ಲ! ಒಳಗೆ ಕಳುಹಿಸಿದ್ದೇನೆ. ಸದ್ಯ ಬಿಕ್ಕೆ ಬೇಡುವವರ ಬೂಟಾಟಿಕೆ. ಭಾರಿ ಜೋರಾಗಿದೆ. ಮನೆಯಲ್ಲಂತೂ ಖರ್ಚು ಕಡಿಮೆ ಮಾಡಿದಷ್ಟೂ ಕಡಿಮೆಯೇ! ಮೊನ್ನೆ ಸಪ್ತಾಹದ ಕೀರ್ತನೆಯ ಸಮಾಪ್ತಿ. ಬರೆ ಬತ್ತಾಸಿನ ಕಾಣಿಕೆ ಹಾಕಿ ಕೈ ಮುಗಿದೆ.

**ಪಾರು :** ನಿಮ್ಮ ಭಾಗ್ಯ ದೊಡ್ಡದಮ್ಮಾ! ನಿನ್ನೆ ನಮ್ಮ ಮನೆಯವರಿಗೆ ಕೆಮ್ಮು ವಿಪರೀತ. ಕಷಾಯಕ್ಕೆ ಬಂದು ಬತ್ತಾಸೂ ಸಿಗಲಿಲ್ಲ. ಈಗ ಗೊತ್ತಾಯ್ತು ಗುಟ್ಟು. ಪೇಟೆಯ ಬತ್ತಾಸೆಲ್ಲ ನಿಮ್ಮ ಬಾಗಿನ ದಾನಕ್ಕೇ ಎಲ್ಲ ಹೋದವೇನೋ. ಯಾವ ಕೀರ್ತನೆಗಾರರಿಗೆ ಕೊಟ್ಟಿರಿ? ಅವರಿಗಾದರೂ ನಾಲ್ಕು ಕಾಸು ಕೊಟ್ಟು ಎರಡು ಬತ್ತಾಸು ತರುತಿದ್ದೆ, ಹೇಳಿರಿ.

**ಕಾವೇ :** ಇರಲಿ ಬಿಡಿ. ನಿಮ್ಮನಗೆಮಾತು. ನಿಮಗೇನು? ಕೆಮ್ಮುಕೀರ್ತನೆ ಎಲ್ಲ ಒಂದೇ. ತಮಾಷೆಗೆ ಒಂದು ಅವಕಾಶ! ಹೇಳುವ ತಾತ್ಪರ್ಯವೇನೆಂದರೆ ಇಷ್ಟೆಲ್ಲ ಕೈ ಬಿಗಿ ಹಿಡಿದು ಕಟ್ಟುನಿಟ್ಟಿನಿಂದ ಸಂಸಾರ ಸಾಗಿಸುವಾಗ ಈ ಬಿಕ್ಕೆಯವರಿಗೆ ಅಕ್ಕಿ ಕಾಳು ಎಲ್ಲಿಂದ ತರಬೇಕು? ನೀವೇ ನೋಡಿ.

ಪಾರು : ಹೌದವ್ವಾ! ನೀವಾದರೂ ಹರಿದಾಸರಿಗೆ ಒಂದು ಬತ್ತಾಸು ಕೊಟ್ಟಿರಿ. ನಮ್ಮ ಹಣೆಯಲ್ಲಿ ಅದೂ ಬರೆದಿಲ್ಲವಮ್ಮಾ! ಅಂಥ ಪುಣ್ಯವೂ ಇಲ್ಲ! ಕಳೆದ ಚಾತುರ್ಮಾಸದಲ್ಲಿ ಪುರಾಣ ನಡೆಯಿತು. ಆ ಪುರಾಣಿಕರಿಗೆ ಒಂದು ಪಟ್ಟೆಯ ಪಂಚೆಯನ್ನು ಕೊಡಲು ಆಗಲಿಲ್ಲ! ನನ್ನ ನಶೀಬ! **(ಕಣ್ಣು ಒರಿಸಿಕೊಳ್ಳುವಳು)**

ಕಾವೇರಿ : ಯಾವ ಪುರಾಣಿಕರೇ? ಆ ತಿರುಪೆ ಅಗ್ರಹಾರದ ವಕ್ರತುಂಡ ಭಟ್ಟರೇನೇ? ಅವರಿಗೇಕೆ ಪಟ್ಟೆಯ ಪಂಚೆ? ಅವರಿಗೇಕೆ ಜರತಾರೀ ಶಾಲು? ಅವರಿಗೆ ಒಮ್ಮೆ ಸಂತೆಯಿಂದ ತಂದ ತರಕಾರೀ ಪಾಲು ಕೊಟ್ಟರೂ ಸಾಕು. 12 ಮಾಸ ಪುರಾಣ ಹೇಳಿ ಹೋಗುವವರು ಅವರು!

ಪಾರು : ಅದೂ ಸರಿಯೇ. ಆದ್ರೂ ನಮ್ಮ ಕುಲಾಚಾರ ಬಿಡಲಾಗುವದೇ? ಇದೋ ನೋಡು ಮಂಗಳಾಗೌರಿಗೆ ಮೊನ್ನೆ ನಮ್ಮ ಮಗಳನ್ನು ಕರೆಯಿಸಿಕೊಂಡೆ. ಜತೆಗೆ ಅಳಿಯ ದೇವರ ಸವಾರಿಯೂ ಬಂದುಬಿಟ್ಟಿತು! ಬಂದ ಮೇಲೆ ಅಳಿಯನ ಪೂಜೆ ಸರಿಯಾಗಿ ಆಗಬೇಕು, ತಾನೇ? ಉಂಗುರ-ಉಡುಗೊರೆ, ದಾನ ಅದೂ ಇದೂ, 1000 ರೂಪಾಯಿ ಸಾಲವು! ಅಳಿಯನಿಗೆ ಅಷ್ಟು ಹಣ ಅಳೆಯದಿದ್ದರೆ ನಾಳೆ ಅತ್ತೆಯ ಮನೆಯಲ್ಲಿ ನನ್ನ ಮಗಳು ಬದುಕಬೇಕಲ್ವೆ - ಮುಖ ಎತ್ತಿ?

ಕಾವೇರಿ : ಹೌದವ್ವಾ, ಹೌದು. ಈ ಅತ್ತೆಯಂದಿರೇನು? ಎತ್ತಲೂ ಲತ್ತೆ ಕೊಡುವ ಕತ್ತೆಗಳೇ?

ಪಾರು : ಅಂಥ ಹತ್ತು ಕತ್ತೆ ಒತ್ತೆ ಇಟ್ಟರೂ ಇಬ್ಬರೂ ಒಬ್ಬ ಅತ್ತೆಯ ಕಿಮ್ಮತ್ತು ಕಟ್ಟಲು ಆಗಲಿಕ್ಕಿಲ್ಲ! ಹೆಣ್ಣು ಹುಲಿ ಮರಿಗಳನ್ನೆ ತಿನ್ನುತ್ತದೆ. ಆದರೆ ಈ ಅತ್ತೆಯೆಂಬ ಕೆಟ್ಟ ಹುಲಿ? ಪರರ ಮಕ್ಕಳನ್ನೂ ನುಂಗುವ ದೆವ್ವ!

ಕಾವೇರಿ : ಅಹುದವ್ವ. ಪರರ ಮಕ್ಕಳನ್ನೆ ಅನ್ನಿ. ನಮ್ಮ ಮಕ್ಕಳು ನಮಗೆ ಮುದ್ದು.

ಪಾರು : ಮತ್ತೆ ಪರರ ಹೆಣ್ಣು ಮಕ್ಕಳಿಗೆ? ( **ನಗುತ್ತಾಳೆ ತುಂಟ ದನಿ** ).

ಕಾವೇರಿ : ಅವರಿಗೆ ನಾವು ಹಳೆ ಹದ್ದು! ಮತ್ತೇನು? **(ತಾನೂ ನಗುತ್ತಾಳೆ ಅರ್ಥವರಿಯದೇ)** ನೂರಕ್ಕೆ ನೂರು ಪೈಸೆ ನಿಮ್ಮ ಮಾತು! ನಿಜ ನೋಡಿ. ಹಾಗೆ ನೋಡಿದರೆ ನಾವೂ ಅತ್ತೆಯವರೇ. ಆದರೆ ಅತ್ತೆ ಎಂದರಾಯಿತೇ? ಆ ಅಂಥ ಅತ್ತೆಯರ ತರವೇ ಬೇರೆ. ಕೊಟ್ಟಷ್ಟೂ ಸಮಾಧಾನವಿಲ್ಲ. ಆ ಸೊಸೆ ದುಡಿದಷ್ಟೂ ಸಂತೋಷವಿಲ್ಲ! ನಾನು ಇದ್ದ ಮಾತು ಆಡುವಾಕಿ! ಒಳಗೊಂದು ಹೊರಗೊಂದು ನನ್ನಿಂದಾಗದು. ಹಾಂ!

ಪಾರು : ತಿಳಿಯಿತು ಬಿಡಿ. ನಾನೂ ನೋಡ್ತೇನಲ್ಲ ದಿನಾಲು. ಆಗ ಬರುವಾಗಲೇ

ಕೇಳಿದೆ! ಇರಲಿ ಬಿಡಿ. ನಾನಿನ್ನು ಬರ್ತೇನೆ. **(ಹೊರಡುವಳು)**

ಕಾವೇರಿ : **(ಅವಳನ್ನು ತಡೆದು)** ಛೇ ಛೇ ಉಂಟೇ? ಬಂದು ನಿಂತಮಟ್ಟಿಗೆ ಹೊರಟಿರಲ್ಲ! ತುಸು ಕೂತು ಹೋಗಿರಿ. ಚಹಾ ಮಾಡಿಸ್ತೇನೆ. ಏ, ನಿರ್ಮ್ಮಾss ನಿರ್ಮಲಾss ! ಎಲ್ಲಿ ಕತ್ತೆ ಕಾಯಲು ಹೋದಳೋ! ನಿಂತಲ್ಲಿ ಜನ್ಮ ಕೂತಲ್ಲಿ ಯುಗ ಕಳೆಯುವ ಕುರುಡು ಹಾವು! ಸೊಸೆಯಾಗಿ ಬಂದಿದೆ! ಏ ನಿರ್ಮ್ಮೀsss ಎಲೆ ನಿರ್ಮ್ಮೀ!sss

ನಿರ್ಮಲೆ : **(ಧಾವಿಸಿ ಬಂದು)** ಏನು ಕರೆದಿರಿ, ಅತ್ತೆಮ್ಮ?

ಕಾವೇರಿ : ಎಲ್ಲಿ ಸತ್ತಿದ್ದೀಯೇ? ಕೂಗಿ ಕೂಗಿ ಗಂಟಲು ಗಳವಾಯಿತು, ಒಡೆದು!

ನಿರ್ಮಲೆ : ಬಾವಿಗೆ ಹೋಗಿದ್ದೆ, ನೀರು ಸೇದಲು.

ಕಾವೇರಿ : ಇಕೋ ವೇಣೂಳ ಅಮ್ಮ ಬಂದಿದ್ದಾಳೆ. ಎರಡು ಲೋಟ ಚಹಾ ಮಾಡು.

ನಿರ್ಮಲೆ : **(ನೋಡಿ ನಗುತ್ತ)** ಈಗ ತರ್ತೇನೆ. ಪಾತಮ್ಮ ವೇಣಿ ಚೆನ್ನಾಗಿದ್ದಾಳೆಯೇ? ಮತ್ತಾರು ಬಂದಿದ್ದಾರೆ? ವೇಣೂನ ಇಲ್ಲಿ ಕಳಿಸು, ಸ್ವಲ್ಪ.

ಕಾವೇರಿ : **(ಸಿಡುಕಿ)** ಸಾಕು ಸಾಕು! ವೇಣೂನ ಕಳಿಸುತ್ತಾರೆ! ಹೊಸ ಮದುವಿ. ಗಂಡ ಬೇರೆ ಬಂದಿದ್ದಾನೆ. ಆಕಿ ಗಂಡನ ಜತೆಗೆ ಇರದೆ ಇಲ್ಲಿ ನಿನ್ನ ಹಾಳು ಹರಟೆ ಕೇಳಲಿಕ್ಕೆ ಬರುತ್ತಾಳೆಯೇ?

ಕಾವೇರಿ : ಏ ಇನ್ನು ನಿಂತೇ ಇದ್ದೀ! ಹೋಗು ಚಹಾ ಮಾಡಿ ತಾ! **(ನಿರ್ಮಲೆಯ ನಿರ್ಗಮನ)** ನಿಂತೇ ಬಿಟ್ಟಳು-ಗಂಡನ ಮಾತು ಕಿವಿಗೆ ಬಿತ್ತೆಂದು! ಮೂಕಾಂಬಿಕೆ! ಗಂಡ ಗಂಡ ಎಂದೊಡನೆ ಕೈ ಮೈ ಎಲ್ಲ ಮರೇತೇ ಬಿಟ್ಟಳು! **(ನಿರ್ಮಲೆ ಬಂದಿಲ್ಲ ಎಂಬುದನ್ನು ನೋಡುತ್ತ)** ಪಾರ್ವತಮ್ಮ ನೀವೂ ಒಂದು ಗೊಡ್ಡು. ಈ ಸೊಸೆಯನ್ನು ನನ್ನ ಮಗನ ಹತ್ತಿರ ಕಳಿಸಿದರೆ ತೀರೇ ಹೋಯ್ತು! ಅವನು ಇವಳ ಕೈಯ ಗೊಂಬೆಯಾಗಿ ಕುಣಿದಾಡುವವನೇ!

ಪಾರು : ಅದೂ ಸರಿಯೇ. **(ನಿರ್ಮಲೆಯ ಆಗಮನ. ಚಹಾ-ಉಪಕರಣ ಗಳೊಂದಿಗೆ)**

ನಿರ್ಮಲೆ : ಇಲ್ಲಿ, ಅತ್ತೆಮ್ಮಾ ಇಕೊಳ್ಳಿ. ಒಂದು ಕ್ಷಣದಲ್ಲಿ ಮಾಡಿ ತಂದೆ ಚಹಾ-**(ನಗುತ್ತ ಕೊಡುವಳು.)** ಕುಡಿಯಿರಿ ಪಾರ್ವತಮ್ಮಾ ನಾ ಬಂದೆ. ವೇಣೂಗೆ ಬರಲು ಹೇಳಿ. **(ಹೋಗುವಳು)**

ಪಾರು : ಅರೇ! ಹೋಗೇ ಬಿಟ್ಟಳು! ಮಿಂಚಿನ ಮರಿ! ನಿಮ್ಮ ಮಗ ಮರುಳಾಗದೇ ಮತ್ತೇನು? ಪಾಪ. ಒಳ್ಳೆಯ ಕೂಸು! ಲಕ್ಷಣವಾಗಿದ್ದಾಳೆ. ಕ್ರಮೇಣ ಬುದ್ಧಿ ಬರಬೇಕು. ನಮ್ಮ ವೇಣೂನ ಸಂಗಾತಿ.

ಕಾವೇರಿ : ಗಂಡ ಇವಳ ಕೈಗೊಂಬೆ ಆಗದೇ ಏನು ಮಾಡ್ಯಾನು?

ಪಾರು : ಹೌದಪ್ಪಾ! ಏನು ಸೂಟಿಯಾಗಿದ್ದಾಳೆ! ಚಿಕ್ಕವಳಾದರೂ ಚಿಕ್ಕೆಯಂತಿದ್ದಾಳೆ!

ಕಾವೇರಿ : ಇರಲಿ ಬಿಡಿ. ಇವಳು ಇಂದು ಚಿಕ್ಕೆ. ನಾಳೆ ನೋಡು, ಅಂಗೈಯ ಬೊಕ್ಕೆ ಆಗಿ ಗಂಡನನ್ನು ಕಾಡ್ತಾಳೆ, ಹಾಂ! ನೀಗೆ ನಿಮ್ಮಂಥ ಬರ ಹೋಗುವವರು ಬೇಕಾಬಿಟ್ಟಿ ಹೊಗಳಿ ಈ ಹುಡುಗಿ ಹದಗೆಟ್ಟಾಳೆ!

ಪಾರು : ಛೇ ಛೇ ಹಾಗಲ್ಲ!

ಕಾವೇರಿ : ಹಾಗಲ್ಲ ಹೀಗೆ! ಅದನ್ನು ಬಿಡಿ ನಾನೇನು ಅಂತಿದ್ದೆ? ಹಾಂ! ಅತ್ತೆಯಂದಿರ ಮಾತು. ನಾನು ಇದ್ದ ಮಾತು ಆಡುವಾಕಿ. ಹಾಂ, ಸೊಸೆನ ಕಾಡುವ ಅತ್ತೆ ಹಸೆಗೆ ಅಂಟಿದ ತಗಣೆ ಒಂದೇ. ಕಂಡಲ್ಲಿ ಒದೆಯಬೇಕು. ಹಾಂ!

ಪಾರು : ಅದೂ ಸರಿಯೇ, ಅಲ್ಲ, ನಿಮ್ಮ ಮಗ ಎಲ್ಲಿದ್ದಾನೆ? ಅವನಾದರೂ ನಿರ್ಮಲೆಯನ್ನು ಕರೆಯಿಸಿಕೊಂಡಿಲ್ಲ, ಏಕೆ?

ಕಾವೇರಿ : ಏನು ಹೇಳಲಿ? ನಮ್ಮ ಹಣೆಬರಹವೇ ಹಾಳು. ನಮ್ಮ ಬಾಳಾ ಸಾಹೇಬನಿಗೆ ಈಗ ವರ್ಗವಾಗಿದೆ-ಮುಂಬಯಿಗೆ. ಅವನದು ಪತ್ರದ ಮೇಲೆ ಪತ್ರ-ಹೋಟೇಲಿನ ಅನ್ನ ಹೊಟ್ಟೆಗೇ ಹೋಗುತ್ತಿಲ್ಲ. ಬಿಡಾರ ಹೂಡುತ್ತೇನೆ. ಹೆಂಡತಿಯನ್ನು ಕಳುಹಿಸಿ ಕೊಡು ಎಂತ!

ಪಾರು : ಅದೂ ಸರಿಯೇ. ಹಾಗಿದ್ದರೆ ಇನ್ನೇನು ಯೋಚನೆ? ನಿರ್ಮಲೆಯನ್ನು ಕಳುಹಿಸಿಕೊಡಿರಲ್ಲ. ಅವರವರ ಬದುಕು ಅವರವರ ಬಳಿಗೆ ಇದ್ದರೇನೇ ಚೆಂದ!

ಕಾವೇರಿ : ಅದೆಲ್ಲ ಸರಿ. ಹೇಳಲು ಸುಲಭ. ಆದರೆ ಇಲ್ಲಿ ನನ್ನ ಗತಿ ಏನು? ನಾನೇನು ಮಾಡಲಿ? ನಮ್ಮ ಮನೆಯವರು ಅಜಾರಿ. ಪೂರ್ತಿ ಹಾಸಿಗೆ ಹಿಡಿದಿದ್ದಾರೆ. ಅದರಲ್ಲಿಯೂ ನಮ್ಮ ಬೇಬೀ

ಪಾರು : ಬೇಬಿ? ಯಾವ ಬೇಬಿ? ಹಾಂ ತಿಳಿಯಿತು. ನಿಮ್ಮ ಮಗಳು. ಅವಳು ನಿರ್ಮಲೆಗಿಂತಲೂ ದೊಡ್ಡವಳು - ಆ ಬೇಬಿ ಗೊತ್ತಾಯ್ತು ಬಿಡಿ.

ಕಾವೇರಿ : **(ಅಸಹನೆಯಿಂದ)** ಎಷ್ಟೇ ದೊಡ್ಡವಳಾಗಲಿ ಅವಳು ನಮಗೆ ಬೇಬಿಯೇ! ಅವಳು ಮೈಯಿಂದ ದೊಡ್ಡವಳು. ಆದರೆ ಅವಳ ಮನಸ್ಸು ಹಸುಗೂಸಿನ ಮನಸ್ಸು! ಹಾಂ. ಬೇಬಿ ಬಂದು ತಿಂಗಳ ಮೇಲಾಯಿತು. ಅಪರೂಪಕ್ಕೆ ಆರಾಮಾಗಿರಲು ಬಂದವಳು. ಅವಳಿಗೆ ಮನೆಗೆಲಸದ ಗಾಣಕ್ಕೆ ಹೂಡುವದೇ? ಅವಳಿಗೆ ಅಂಥ ಮನೆಗೆಲಸದ ಅಭ್ಯಾಸವಾದರೂ

ಇದೆಯೇ? ಇಲ್ಲಿ ಮುದ್ದಿನಲ್ಲಿ ಬೆಳೆದವಳು. ಯಾವ ಕೆಲಸವೂ ಗೊತ್ತಿಲ್ಲ. ಅಲ್ಲಿ ಅತ್ತೆಯ ಕಾಟ ಹೇಳತೀರದು. ಆಕೆ ಮುದುಕಿ ಬೇರೆ. ಪಾರ್ವತಮ್ಮ ನೀವೇ ಹೇಳಿ ನಿರ್ಮಲೆ ಮುಂಬಯಿಗೆ ಹೋದರೆ, ಅಲ್ಲಿ ಒಬ್ಬ ಗಂಡನ ಊಟ ಉಪಚಾರಕ್ಕೆ ಅನುಕೂಲ. ಆದರೆ ಇಲ್ಲಿ ನಮ್ಮೆಲ್ಲರ ಗೋಳಿಗೆ ಏನು ಮಾಡಬೇಕು? ನಾನು ಇದ್ದ ಮಾತು ಆಡುವಾಕೀ. ಇಲ್ಲಿ ಎಲ್ಲರ ಒದ್ದಾಟಕ್ಕಿಂತ ಅಲ್ಲಿ ಒಬ್ಬನ ಪೇಚಾಟ ವಾಸಿ! ಹಾಂ. ಆದ್ದರಿಂದ ಸೊಸೆ ಇಲ್ಲಿಯೇ ಇದ್ದಾಳೆ. ಇರಬೇಕು. ಅವಳಿಗೂ ಅನುಭವ ಬರಲಿ. ನೀವೇ ಅಂದಿರಲ್ಲ - ಕ್ರಮೇಣ ಬುದ್ಧಿ ಬೆಳೆಯಬೇಕು ಎಂತ!

ಪಾರು : ಅದೂ ಸರಿಯೇ. ಅಲ್ರೀ ನಿಮ್ಮ ಬೇಬಿ, ಇಲ್ಲಿ ಆರಾಮಿಗಾಗಿ ಬಂದವಳು. ಅವಳಿಗೆ ಅಷ್ಟೇನು ಕಷ್ಟ ಗಂಡನ ಮನೆಯಲ್ಲಿ? ದೇವರ ದಯದಿಂದ ಅತ್ತೆ ಹಾಗೇನು ಕೆಟ್ಟವಳಲ್ಲ. ಸೊಸೆಯನ್ನು ಹೂವಿನ ದಂಡೆಯಂತೆ ನೋಡಿಕೊಳ್ಳುವಳಂತೆ!

ಕಾವೇರಿ : **(ಸಿಡುಕಿನಿಂದ)** ಹೂವಿನ ದಂಡೆಯಂತೆ ಅಲ್ಲ. ಹಾಗೆ ಅಂದವರು ಯಾರು? ಮಂದೀ ಮಾತು ಕೇಳಿ -

ಪಾರು : ಮಂದಿ ಮಾತಲ್ಲ, ಕಾವೇರಮ್ಮ ನಮ್ಮ ಮನೆಮಂದಿಯದೇ ಮಾತು! ಹೂಂ ನಿಮ್ಮ ಬೇಬಿಯ ಗಂಡನ ಮನೆ ನನ್ನ ಅಳಿಯನ ಮನೆಯ ಹತ್ತಿರವೇ. ಬೇಬಿಯ ಸಂಸಾರದ ಎಷ್ಟೆಷ್ಟೋ ಕತೆಗಳನ್ನು ನಮ್ಮ ವೇಣೂ ಹೇಳುತಿದ್ದಳು.

ಕಾವೇರಿ : ಪಾರ್ವತಮ್ಮಾ! ನಾನು ಇದ್ದದ್ದು ಹೇಳುವಾಕಿ, ಪಾರ್ವತಮ್ಮಾ ನಿಮ್ಮ ವೇಣೂಳ ಮನೆ ಹತ್ತಿರವಿರಬಹುದು. ಆದರೆ ಅವಳ ಬುದ್ಧಿ ನಮ್ಮ ಬೇಬೀ ಸಂಸಾರದಿಂದ ಹರದಾರಿ ಹರದಾರಿ ದೂರ. ಅದೆಲ್ಲ ಹೇಳಿ ಪ್ರಯೋಜನವಿಲ್ಲ. ನಮ್ಮ ಬೇಬಿಯ ಸಂಸಾರ-ಅವಳ ಆ ಅತ್ತೆಯ ಕಾಟ! ಬರೇ ದಂಡಕ್ಕೆ ಹಾಕಿದೆ ನನ್ನ ಮುದ್ದು ಮಗಳನ್ನು! ಗಂಡನ ಮನೆಯ ರಣಗೈತಕ್ಕೆ ನಮ್ಮ ಬೇಬಿ **(ಅಳು ಬಂದು ಬಿಕ್ಕಿ)** ಒಣಗಿ ಕಡ್ಡಿ ಆಗಿದ್ದಾಳೆಯೇ! ಕೊರಗಿ ಕುಗ್ಗಿ ಸೊರಗಿ ಸುಕ್ಕಿ ಕೈಬಳೆಗಳೆಲ್ಲ ತೋಳಿಗೆ ಏರುವಂತೆ ಆಗಿವೆ! ಚಿಕ್ಕ ಜ್ವರ ಬೇರೆ ಬರುತ್ತದೆ.

ಪಾರು : ಅಯ್ಯಯ್ಯೋ! ಜ್ವರವೇ? ಪಾಽಽಪ. ದಿನಾಲು ಬರುತ್ತಿದೆಯೇ?

ಕಾವೇರಿ : ಹೌದಮ್ಮಾ ದಿನಾಲು ಬರ್‍ತದೆ. ಒಲೆಯ ಹತ್ತಿರ ಹೋದರೆ ಸಾಕು. ಮೈ ಬಿಸಿಯಾಗಿ ಬಿಡುತ್ತದೆ! ನಿಮ್ಮ ಆ ಥರ್ಮಾಸ ಬಾಟ್ಲಿಗೂ ಅದು--

ಪಾರು : ಥರ್ಮಾಸ ಬಾಟ್ಲೀ? ಅದೇಕೆ ಇಲ್ಲಿ?

ಕಾವೇರಿ : ಆ ಬಾಟ್ಲೀ ಅಲ್ರೀ. ಆ ಚಿಕ್ಕ ಕಡ್ಡಿ -

ಪಾರು : ಓ. ಅದೋ ಥರ್ಮಾಮಿಟ್ರು! ಎಷ್ಟು ಡಿಗ್ರಿ ಬರ್‍ತದೆ ಜ್ವರ?

ಕಾವೇರಿ : ಎಷ್ಟು ಬರ್‍ತದೋ! ಎಷ್ಟು ಏರ್‍ತದೋ! ಆ ಸುಟ್ಟ ಡಿಗ್ರಿಗೂ ತಾಗುವದಿಲ್ಲವಂತೆ. ಬೇಬೀನೇ ಹೇಳ್ತಿದ್ಲು! ಅಷ್ಟು ಸಣ್ಣ ಜ್ವರ! ಒಳ ಒಳಗೇ ಉರಿ!

ಪಾರು : ಸರಿ. ಸರಿ. ಇದು ಹೊಟ್ಟೆಯುರಿ! ತಿಳಿಯಿತು ಬಿಡಿ. ಥರ್ಮಾಮಿಟ್ರಿಗೂ

ಕಾವೇರಿ : ಏನು ಥರ್ಮವೋ ಕರ್ಮವೋ! ಈ ಹೆಸರು ಫಿರಂಗೀ. ನಮ್ಮ ಹಳೆಬಾಯಿಗೆ ಹೇಗೆ ಬರಬೇಕು. ನಮ್ಮ ಆ ಗಂಡ್ರಾಮೀ ಸೊಸೆಯಂತೆ ನಾವೇನು ಮ್ಯಾಟ್ರಿಕ್ ಆಗಿಲ್ಲ! ಅಂತೂ ಡಾಕ್ಟರರಿಗೂ ಗೊತ್ತಾಗದ ಜ್ವರ ಅದು! ಬೇಬಿಗೇ ಗೊತ್ತು. ಅಕೋ ಬಂದೇ ಬಿಟ್ಟಳು ಹೆಸರೆತ್ತಿದ್ದೇ ತಡ - **(ದೊಡ್ಡ ನಗು.)** ಬಾ. ಬಾಳಾ, ಬಾ! **(ಬೇಬಿ ಬರುವಳು. ಒಳ್ಳೆ ಪರಿಪುಷ್ಟ ಪ್ರಾಣಿ. ಡರ್ನ್‌ಲಪ್ ಬೇಬೀ!)**

ಬೇಬಿ : **(ಆರ್ಭಟಿಸುತ್ತ)** ಅಮ್ಮಾ! ಅಮ್ಮಾ!

ಕಾವೇರಿ : **(ಬಾರಿ ಮುದ್ದಿನಿಂದ)** ಏನು? ಏನು? ಚಿನ್ನಾ ಏನಾಯ್ತು?

ಬೇಬಿ : ಸರ್ವನಾಶಾಯ್ತು! ಅಮ್ಮಾ ಆ ಅತ್ತಿಗೆ ಒಂದು ತಪೇಲಿ ತುಂಬ ಚಹಾ ಮಾಡ್ಯಾಳು-ಕದ್ದು ಮುಚ್ಚಿ ಕುಡಿಯಲಿಕ್ಕೆ. ನಾ ಕೇಳಿದ್ರೆ ಕೊಡುವದೇ ಇಲ್ಲ! - ಒಂದೇ ಕಪ್ಪು ಕೊಡ್ತಾಳೆ - ಹೊಯ್ಮಾಲಿ!

ಕಾವೇರಿ : ಅಯ್ಯೋSS ನನ್ನ ಕಂದ, ನನ್ನ ಚಿನ್ನ ಅಳಬ್ಯಾಡ! ಅಳಬ್ಯಾಡ! **(ಮುದ್ದಿನಿಂದ ಸಂತೈಸುವಳು.)**

ಪಾರು : **(ಸ್ವಗತ)** ಸರಿ ಹೋಯ್ತು! ಸೊರಗಿ ಕಡ್ಡಿ ಆದ ಬೇಬಿ ಇದು! ಮುನ್ಸಿಪಾಲ್ಟಿ ಬಂಬಿನಂತಿದ್ದಾಳೆ. ನನ್ನ ಮಗಳೂ ಹೀಗೆಯೇ ಸೊರಗಿ ಕಡ್ಡಿಯಾಗಬಾರದೇ? ಇದು ಕಡ್ಡಿಯೋ ನಣಗೊಬ್ಬಿನ ಚಕ್ರ ಬಡ್ಡಿಯೋ!

ಬೇಬಿ : ಅಮ್ಮಾ ಅಮ್ಮಾ! ನೋಡೆ ಅಮ್ಮಾ! ಇವರು ನನ್ನನ್ನೆ ದುರುದುರು ದುರು ನೋಡುತ್ತಿದ್ದಾರೆ! ಒಳಗೆ ಆ ಅತ್ತಿಗೆ ಆಗ ಈಗ ಹಾಗೆ ಹೀಗೆ ಸಿಕ್ಕಾಪಟ್ಟೆ ಬಯ್ತಾಳೆ. ಹೊರಗೆ ಹೀಗೆ ಹೋಗಿ ಬಂದೂ ಅಲ್ಲಿ ಇಲ್ಲಿ ಎಲ್ಲರೂ ಕಣ್ಣು ಕಣ್ಣು ಬಿಡ್ತಾರೆ! **(ಬಿಕ್ಕುತ್ತಾಳೆ)**

ಕಾವೇರಿ : ಛೀ ಛೀ ಹಾಗನ್ನಬಾರದು ಮಗೂ, ಅವರು ನಮ್ಮವರೇ. ನಿನ್ನ ಅತ್ತೆಯ ಮನೆಯ ಹತ್ತಿರ ವೇಣು ಇದ್ದಾಳಲ್ಲ, ಆಕೆಯ ತಾಯಿ. ಪಾರ್ವತಿಬಾಯಿ.

ಬೇಬಿ : **(ಬಾಲಿಶ ಬುದ್ಧಿಯಿಂದ)** ಹಾಂ ಹಾಂ ವೇಣೂ ತಾಯಿ ಪಾರುಬಾಯಿ.

ತೆಂಗಿನಕಾಯಿ ನೆರಮನೆ ನಾಯಿ! ಅಯಸ್ಕ್ರೀಂ ಮಲಾಯೀ! **(ಚಪ್ಪಾಳೆ ತಟ್ಟ ಕುಣಿಯುತ್ತಾಳೆ, ಅಸಂಭದ್ಧವಾಗಿ).**

**ಕಾವೇರಿ :** ಮುಚ್ಚು ಬಾಯೀ! ನೋಡಿದಿರಾ, ಪಾರುಬಾಯಿ ನಮ್ಮ ಬೇಬಿ ಎಷ್ಟು ಸರಳ. ಆದರೂ ಎಷ್ಟು ಚುರುಕು ನೋಡಿ! ಮಾತಿಗೆ ಮಾತು ಕಟ್ಟಿ ಮಾರುದ್ಧ ಲಾವಣಿನೇ ಹಾಡಿ ಬಿಟ್ಟಳು!

**ಬೇಬಿ :** ಇನ್ನು ಚಹಾ-ಚಹಾ! ಅತ್ತಿಗೆ ಕುತ್ತಿಗೆ ಹಿಚುಕುತ್ತೇನೆ - ಚಹಾ ಕೊಡದಿದ್ದರೆ. ಕದ್ದು ಚಹಾ ಮಾಡ್ತಾಳೆ. ಕೇಳಿದ್ರೆ ಅತ್ತೆ ಮಾಡು ಎಂದರೆಂದು ಹೇಳ್ತಾಳೆ!

**ಪಾರು :** ಹೌದು ಬೇಬೀ. ಇವರೇ ಮಾಡೆಂದು ಹೇಳಿದರು.

**ಬೇಬಿ :** **(ಸಿಡುಕಿನಿಂದ ಚೀರುತ)** ಸುಳ್ಳು! ಸುಳ್ಳು!! ಎಲ್ಲಾ ಸುಳ್ಳು. ಅತ್ತಿಗೆ ಸುಳ್ಳು ಹೇಳ್ತಾಳೆ. ಅವಳು ಹೇಳೋದೆಲ್ಲ ಸುಳ್ಳೇ. ನಾ ಹೇಳೋದೆಲ್ಲ ಖರೆ. ನೋಡೆ ಅಮ್ಮಾ ಇಲ್ಲಿ ಬರೋರೆಲ್ಲ ಅತ್ತಿಗೆ ಮಾತೇ ಹೊತ್ತುಕೊಳ್ತಾರೆ! ಅತ್ತಿಗೆ ಸುಳ್ಳು ಹೇಳ್ತಾಳೆ! ಹೌದನ್ನು ಅಮ್ಮಾ ಅಮ್ಮಾ **(ತಾಯಿಯ ಕೊರಳಿಗೆ ಬಿದ್ದು)** ಹೌದೆನ್ನು! ಹೌದೆನ್ನು!!

**ಕಾವೇರಿ :** ಹೌದು. ಕಂದಾ ಹೌದು. ಮೊದಲು ಕೊರಳು ಬಿಡು ಒಮ್ಮೆ! ಅಬ್ಬ! ನೋಡಿದಿರಾ ಪಾರ್ವತಮ್ಮಾ ನಮ್ಮ ಬೇಬಿಯ ಮುದ್ದು! ಮತ್ತೆ ಈಕೆನ ಆ ನಿರ್ಮಲಾ ಕಾಡ್ತಾಳೆ ಕೆಣಕತಾಳೆ! ಹೂಂss ನಿಲ್ಲು ಮತ್ತಿಷ್ಟು ಚಹಾ ಚರಿಸುತ್ತೇನೆ. ನಿರ್ಮಲಾ, ಏ ನಿರ್ಮೀ **(ನಿರ್ಮಲೆ ಬರುವಳು-ಲಗುಬಗೆ ಯಿಂದ)** ಏ ನಿರ್ಮಾ. ಮಾಡಿದ ಚಹಾ ಎಲ್ಲ ನಮ್ಮ ಬೇಬಿಗೆ ಕೊಡು. ಪಾಪ. ನಾಲ್ಕು ದಿನಕ್ಕಾಗಿ ಬಂದ ನಾದಿನಿ. ಸುಮ್ಮನೆ ಕಾಡಬೇಡ.

**ನಿರ್ಮಲೆ :** ನಾ ಕಾಡಿಲ್ಲ, ಅತ್ತೆ. ಚಹಾ ನೀವೇ ಮಾಡಿಸಿದ್ದು ಎಂತ ಹೇಳಿದೆ. ಮತ್ತೇನಿಲ್ಲ. ನಿಮ್ಮನ್ನ ಕೇಳಿ ಬರ್ತೇನೆಂದು ಇಲ್ಲಿ ಬಂದಳು. ಇದೇನು ಇಲ್ಲಿ ಮತ್ತೆ? **(ದಿಗ್ಭ್ರಮೆಗೊಂಡು)**

**ಬೇಬಿ :** ಸುಳ್ಳು ಸುಳ್ಳು! ಅದೆಲ್ಲ ಸುಳ್ಳೆಂದು ಈಗ ಅಮ್ಮ ಒಪ್ಪಿದ್ದಾಳೆ. ನಾನೇ ಒಪ್ಪಿಸಿದ್ದೇನೆ. ಈ ಪಾರಮ್ಮನ ಕೇಳು. -

**ಕಾವೇರಿ:** ಹೋಗಲಿ ಬಿಡು. ನಡಿ. ನೀ ಚಾ ಕುಡಿ.

**ಬೇಬಿ :** ನಾ ನೀಚ! ನಾ ನೀಚ! **(ದೊಡ್ಡ ಬಾಯಿ ತೆಗೆದು ಅಳ್ತಾಳೆ.)** ಇಲ್ಲಿ ಅತ್ತಿಗೆ ಕಾಡ್ತಾಳೆ. ಅವಳ ಅತ್ತೆ ನೀನೂ ಕಾಡ್ತೀ. ಅಲ್ಲಿ ನನ್ನ ಆ ಅತ್ತೆ ಕಾಡ್ತಾಳೆ ಎಲ್ಲಾ - ಅಯ್ಯೋ!! **(ಅಳುತ್ತಾಳೆ. ಕಾವೇರಿ ಪಾರ್ವತಿ ಸಂತೈಸ್ತಾರೆ)**

**ಪಾರು :** ಛೇ ಛೇ. ಇದೆಲ್ಲಿಯ ಹುಚ್ಚು! ಅವರು ನಿಂಗೆ ನೀಚ ಅನ್ನಲಲ್ದೆ. ನೀ - ಚಾ ಅಂದರೆ ನೀನು ಚಾ ಕುಡಿ ಅಂದ್ರ. ನೀಚಾ-ನೀಚಾ ಕುಡಿ ಅಲ್ಲ. ನೀ-ಚಾ ಕುಡಿ ಎಂದ್ರು ನಿನ್ನ ಅಮ್ಮಾ.

ಕಾವೇರಿ : ಹೌದು ಮಗೂ ಅಳಬೇಡ. ನೋಡಿ, ಪಾರಮ್ಮಾ ನನ್ನ ಬೇಬಿ ಎಷ್ಟು ಮಿದು ಮನಸ್ಸಿನವಳು!

ಪಾರು : ಸರಿ. ಅದೇ ಬೇಬೀ ನಿನ್ನ ಅತ್ತೆನೂ ಕಾಡ್ತಾಳೆ ಅಂದೆ ಹೀಗೆ?

ಬೇಬಿ : ಹೂಂ. ಅಮ್ಮ ನೀಚಾ ನೀಚಾ ಅಂದ್ರೆ ಆ ಅತ್ತೆ-ಹೇಸರಗತ್ತೆ!

ಪಾರು : ಹಾಂ ಏನಂತಾರೆ?

ಬೇಬಿ : ನೀ ಚಾಕು ನೀ ಚಾಕು! ಅಂತಾರೆ. ನಾ ಅವರಿಗೆ ಚಾಕು ಅಂತೆ ಚೂರಿ ಅಂತೆ.

ನಿರ್ಮಲೆ : **(ನಗು ತಡೆಯಲಾರದೆ)** ಹಾಗಲ್ಲ ಬೇಬೀ ಅವರೂ ನೀ ಚಾಕುಡಿ ಹೇಳಿರಬೇಕು. ನೀನು ಚಾಕು-ಚಾಕು ಎಂದಿಷ್ಟೇ ಕೇಳಿ ರೇಗಾಡಿದೆ! ಅಷ್ಟೇ! ಚಾಕು ಅಲ್ಲ ಚಾ ಕುಡಿ ಎಂತ. ನೀನು ಆ 'ಡಿ' ಕೇಳಲಿಲ್ಲ!

ಬೇಬಿ : ಹೇಗೇ ಕೇಳ್ತೋದು? ಸಿಟ್ಟು ಅಳು ಎಲ್ಲ ಬಂದು ಹೋಯ್ತು - ತಾ ಚಾಕು ಅಂದ ಕೂಡ್ಲೆ.

ಕಾವೇರಿ : ಏ ನಿಮ್ಮೂ! ದೀಡಶಾಣೆ. ನೀ ಬಾಯಿಮುಚ್ಚು. ನಡೆ ನಿನ್ನ ಕೆಲಸಕ್ಕೆ. ನೀ ಸುಮ್ಮನಾಗು ಬೇಬೀ--

ಬೇಬಿ : ಇಲ್ಲ. ನಾನು ಅಳಲಿಕ್ಕೇ ಬೇಕು. ನನಗೆ ಅಳು ಬಂದದೆ ಬಂದೇ ಬಿಟ್ಟಿದೆ! ನಾ ಅಳಲೇಬೇಕು.

ಪಾರು : ಪಾಪ! ಅತ್ತುಕೊಳ್ಳಲಿ. ಅಲ್ಲಿ ಮುಂಬಯಿಯಲ್ಲಿ ಆ ಅತ್ತೆ ಅಳಲಿಕ್ಕೂ ಕೊಡ್ತಾ ಇಲ್ಲ! ಅಲ್ವೇನೇ? **(ಬೇಬಿಯ ಬೆನ್ನು ತಟ್ತಾಳೆ)**

ಕಾವೇರಿ : ಬೇಬಿ ಸಾಕೆ. ಸುಮ್ಮನೆ ಅಳಬೇಡ!

ಬೇಬಿ : ಊಹೂಂ! ನಾ ಅಳ್ತೇನಿ! ಸುಮ್ಮನೆ ಬೇಡವಾದ್ರೆ ದೊಡ್ಡಕ್ಕೇ ಅಳ್ತೀನಿ! **(ದೊಡ್ಡ ದನಿಯಲ್ಲಿ ಅಳಲಿಕ್ಕೆ ಹತ್ತುವಳು)** ಅಯ್ಯಯ್ಯೊ! **(ಕಣ್ಣು ಉಜ್ಜಿ ನೋಡುವಳು)** ಅರೇ ಕಣ್ಣಲ್ಲಿ ನೀರೇ ಬಂದಿಲ್ಲ! ಕಣ್ಣೀರು ಬರುವವರೆಗೂ ನಾನು ಅತ್ತೇ ಶುದ್ಧ!

ಪಾರು : **(ಸ್ವಗತ)** ನೀನು ಕತ್ತೆ ಶುದ್ಧ! **(ಪ್ರಕಟ)** ಅರೇ ಈ ಮೊಂಡ ಹಟಕ್ಕೆ ಏನನ್ನಬೇಕು! **(ನಗುವಳು)**

ಕಾವೇರಿ : ನಗತೀರೇನು, ಪಾರ್ವತಮ್ಮ? ಅವಳಿಗೆ ಅಳು. ನಿಮಗೆ ನಗು! ಪ್ರಪಂಚವೇ ಹೀಗೆ! ಮೊದಲು ನಮ್ಮ ಬೇಬಿ ಹೀಗೆ ಹಟಮಾರಿ ಇದ್ದಿಲ್ಲ. ಆ ಅತ್ತೆ ಮನೆ ಸೇರಿ ಈ ಕೆಟ್ಟ ಚಾಳಿ ಕಲಿತಳು. ಅಲ್ಲಿ ಆ ಅತ್ತೆಗೆ

ಮನೆತುಂಬ ಮೊಂಡ ಬುದ್ಧಿಯ ಮಕ್ಕಳು. ಅವರ ಚಾಳಿ ನಮ್ಮ ಬೇಬಿಗೂ ತಾಗಿತು.

ಪಾರು : ಸರಿ. 'ಹಿರಿಯಕ್ಕನ ಚಾಳಿ' ಅಂತಾರಲ್ಲ!

ಕಾವೇರಿ : ಹಾಗಲ್ಲ ಹಿರಿಯಕ್ಕ ನಮ್ಮ ಬೇಬೀನೇ! ಆ ಮಕ್ಕಳೆಲ್ಲ ಚಿಕ್ಕವರು. ಇರಲಿ. ಬಿಡು. ನೀವು ಏನೇ ಅನ್ನಿ. ನಾನು ಕಂಡಿದ್ದು ಆಡುವಾಕಿ. ನಮ್ಮ ಬೇಬಿಯ ಈ ಅಳಬುರುಕು ಆ ಅತ್ತೆ ಮನೆಯಲ್ಲಿಯೇ ಪಡೆದದ್ದು. ಹಾಂ. ನನಗೆ ಒಳಗೊಂದು ಹೊರಗೊಂದು ಹೇಳಲು ಬರುವದಿಲ್ಲ.

ಪಾರು : ಅಯ್ಯೋ! ನಂಗೆ ಗೊತ್ತಿಲ್ವೇ? ನಾನು ನಿಮ್ಮನ್ನು ಒಳಗೂ ನೋಡೀನಿ ಹೊರಗೂ ನೋಡ್ತೀನಿ ಒಂದೇ ರೂಪ. ಹೊತ್ತಿಗೊಂದು ರೂಪ ಅಲ್ಲ. ಕಾವೇರಮ್ಮ ಇನ್ನು ಮುಂದೇನು ಮಾಡಬೇಕು?

ಕಾವೇರಿ : ನಾ ಒಂದು ಮಾತು ಹೇಳಲಾ? ಬೇಬಿ. ಇಲ್ಲಿ ಬಂದು ಮೂರು ತಿಂಗಳಾದವು. ಇನ್ನು ಕೆಲವು ತಿಂಗಳು ಬೇಬಿ ಇಲ್ಲೇ ಇರಲಿ. ಹಾಯಾಗಿ ಉಳೀಲಿ. ಹಾಯಾಗಿ ಬೆಳೀಲಿ. --

ಬೇಬಿ : **(ಫಕ್ಕನೆ ಅಳು ಮುಗಿಸಿ)** ಬೇಡ! ಬೇಡ! ಇಲ್ಲಿ ಈ ಅತ್ತಿಗೆ ಕಾಟ. ಆಕೆ ದೀಡಶಾಣಿ. ನನ್ನದೇ ತಪ್ಪು ತೆಗೀತಾಳೆ. ಅವಳು ಕಲಿತವಳು. ಅವಳ ಮುಂದೆ ನಾನು ಪೆದ್ದಿ! ಪೆಚ್ಚು! ನಾ ಪೀಚು! ಆದರೆ ಅಲ್ಲಿ ಆ ಕತ್ತೆ ಅಯ್ಯಪ್ಪ! ಹೆಮ್ಮಾರಿ! ಅವಳ ನೆನಪಾದರೆ ಅಳು ಬರ್ತದೆ! **(ಮತ್ತೆ ಅಳಲು ಆರಂಭ.)**

ಕಾವೇರಿ : ಅಳಬೇಡ ಅಳಬೇಡ. ನೀ ಎಲ್ಲೂ ಹೋಗೋದಿಲ್ಲ. ಈ ಬೇಬಿಯ ಗಂಡನಿಗೆ ಇಲ್ಲಿ ಧಾರವಾಡಕ್ಕೇ ವರ್ಗ ಮಾಡಿಕೊಳ್ಳಲು ಹೇಳಿದ್ದೇನೆ. ಬೇಬಿ ಮತ್ತೆ ಮತ್ತೆ ಪತ್ರ ಬರೆದು ಒತ್ತಾಯ ಹಚ್ಚಿದ್ದಾಳೆ.

ಪಾರು : ಅಂ? ಬೇಬಿ ಪತ್ರ ಬರೆಯುತ್ತಾಳೇ?

ಕಾವೇರಿ : ಬೇಬಿ ಅಂದರೆ ನಾನೇ. ಆಕೆಯ ಹೆಸರಿನಲ್ಲಿ ಪತ್ರ ಬರೆಯುತ್ತೇನೆ. ಆಕೆ ಬರೆ ಸಹಿ ಗೀಚತಾಳೆ, ಅಷ್ಟೇ! ಸಾವಿರ ಸುಳ್ಳು ಹೇಳಿ ಒಂದು ಮದುವೆ ಮಾಡಿಸಬಹುದಂತೆ. ಸಾವಿರ ಮೋಸ ಮಾಡಿ ನಮ್ಮ ಮಗಳ ಸುಖ ನೋಡಿಕೊಂಡರೆ ತಪ್ಪೇನು? ಹಾಂ. **(ಹುಸಿ ನಗೆ ಬೀರುವಳು.)**

ಪಾರು : ಆದರೆ ಧಾರವಾಡಕ್ಕೆ ಏಕೆ?

ಕಾವೇರಿ : ಮತ್ತೇಕೆ? ಬೇಬಿಯನ್ನು ಅವಳ ಗಂಡನನ್ನು ಆ ಅತ್ತೆಮಾವಂದಿರಿಂದ ಬೇರೆ ಮಾಡಲಿಕ್ಕೆ! ಅತ್ತೆಯ ಮನೆ ಬಿಟ್ಟ ಹೊರತು ನನ್ನ ಮಗಳಿಗೆ

ಸುಖವಿಲ್ಲ. ಇಲ್ಲಿ ಧಾರವಾಡಕ್ಕೆ ಬಂದ ಮೇಲೆ ಬೇಬಿ-ಬೇಬಿಯ ಗಂಡ ಹಾಯಾಗಿ ಬಾಳಬಹುದು. ಮದುವೆ ಮಾಡುವದೇಕೆ? ಹರಯದ ಗಂಡು-ಹೆಣ್ಣು ಒಟ್ಟಾಗಿ ಒಪ್ಪಾಗಿ ಬಾಳಬೇಕೆಂದು ಅಲ್ವೇ?

ಪಾರು : ಹೌದವ್ವಾ. ಇದು ಒಪ್ಪತಕ್ಕ ಮಾತು.

ಕಾವೇರಿ : ಇನ್ನು ಬೇಬೀ. ನಡೆ ನಿನಗೆ ಚಹಾ ಕುಡಿಸಿ ಸ್ನಾನ ಮಾಡಿಸಲು ಹೇಳಿಬರ್ತೇನೆ. **(ಬೇಬಿಯೊಂದಿಗೆ ಒಳಗೆ ಹೋಗುವಳು.)**

ಪಾರ್ವತಿ : ಹೂಂssss! ಈ ಕಾವೇರಮ್ಮ ಎರಡು ಬಾಯಿಯ ಹಾವು! ನಿರ್ಮಲೆಯ ಕಣ್ಣಿಗೆ ಸುಣ್ಣ. ತನ್ನ ಬೇಬಿಯ ಕಣ್ಣಿಗೆ ಬೆಣ್ಣೆ! ಅಬ್ಬ! ಅತ್ತೆ-ಸೊಸೆಯರ ಸಂಬಂಧಕ್ಕೆ ಇವರಲ್ಲಿ ಎರಡು ಬೇರೆ ಬೇರೆ ನೋಟಗಳೇ ಇವೆ! ತತ್ವಗಳೇ ಇವೆ! ಸ್ವಂತಕ್ಕಾಗಿ ಸ್ವೇಚ್ಛಾಚಾರ! ಪರರಿಗಾಗಿ ಬಲಾತ್ಕಾರ! **(ಕಾವೇರಮ್ಮ ಬರುವಳು.)**

ಕಾವೇರಿ : ಥಕ್ಕನೆ ಬಿಟ್ಟು ಹೋದೆನೆಂದು ಬೇಸರವಾಯ್ತೇ? ಬೇಬಿಗೆ ಒಡಂಬಡಿಸಿ ಬಂದೆ. ಮಾಡಿದ ಚಹಾ ಎಲ್ಲ ಬೇಬಿನೇ ಕುಡಿದು ಬಿಟ್ಟಳು! ಅತ್ತೆಯ ಮನೆಯಲ್ಲಿ ಪಾಪ, ಇವಳಿಗೆ ಸಾಕಷ್ಟು ಚಹಾನೇ ಸಿಗುವದಿಲ್ಲ. ಅತ್ತೇನೇ ಎಲ್ಲ ಮಾಡುವವಳು. ಬೇಬಿಗೆ ಅದೆಲ್ಲ ಗೊತ್ತೇ ಇಲ್ಲ. ಇಲ್ಲಿ ಮುದ್ದಾಗಿ ಬೆಳೆದ ಮಗು! ಇಲ್ಲಿ ಬಂದಾಗ ಚಹಾ ಚಹಾ ಎಂದು ಹಪಾಪಿಸುತ್ತಾಳೆ, ಪಾಪ!

**(ತೆರೆಯಲ್ಲಿ 'ಅಮ್ಮಾ! ಅಮ್ಮಾ!' ಎಂದು ಬೇಬಿ ಕೂಗು)**

ಬೇಬಿ : **(ಕಿರಿಚುತ್ತಾ ಬರುತ್ತಾಳೆ)** ಅಮ್ಮಾ! ನೋಡು ಅಮ್ಮಾ! ಅತ್ತಿಗೆ ನನ್ನ ಮಾತು ಕೇಳೋದಿಲ್ಲ!

ಕಾವೇರಿ : ಮತ್ತೇನು ಬಂತೇ?

ಬೇಬಿ : ನನ್ನ ಮಾತು ಕೇಳೋದಿಲ್ಲ, ಅತ್ತಿಗೆ. ಆ ಕೆಲಸದಾಕಿ ಮಲ್ಲಿಗೆ ಅತ್ತಿಗೆ ತನ್ನ ಹಸಿರು ಸೀರೆ ಕೊಟ್ಟುಬಿಟ್ಟಳು. ನಾ ಕೇಳಿದೆ. ಅತ್ತಗೇಕೆ ಕೇಳಲಿಲ್ಲ? ಎಂದು. ಆಕೆ ಅಂದಳು. ಅದು ಹಳೆ ಸೀರೆ-ಹರಕು ಬೇರೆ ನಂದು. ಅದಕ್ಕೆಲ್ಲ ಅತ್ತಗೇನು ಕೇಳೋದು? ಎಂದು ಬಿಟ್ಟಳು. ಸೀರೆ ಕೊಟ್ಟು ಬಿಟ್ಟಳು!

ಪಾರು : ಹೋಗಲಿ ಪಾಽಪ. ಕೊಡಲೊಲ್ಲಳೇಕೆ? ಆ ಮಲ್ಲಿ ಮೊನ್ನೆ ತಾನೆ ಹೆತ್ತಾಳೆ. ಈಗ ಮಳೆಗಾಲ. ಅವರಿಗೆ ಅರಿವೆ ಅಂಚಡಿ ಕಡಿಮೆ. ಬಡವಳು ಪಾಪ!

ವೇರಿ : (ಮೋರೆ ಕಹಿ ಮಾಡಿಕೊಂಡು) ಹೌದು ಪಾಪ! ಕೊಟ್ರೆ ಕೊಟ್ಟಾಯ್ತು. ನೀನೇಕೆ ಮತ್ತೆ ಒದರಾಡಿ ರಕ್ತಬತ್ತಿಸಿಕೊಳ್ಳುತ್ತೀ? ಸೀರೆಗೇನು ಕಡಿಮೆ. ನಿನ್ನ ಅಣ್ಣ ಬಾಳಾ ಸಾಹೇಬ ಸುಪ್ರಿಡೆಂಟನೋ ಏನೋ-

ೇಬಿ : (ಖೋ ಖೋ ನಗುತ್ತ) ತಪ್ಪಿದಿ ಅಮ್ಮಾ. ಸಾಫ ಸಾಫ ತಪ್ಪಿದಿ! ಹಃ ಹಃ ಆತ ಸುಪ್ರಿಡೆಂಟ ಅಲ್ಲ. ಅಂವ ಸುಪಾರಿ-ಸುಪಾರಿಢಂಟ!

ಾರು : (ಮೋರೆ ಮುಚ್ಚಿಕೊಂಡು ನಗುವಳು)

ಾವೇರಿ : ಡಂಟನೋ ಫಂಟನೋ ಬಾಳಾ ಸಾಹೇಬ ಸೀರೆ ಕಳಿಸ್ತಾನ. ಹಳೆ ಹರಕು ಸೀರೆ ಹೋದರೆ ಹೋಗಲಿ!

ೇಬಿ : ಅದಾಗದು. ಅದಾಗದೇ ಆಗದು. ನಮ್ಮ ಮುಂಬಯಿ ಮನೆಯ ಅಡಿಗೆ ಆಳಿಗೆ ನಾ ಅದನ್ನೆ ಕೊಡುವವಳು! ಆ ಸೀರೆಯನ್ನೆ ತಿರುಗಿ ತರಿಸಿಕೊಡು. ಕೊಡಲೇಬೇಕು! ಹೂಂ. (ಸಿಟ್ಟಿಗೆದ್ದು ನೆಲಕ್ಕೆ ಕಾಲು ಬಡಿದು ಕೂತುಕೊಳ್ಳುವಳು.)

(ಅಷ್ಟರಲ್ಲಿ ನಿರ್ಮಲೆಯ ದನಿ. 'ಅತ್ತೆಮ್ಮಾ' ಚಹಾ ಫರಾಳಕೇ ಆಗೆದ ಹೊರಗೇ ತರಲೇ?')

ಾವೇರಿ : ಬೇಡ ಬೇಡ. ಏಳು ಪಾರು. ಒಳಗೆ ಹೋಗೋಣ. (ಅವರಿಬ್ಬರು ಹೋಗುತ್ತಾರೆ. ಬೇಬಿ ಕೂತೇ ಇರುತ್ತಾಳೆ. ತಲೆ ಕೆದರಿಕೊಳ್ಳುತ್ತ)

ೇಬಿ : ಈಗೇನು ಮಾಡಲಿ? ಈ ಅತ್ತಿಗೆಯ ನೆತ್ತಿಗೆ ಸುತ್ತಿಗೆ ಏಟು ಬೀಳಲೇಬೇಕು. ತಾನೇನೋ ದೊಡ್ಡ ಸುಂದರಿ ಎಂದು ಸೊಕ್ಕು ಬೇರೆ ಈ ಸಟವಿಗೆ. ಮೆಟ್ರಿಕ್ ಓದಿದ ಹೆಮ್ಮೆ ಬೇರೆ! ಈ ನಿರ್ಮಲೆಯ ಮೋರೆಗೆ ಬೆಂಕಿ ಹಚ್ಚಬೇಕು! ಮೈಮೇಲೆ ಕುದಿಯುವ ನೀರು ಹಾಕಬೇಕು. ಬರುಹೋಗುವವರೆಲ್ಲ ಈಕೀನ ಹೊಗಳುವವರೇ! ಅರೆ! ಇವಳ ಎರಡು ಪಟ್ಟು ನಾನಿದ್ದೇನೆ! ನಾ ಇವರಿಗೆ ಕಾಣುವದೇ ಇಲ್ಲ. ಕಂಡರೆ ಎಲ್ಲರೂ ನಗುವವರೆ! ಅರೇ. ಇವರು ಬಂದರು.

(ಕಾವೇರಮ್ಮ ಪಾರ್ವತಮ್ಮ ಬರುವರು.)

ಾರು : ಹಾಗಾದರೆ ನಾನಿನ್ನು ಬತ್ತೇನೆ ಕಾವೇರಮ್ಮಾ. ಹೊತ್ತು ಹೋದದ್ದೇ ಗೊತ್ತಾಗಲಿಲ್ಲ. ಚಹ ಬೇರೆ ಎರಡು ಸಲ ಆಯ್ತು! (ನಗುವಳು) ಗುಡಿಗೆ ಹೋಗಬೇಕು. ಇನ್ನು, ಬರ್ತೇನೆ. ಬೇಬೀ ಸಿಟ್ಟಾಗಬೇಡ. ಆಂ? ಬೇಬಿಗೆ ಗಡ್ಡ ಎತ್ತಿ ಸಲಿಗೆ ಮಾಡಿ ಹೋಗುವಳು.

ಾವೇರಿ : ತುಸು ನಿಲ್ಲಿ, ಏ ಸೊಸೆಯಮ್ಮಾ! ಕುಂಕುಮದ ಕರಡಿಗೆ ತಾ. ಬಂದ ಮುತ್ತೈದೆಯರಿಗೆ ಕುಂಕುಮ ಹಚ್ಚುವದು ಈ ಮುಟ್ಠಾಳಳಿಗೆ ನೆನಪಾಗುವದಿಲ್ಲ!

ಬೇಬಿ : ಹೌದು. ತನ್ನ ಮುಸುಡಿಗೆ ಆ ಬಿಳಿ ಡಾಂಬರೋ ಹರದಳದ ಹುಡಿಯೋ ಬಳಿದುಕೊಳ್ಳಲಿಕ್ಕೆ ಮಾತ್ರ ಮರೆಯುವದಿಲ್ಲ. ವಯ್ಯಾರಗಿತ್ತಿ. ನಿನ್ನೆ ನನಗ ಸ್ವಲ್ಪ ಕೊಡು ಅಂದ್ರೆ ಇಲ್ಲ ಖರ್ಚಾಯಿತೆಂದಳು. **(ನಿರ್ಮಲೆ ಕುಂಕುಮ ತಂದು ಹಚ್ಚುವಳು. ನಗುತ)** ಪಾರಮ್ಮ ಹೋದೊಡನೆ ನಿಮ್ಮ ವೇಣೂನ ಕಳುಹಿಸಿಕೊಡಿ. ಮರೆಯಬೇಡಿರಿ. ಹಾಂ!

ಪಾರು : **(ಅವಳ ಗಡ್ಡ ಚಿವಟ ಮಮತೆಯಿಂದ)** ಆಯಿತು ಮಗೂ. ಕೂಡಲ ಕಳಿಸುತ್ತೇನೆ. ಕಾವೇರಮ್ಮಾ ಬೇಬೀ ಬರ್ತೇನೆ. **(ಕಾವೇರಿ ಬಾಗಿಲತನ ಮುಟ್ಟಿಸಿ ಲೋಕಾಭಿರಾಮವಾಗಿ ನಕ್ಕು ಹಿಂದಿರುಗುವಾಗಲೇ ಸಿಟ್ಟಿನ ದನಿಯೇರಿಸಿ ಗುಡುಗುವಳು)**

ಕಾವೇರಿ : ಏ ಸುಡಗಡ ಸಿದ್ದೀ! ಮನೆಹಾಳು ಮಾಡೋ ಬುದ್ಧೀ! ಇದೇನು ಶುರು ಮಾಡಿದಿ? ಯಾರ ಮನೆ! ಯಾರ ವಸ್ತು! ಯಾರ ಒಡವೆ! ಆಂ. ಆ ಹಾಳಾದ ಮಲ್ಲಿಗೆ ಹಳೆ ಸೀರೆ ಯಾಕೆ ಕೊಟ್ಟೆ? ನಿನ್ನಪ್ಪ ತಂದ ಸೀರ ಏನದು? ಅದೇನಿಲ್ಲ. ಹೋಗು ಈಗೀಂದೀಗ ಮಲ್ಲೀ ಮನೆಗೆ ಹೋಗು ಆ ಸೀರೆನ ತಿರುಗಿ ಬೇಡಿಕೊಂಡು ಬಾ. ಕಂಡ ಕಂಡವರಿಗೆಲ್ಲ ಕೈಗ ಬಂದದ್ದೆಲ್ಲ ಕೊಡುತ್ತ ಹೋದರೆ ದಿವಾಳಿಯಾದೀತು. ಈ ಮನೆ! ಅದೇ ಹಳೆ ಸೀರೆ ಆ ಭಾಂಡೀ ಮಾರುವಾಕೆಗೆ ಕೊಟ್ಟರೆ ಮುಕ್ಕಾಲು ಸೇರು ಹಾಲು ಹಿಡಿಯುವ ದೊಡ್ಡ ಭಾಂಡೀ ಸಿಗುತ್ತಿತ್ತು!

ನಿರ್ಮಲೆ : ಇಲ್ಲ, ಅತ್ತೆಮ್ಮ. ನಿನ್ನೆ ನೀವೇ ಅಂದಿದ್ರಿ. ಆ ಸೀರೆ ಇಷ್ಟು ಹರಕ ಚಿಂದಿಯಾಗಿದೆ. ಯಾವ ಭಾಂಡಿ ಮಾರುವವಳೂ ಮುಟ್ಟಲಿಕ್ಕಿಲ್ಲ ಮಲ್ಲಿಗಾದರೂ ಕೊಡಬಹುದು. ಎಂದು ನೆನಪಿಲ್ಲವೇ?

ಕಾವೇರಿ : ಹೌದು ಮಹಾಮಾಯೇ. ಮತ್ತೇನೇನು ಅಂದಿದ್ದೆ? ಎಲ್ಲ ಬರೆದಿಟ್ಟುಕೊ ನಿನ್ನೆ ಇದೇ ಪಾರ್ವತಮ್ಮ ಬಂದು ಕೂತಿದ್ದಳಲ್ಲ. ಆಕೇಮುಂದೆ ಹಾಗನ್ನದ ಇನ್ನೇನು ಹೇಳಲಿ? ನಿನ್ನ ಹಣೆಬರಹ! ನಿನ್ನೆ ಹೀಗಂದ್ರಿ. ಮೊನ್ನೆ ಹಾಗಂದ್ರಿ ಕಾನೂನು ಕೊಚ್ತಾಳೆ ಮತ್ತೆ. ಎರಡು ಗಳಿಗೆ ಕಣ್ಣು-ತಪ್ಪಿದರೆ ಆಯಿತು ಮನೆ ಬದುಕೆಲ್ಲ ಬೀದೀಪಾಲೇ!

ಬೇಬಿ : ಮತ್ತೆ ಈ ಮನೆಮಾರೀನ ಮುಂಬಯಿಗೆ ಕಳುಹಿಸಬೇಕಂತೆ!-ಅಣ್ಣನ ಬಿಡಾರಕ್ಕೆ ಕನ್ನ ಹಾಕಲಿಕ್ಕೆ!

ಕಾವೇರಿ : ಹೂಂss. ಇನ್ನೆಲ್ಲಿ ಮುಂಬಯಿ? ನಾನೇ ಹೋಗುತ್ತೇನೆ. ಬಾಳಾ ಸಾಹೇಬನ ಬಿಡಾರ ಹೂಡಲಿಕ್ಕೆ!

ನಿರ್ಮಲೆ : ಆದರೆ ಅವರು -

ವೇರಿ : ಮುಚ್ಚು ಬಾಯಿ. ಅವರೇನು ಅವರು? ಆದರೇನು? ಅವರು ನಿನ್ನ ಗಂಡನಾಗಿ ಕೆಟ್ಟರು. ನೀನು ಇಲ್ಲಿ ಇರು. ಇಲ್ಲವೇ ಹೋಗು ತವರು ಮನೆಗೆ. ಅಲ್ಲಿ ದಾನ ಧರ್ಮ ಏನು ಬೇಕೋ ಮಾಡು-ತಂದೆ ಕೂಡಿಸಿಟ್ಟ ಹಳೆ ಸೀರೆ ತಗೊಂಡು!

ೇಬಿ : ಆದರೆ ಅಮ್ಮಾ! ಅತ್ತಿಗೆ ಅಪ್ಪ ಹಳೆಸೀರೆ ಉಡತಾನೇನೇ? ವಾ:! ವಾ:! ವಾ:! **(ಚಪ್ಪಾಳೆ ತಟ್ಟುತ್ತ)** ಅತ್ತಿಗೆ ಅಪ್ಪಾ! ಹಳೆ ಸೀರೆ ದಪ್ಪಾ! ಉಡ್ತಾನೆ ಬೆಪ್ಪಾ! **(ಹಾಡುತ್ತಾನೆ ಅಪಸ್ವರದಲ್ಲಿ)**

ವೇರಿ : ಏ ಏ ಬೇಬೀ! ಸಾಕು ಮಾಡು ನಿನ್ನ ಗಾಯನ. ಈಗ ಬೇಡ. ಖಾಲಿ ಹೊಟ್ಟೆಯ ಮೇಲೆ! **(ನಿರ್ಮಲಾಳಿಗೆ ನಗು. ಕಂಡು ಕೆರಳಿ)** ಏ ನಿಮಿss! ಹಲ್ಲು ಕಿಸಿಯುತ್ತೀಯಾ, ಹಿಡಿಂಬೇ! ಹೇಳ್ತೇನೆ ಕೇಳು. ಮಲ್ಲಿಗೆ ಕೊಟ್ಟ ಆ ಸೀರೆಯಾರೇ ತಿರುಗಿ ತಾ, ಇಲ್ಲವಾದರೆ ನಿನ್ನ ಅಪ್ಪನಿಂದ ಅದಕ್ಕೆ ಬದಲಾಗಿ ಹೊಸ ಸೀರೆಯಾರೇ ಕೊಂಡುತಾ - ನಾಳೆ ಮಂಗಳಾಗೌರಿಯ ಪೂಜೆಗೆ ಹೊಸ ಸೀರೆಯನ್ನು ನಿನ್ನ ಅಪ್ಪನ ಕಡೆಯಿಂದ ಕೊಂಡು ತಾ!

ೇಬಿ : ಹೊಸ ಸೀರೆತಂದರೇನೆ ಚಲೋ ಆತ. ಇಲ್ಲದಿದ್ರೆ, ಒದ್ದೆ ಬಟ್ಟೆಯಲ್ಲಿ ಗೌರೀ ಪೂಜೆ ಮುಗಿಸಬೇಕು, ನೋಡು!

ಾವೇರಿ : ಏ, ಸುಮ್ಮನೇ ಏಕೆ ನಿಂತೀ? ಟಪಾಲ ಪೆಟ್ಟಿಗೆ ಹಾಂಗ? ಕೇಳಿದೆಯೋ ಇಲ್ಲೋ? ನಮ್ಮ ಬೇಬಿಗೆ ಇದ್ದ ಬುದ್ಧಿ ಮ್ಯಾಟ್ರಿಕ್ ಮುಗಿಸಿದ ಈ ಮೂಗಣ್ಣಿಗೆ ಇಲ್ಲ!

ೇಬಿ : 'ವಾ: ವಾ:! ಮೆಟ್ರಿಕ್ ಮೂಗಣ್ಣೆ! ಮೆಟ್ರಿಕ್ ಮೂಗಣ್ಣೆ! ಬುದ್ಧಿಗೇಡಿ ಕುನ್ನಿ! ನೋಡಿರವ್ವಾ ಬನ್ನಿ!' **(ಹಾಡುವಳು ಅಣಕ ಮಾಡಿ. ನಿರ್ಮಲೆಗೆ ಅಳು ಉಕ್ಕುವದು.)**

ಾವೇರಿ : ಸಾಕು! ಬೇಬೀ ಸಾಕು! ಹಸಿದ ಹೊಟ್ಟೆಯ ಮೇಲೆ ಈ ಸಂಗೀತ ತರವಲ್ಲ!

ೇಬಿ : ನಾ ಹಾಡೇ ಹಾಡುವವಳು. ನನಗೆ ಈಗ ಹಾಡಲಿಕ್ಕೆ ಆಗೇದs! ಕವಿತಾ ಕಟ್ಟೋ ಹುಕ್ಕಿಯೂ ತಾಗೇದ! 'ಹಾಡೇ ಬಿಟ್ಟೆ! ಸಿಕ್ಕಾಪಟ್ಟೇ ಹಸಿದ ಹೊಟ್ಟೆ! ತೊಳಸಿ ಕೆಟ್ಟೆ!' **(ನಗುವಳು. ನಿರ್ಮಲೆಗೆ ಅಳುವಿನಲ್ಲಿಯೂ ಬೇಬಿಯ ಹುಚ್ಚಾಟಕ್ಕೆ ಫಕ್ಕನೆ ನಗು ಉಕ್ಕಿ ಬಂದು ತಡೆಯಲಾರದೆ ಒಳಗೆ ಹೋಗ ಹತ್ತುವಳು.)** ನಗತಾಳೆ ನೋಡು. ಹಲ್ಲ ಕಿರಿತಾಳ! ಅಮ್ಮಾ! ಹೊಟ್ಟೆ ಹಸಿದರ ಹೊಟ್ಟೆಗೆ ಕಾಗೆ ಕಾಕಾ ಅಂತಾವ! ಗುಬ್ಬಿ ಚಿಂವ ಚಿಂವ ಅಂತಾವ! ಹೆಗ್ಗಣಾ ಚಿಲಿಪಿಲಿ ಓಡಾಡ್ತಾವ! ನಮ್ಮ ಫಳಾರ ಯಾವಾಗ?

ಕಾವೇರಿ : ಹೌದು ತಾಯಿ ಪಾಪ. ಬೇಬೀ ಮೋರೆ ಬಾಡಿ ಹೋಯ್ತು! ಒಣಗಿ ಹೋಯ್ತು! ಏ ಮೆಟ್ರಿಕ್ ಮಾಟಗಾರ್ತಿ, ಹೋಗಿ ಒಂದಿಷ್ಟು ತಿಂಡೀತೀರ್ಥ ತಯಾರು ಮಾಡಿ ತಾ - ಏ ನಿಲ್ಲು ಏನು ಮಾಡ್ತಿ?

ನಿರ್ಮಲೆ : ಅದೇ ಬ್ರೆಡ್ ಚೂರ -

ಕಾವೇರಿ : ಥೂ ನಿನ್ನ ಮನೆ ಹಾಳಾಗs! ನಿನ್ನ ಬಾಯಿಗೆ ಬೂದಿಬೀಳs! ಬ್ರೆಡ್ ಅಂತೆ. ಆಗಲಿ ಅರ್ಧಾಗಂಟೆ ಮುಂಚೆ ತಿಂದದ್ದೇನು ಬ್ರೆಡ್ಡೇ ಅಲ್ವೆ.

ನಿರ್ಮಲೆ : ಅಲ್ಲ. ಅತ್ತೆಮ್ಮಾ -

ಕಾವೇರಿ : ಮುಚ್ಚು ಬಾಯಿ. ಇಷ್ಟು ಬಟಾಟೆ ಅವಲಕ್ಕಿ ಮಾಡು ಮತ್ತಷ್ಟು ಸಾವಗೀ ಖೀರು ಮಾಡು. ನೀಬೇಕಾದ್ರ ಒಣ ಬ್ರೆಡ್ಡೇ ತಿನ್ನು! ನಡಿ ಹೋಗು. **(ನಿರ್ಮಲಾ ಹೋಗುತ್ತಾಳೆ, ಹಣೆಗೆ ಕೈ ಹಚ್ಚಿಕೊಳ್ಳುತ್ತ.)**

ಬೇಬಿ : **(ನಿರ್ಮಲಾ ಹೋದದ್ದು ಖಾತ್ರಿ ಮಾಡಿಕೊಂಡು)** ಅಮ್ಮಾ ಅಮ್ಮಾ! ಇನ್ನೊಂದು ಗುಟ್ಟು.

ಕಾವೇರಿ : **(ಕಿವಿ ನಿಮಿರಿ)** ಆಂ ಏನದು?

ಬೇಬಿ : ಆಗ ತಾನೇ ಪತ್ರ ಬಂದಿದೆ. ಅಣ್ಣನ ಪತ್ರ ಅತ್ತಿಗೆಗೆ!

ಕಾವೇರಿ : ಆಂ! ನನಗೆ ಗೊತ್ತೇ ಇಲ್ಲ! ಇದು ಹೇಗೆ ಹೀಗೆ? ನಾನು ಅದನ್ನು ನೋಡಬೇಕು. ನೋಡಲೇಬೇಕು! ನಿರ್ಮಾ! ಏ ನಿರ್ಮಿ! **(ಆಕೆ ಓಡಿ ಬರುವಳು.)**

ನಿರ್ಮಲೆ : ಏನು? ಅತ್ತೆಮ್ಮಾ! ಮತ್ತೆ ಏಕೆ ಕರೆದಿರಿ? ಅವಲಕ್ಕಿ ಮಾಡಿ ಆಯ್ತು. ಈಗ ಖೀರು!

ಕಾವೇರಿ : ಹಾಳಾಗಲಿ ಖೀರು! ಆ ಪತ್ರ ಕೊಡು. ಎಲ್ಲಿದೆ? ನಿನ್ನ ಗಂಡನ ಪತ್ರ-ನನ್ನ ಬಾಳಾ ಸಾಹೇಬನ ಪತ್ರ! ತಾ ಇಲ್ಲಿ.

ನಿರ್ಮಲೆ : ಅದು ನನಗೆ ಬಂದಿದ್ದು. ನಿಮ್ಮ ಬಗೆಗೆ ಏನೂ ಇಲ್ಲ.

ಕಾವೇರಿ : ಕಾಯಿದೆ ಮಾಡಬೇಡ. ಆತ ನಿನಗೆ ಗಂಡ - ಆಮೇಲೆ; ಆತ ಮೊದಲು ನನ್ನ ಮಗ. ಹೂಂ ತಾ ಆ ಪತ್ರ. **(ನಿರ್ಮಲೆ ಹೋಗುವಳು.)** ಬೇಬೀ, ನಿನ್ನ ಗಂಡನ ಪತ್ರವೇಕೆ ಇಲ್ಲ?

ಬೇಬಿ : ಏನೋ! ನಾನು ಕಳೆದ ಸಲ ಪತ್ರ ಹಾಕೀನಿ. ಬೇರೆ ಬಿಡಾರ ಮಾಡಿದ ಹೊರತು ನಾನು ಬರುವಾಕೀನೇ ಅಲ್ಲ ಎಂತ!

ಕಾವೇರಿ : ಅದು ನನಗೆ ಗೊತ್ತೇ. ನಿನ್ನ ಪತ್ರ ಬರೆದವಳು ನಾನೇ ಅಲ್ವೆ. ನನಗೇ ಹೇಳ್ತೀಯಾ? ನಿಮ್ಮ ಬಿಡಾರ ಬೇರೆ ಆಗಲಿ. ಆಗ ನಾನೂ ಹೊರಟೆ.

ನಿಮ್ಮ ಬಿಡಾರ ಬೇರೆ ಆಗಲಿ. ಆಗ ನಾನೂ ಹೊರಟೆ. ನಿರ್ಮಲೆಯೊಂದಿಗೆ ನಮ್ಮ ಬಾಳಾ ಸಾಹೇಬನಿದ್ದಲ್ಲಿ.

**ಬೇಬಿ :** ಅಲ್ಲ ಅವ್ವಾ. ಇದೇನು ಹೇಳ್ತಿದ್ದಿ? ನೀವಿಬ್ಬರೂ ಹೋದರೆ ಇಲ್ಲಿ ನಮ್ಮಪ್ಪನ ಗತಿ ಏನು? ಅತ್ತಿಗೆನ ಇಲ್ಲೇ ಬಿಟ್ಟು ಹೋಗು. ಅವಳು ಇಲ್ಲಿಯೇ ಮಾವನ ಸೇವೆ ಮಾಡಲಿ! ಅವಳಿಗೆ ಗಂಡನ ಬಿಡಾರ ಬೇಡ. ನೀನೊಬ್ಬಳೇ ಹೋಗು.

**ಕಾವೇರಿ :** ಇದೂ ಹೌದೆ. ಎಂಥ ಮುತ್ತಿನಂಥ ಮಾತನಾಡಿದಿ. ನನ್ನ ಬೇಬಿ! ತಾಯಿ ಮಕ್ಕಳ ನಡುವೆ ಬರುವ ಈ ಸೊಸೆಯಂದಿರು, ಮನೆ ಮುರುಕ ಮಾರಿಗಳು! ಇರಲಿ. ನಡೆ ನಾವೇ ಹೋಗಿ ನೋಡೋಣ. ಬಾಳಾ ಸಾಹೇಬನ ಪತ್ರವಾದರೂ ಏನು ಬಂದಿದೆ ಎಂದು!

**(ಇಬ್ಬರೂ ಹೋಗುವರು. ಒಂದೆರಡು ಗಳಿಗೆಯ ನಂತರ ವೇಣೂಳ ಪ್ರವೇಶ.)**

**ವೇಣೂ :** ನಿರ್ಮೀ! ಏ ನಿರ್ಮೀ!

**ನಿರ್ಮಲೆ :** (ಓಡಿ ಬರುತ್ತ) ಯಾರು? ಬಂದೆ ನಿಲ್ಲು! - ವೇಣೂ ನೀ ಬಂದಿಯಾ? **(ದಿಟ್ಟಿಸಿ)**

**ವೇಣು :** **(ನಕು)** 'ಏ ಹುಚ್ಚಿ! ನಾನಲ್ಲದೆ ಮತ್ತೆ ನನ್ನ ಭೂತ ಬಂತೆಂದು ತಿಳಿದೆಯಾ? ಆದರೆ ನೀನು ಮಾತ್ರ ಭೂತ-ಪಿಶಾಚಿಯು ಹಾಗೆ ಕಾಣುತ್ತೀ! **(ಗಂಭೀರವಾಗಿ)** ನಾವೆಲ್ಲ ಒಟ್ಟು ಹಾಯಸ್ಕೂಲಿನಲ್ಲಿ ಓದುವಾಗ ನೀನು ಎಷ್ಟು ಸದ್ದುಮುದ್ದಾಗಿ ಇದ್ದೀಯೇ! - ಈಗ ಏನು ಬಡಬಿದ್ದಿದ್ದೀಯೇ! ಗಾಣಕ್ಕೆ ಹೂಡಿದ ಎತ್ತಿನಂತೆ ಕಾಣುತಿದ್ದೀ!

**ನಿರ್ಮಲೆ :** **(ವೇಣೂಳ ಬಾಯಿ ಮುಚ್ಚಿ)** ಏ ಆ ಮಾತು ಈಗ ಇಲ್ಲಿ ಬೇಡ! ನಿನ್ನ ಎನ್‌ಕ್ವಾಯರಿ ಕಮಿಶನ್ ಮುಂದೆ ನನ್ನ ಸಾಕ್ಷಿ ಇಲ್ಲಿ ಬೇಡ!

**ವೇಣು :** ಇಲ್ಲಿ ಬೇಡವೆಂದರೆ ಇನ್ನೆಲ್ಲಿ? ನೀನೆಲ್ಲಿ ನಮ್ಮಲ್ಲಿ ಮಾಡುತ್ತಿ? ನಾನು ಬಂದು ಎಷ್ಟೋ ದಿನವಾಯ್ತು. ನೀ ನಮ್ಮ ಮನೆಯತ್ತ ಹಾಯಲೇ ಇಲ್ಲ!

**ನಿರ್ಮಲೆ :** ಹಾಯುವದು ಹೇಗೆ? ಈಗಲೇ ನಿನ್ನ ಅವ್ವ ಹೇಳಿದಳು. ಗೊತ್ತಾಯಿತು. ನಿನ್ನ ಭೆಟ್ಟಿ ಇಂದಿನ 'ಪ್ರಜಾವಾಣಿ'ಯಲ್ಲೇನೂ ಬಂದಂತೆ ಇಲ್ಲ! **(ನಗುವಳು)**

**ವೇಣು :** **(ಆಕೆಯ ಗಲ್ಲ ಚಿವಟ)** ಸಾಕು ಬಿಡಿ. ದೊಡ್ಡ ಪತ್ರಿಕೆ ಓದುವಾಕಿ! ನಿನ್ನ ಹಳೆಚಟ ನಗೆಚಾಟಿಕೆ ಹೋಗಿಲ್ಲ. ಮೈ ಬಡಕಾದರೂ ನಾಲಿಗೆ

ಚುರುಕಾಗಿಯೇ ಇದೆ! ಆದರೆ ಈ ನಿನ್ನ ನಾಲಿಗೆಯ ಚಾಟಿ ನಮ್ಮಂಥ ಬಡಪಾಯಿ ಗೆಳತಿಯರ ಮೇಲೆ ಎಳೆಯುವಿ ನೀನು! ಅದನ್ನು ನಿನ್ನ ಆ ಅತ್ತೆಗೆ ಲತ್ತೆ ಕೊಡಲು ಬಳಸುವದೇ ಇಲ್ಲ! ಅತ್ತೆಯ ಮುಂದೆ ಮೆತ್ತಗಾಗಿ ಬಿಡುವಿಯಂತೆ! ಕತ್ತೇ ಎತ್ತುವದಿಲ್ಲವಂತೆ! ಅಂತೆಯೇ ಹೀಗೆ ಸತ್ತು ಸತ್ತು ಸುಸ್ತಾಗಿ ಬಿದ್ದಿರುವಿ!

ನಿರ್ಮಲೆ : **(ನಿಟ್ಟುಸಿರು ಬಿಟ್ಟು)** ಏನು ಸಾವೋ ಏನು ಸುಸ್ತೋ! ವರಳಲ್ಲಿ ಕೂತು ಒನಕೆಯ ಪೆಟ್ಟು, ಗಂಡನ ಮನೆಯಲ್ಲಿ ಅತ್ತೆಯ ಸಿಟ್ಟು! ತಪ್ಪಿಸಿಕೊಳ್ಳಲು ಆಗುವದೇನೇ?

ವೇಣು : ಏ ಮೂಳಿ. ಆ ವರಳು-ವನಕೆ ಎಲ್ಲ ಹಳೇಕತೆ. ಈಗ ಹಿಟ್ಟಿನ ಗಿರಣಿ ಬಂದಾವೆ. ಈಗಿನ ಕಾಲದಲ್ಲಿ ಈ ಹಳೆ ಮನೆಮಂದಿಗೆ ಇಷ್ಟೆಲ್ಲ ಪ್ರತಿಷ್ಠೆ ಯಾರೂ ಕೊಡುವದಿಲ್ಲ. ಹಳೆಯ ಕಸಬರಿಗೆ ಮೂಲೆಯಲ್ಲೇ ಇರಬೇಕು! ಹೆಂಡತಿ ಏಕೆ? ಗಂಡನ ಸುಖಕ್ಕೋ, ಅತ್ತೆಯ ಅನುಕೂಲಕ್ಕೋ?

ನಿರ್ಮಲೆ : **(ಚಪ್ಪಾಳೆ ತಟ್ಟಿ)** ಹಿಯರ್! ಹಿಯರ್! ವೇಣೂ ಈ ಪ್ರಶ್ನೆ ನಿಮ್ಮ ಮಹಿಳಾ ಮಂಡಲದಲ್ಲಿ ಇಡು - ಈ ಮಂಗಳವಾರ. ವೇಣೂ ಏನು ಹೇಳಲಿ? ಬಾಯಿಗೆ ಬಾಯಿ ಕೊಟ್ಟರೆ ದಿನಬೆಳಗಾದರೆ ಹೊಲಸು-ಹುಳುಕು ಕೇಳಬೇಕಾಗುತ್ತದೆ. ಅದರ ಬದಲು ನಾನೇ ಸುಮ್ಮನಿದ್ದರೆ ಅಷ್ಟೇ ಮನಸ್ತಾಪ ಕಡಿಮೆ. ಅದೇ ಒಂದು ಸಮಾಧಾನ. ವೇಣೂ, ಒಂದು ರೀತಿ ನೀನು ಪುಣ್ಯವಂತೆ. ನಿನಗೆ ಅತ್ತೆ ಇಲ್ಲ! ಆದರೆ ಇಲ್ಲಿ! ಕೂತರೆ ಮೈಗಳ್ಳಿ. ಗೈದರೆ ಅಧಿಕಪ್ರಸಂಗಿ. ಸುಮ್ಮನಿದ್ದರೆ ಮೂಗಳ್ಳಿ. ಆಡಿದರೆ ವಾಚಾಳಿ. ಏನು ಮಾಡಿದರೂ ಕಷ್ಟ. ಮಾಡದಿದ್ದರೂ ಕಷ್ಟ!

ವೇಣು : **(ಕಳವಳದಿಂದ)** ಪಾಽಽಪ! ನಿಮ್ಮೂ ನಿಮ್ಮೂ ಹಳಹಳಿಸಬೇಡ. ನನಗೆ ಗೊತ್ತು. ಎಲ್ಲ ಅತ್ತೆಯಂದಿರೂ ಹೀಗೆಯೇ. ಅತ್ತೆಯೆಂದರೆ ಸೊಸೆಯನ್ನು ಪೀಡಿಸುವ ಪ್ರಾಣಿ. ತಮ್ಮ ಅತ್ತೆಯು ಕೊಟ್ಟ ಹಿಂಸೆಯ ಸೇಡು ತಮ್ಮ ಸೊಸೆಯರನ್ನು ಹಿಂಸಿಸಿ ತೀರಿಸಿಕೊಳ್ಳುತ್ತಾರೆ. ಈ ಹೊಯ್ಯಾಲಿ ಅತ್ತೆಯರಿಗೆ ಕತ್ತೆಯ ಲದ್ದಿಯನ್ನು ಕುನ್ನಿಯ ಉಚ್ಚೆಯಲ್ಲಿ ಕರಡಿಸಿ ಕುಡಿಸಬೇಕು! ಅಷ್ಟು ಮೈ ಉರಿಯುತ್ತದೆ.

ನಿರ್ಮಲೆ : ಸರಿ. ಹಾಗಾದರೆ ಒಂದು ಗಂಟೆ ತಾ -

ವೇಣು : - ಅದೇಕೆ, ಮತ್ತೆ?

ನಿರ್ಮಲೆ : ಏಕೆಂದರೆ, ಅದನ್ನು ಆ ಬೆಕ್ಕಿನ ಕೊರಳಿಗೆ ಕಟ್ಟಲಿಕ್ಕೆ! **(ಥಕ್ಕನೆ ಇಬ್ಬರಿಗೂ ನಗು.)**

ವೇಣು : ನೀನು ತೀರ ಕೆಟ್ಟವಳು. ಇಂದು ರೇಡಿಯೋ ಸ್ಟೇಶನ್ನೆ ಇದೆ-ನಮ್ಮ ಬೇಬೀ. ಅವಳ ವಾಣಿಯೇ ಒಂದು ಆಕಾಶ! (ಇಬ್ಬರೂ ನಗುವರು.) ಕ್ಷಣಕ್ಕೆ ಸಂಗೀತ, ಕ್ಷಣಕ್ಕೆ ಶೋಕ, ಕ್ಷಣಕ್ಕೆ ಆರ್ಭಟ, ಕ್ಷಣಕ್ಕೆ ಡಾನ್ಸು! ನೀನು ತುಸು ತಡವಾಗಿ ಬಂದಿ. ಇಂಥ ಒಂದು ನವರಸದ ಪ್ರೋಗ್ರಾಂ ನೀನೂ ನೋಡುತಿದ್ದೆ!

ವೇಣು : ಕೇಳಿದ್ದೇನೆ. ನಮ್ಮ ಅಮ್ಮ ಹೋಗಿ ಬಣ್ಣಿಸಿದಳು. ನಿನಗೆ ಇದ್ದುದರಲ್ಲಿಯೇ ಇದೊಂದು ಸುಖ ದುಃಖದಲ್ಲಿ ಎಂದು ತಿಳಿದು ಬಿಡು ನಿರ್ಮಾ. **(ನಗುವಳು)**

ನಿರ್ಮಲೆ : ಏನು ಕೂಗುವಿಯೇ! ಸ್ವಲ್ಪ ಮೆಲ್ಲಗೆ ಮಾತಾಡು. ನಮ್ಮ ಅತ್ತೆಯ ಕಿವಿ ತುಸು ಉದ್ದ -

ವೇಣು : **(ನಾಲಿಗೆ ಕಚ್ಚಿಕೊಂಡು)** ದೋ sorry. ಅವು ಕತ್ತೆಯ ಕಿವಿ! ಆದರೆ ನಾನೇನು ಅವಳ ಸೊಸೆಯಲ್ಲ. ನಾನೇನು ಹೆದರುವದಿಲ್ಲ!

ನಿರ್ಮಲೆ : ಆದರೆ ನಾನು ಅವರ ಸೊಸೆ. ನೀನು ನನ್ನ ಗೆಳತಿ. ನಾನು ಭೋಗಿಸಬೇಕು. ನಿನ್ನ ಮೇಲಿನ ಕೋಪ! ಆಟೋಪ!

ವೇಣು : ಸರಿ, ಸರಿ very sorry. ಆದರೆ ಹೇಳಿದೆನಲ್ಲ. ಇಂಥವರನ್ನು ಕಂಡರೆ ಆಗುವದಿಲ್ಲ! ಏನು ಮಾಡಲಿ?

ನಿರ್ಮಲೆ : ನನ್ನ ನೋಡಿ ಸಹಿಸು. ನನಗೆ ನಮ್ಮ ಈ ಅತ್ತೆ ಬೇಬಿಯರ ಬಗೆಗೆ ಕನಿಕರವೇ ಅನಿಸುತ್ತದೆ! ಅವರವರ ಸ್ವಭಾವ! ಅದಕ್ಕೆ ಮದ್ದಿಲ್ಲ. ಅವರಿಗೆ ನಮ್ಮ ಹಾಗೆ ಸಂಸ್ಕಾರ ಸಭೆ-ಸಮ್ಮೇಲನ, ಸಾಮಾಜಿಕ ಸಂದರ್ಭ-ಯಾವ ಅವಕಾಶವೂ ಚಿಕ್ಕಂದಿನಿಂದಲೂ ಸಿಕ್ಕಿಲ್ಲ. ಅವರು ತಿದ್ದಿಕೊಳ್ಳುವದಾದರೂ ಹೇಗೇ? ನಾನೂ ನಿನ್ನಂತೆ ತಾಳ್ಮೆಗೆಟ್ಟು ರೇಗುತ್ತೇನೆ, ಕೂಗುತ್ತೇನೆ. ಆದರೆ ಮತ್ತೆ ತಣ್ಣಗಾಗುತ್ತೇನೆ, ಪಾಪ. ಅವರಾದರೂ ತಮ್ಮ ಸೊಸೆಯಂದಿರಲ್ಲದೆ ಇನ್ನಾರ ಮೇಲೆ ತಮ್ಮ ಪೌರುಷ ಕಾಣಿಸಬೇಕು? ಬಾವಿಯ ಕಪ್ಪೆಗಳು!

ವೇಣು : ಈ ಸ್ತ್ರೀಯರಿಗೆಲ್ಲಿ ಪೌರುಷ! ಇವರು ನಕಲಿ'ಪುರುಷ'ರು! ಬಾವಿಯ ಕಪ್ಪೆ ಬಾವಿಗೇ ಚಂದ. ಮಂದಿಯ ಮೈಗೆ ಹಾರಿ ಹೊಲಸು ತೂರಾಡಬಾರದು! ನೀನೇನೋ ಅತ್ತೆಯ ಮನೋವಿಶ್ಲೇಷಣೆಗೆ ಉತ್ತಮ ಭಾಷಣ ಬಿಗಿದೆ! ನಾನೇನು ಅದಕ್ಕೆ ಚಪ್ಪಾಳೆ ತಟ್ಟುವದಿಲ್ಲ! ಹೂಂ.

ನಿರ್ಮಲೆ : ಸಾಕು. ಇನ್ನು ನಿನ್ನ ಮುಂದೆ ಮಾತಾಡುವದೇ ಉಳಿಯಿತು. ಇನ್ನಾರ ಮುಂದೆ ತೋಡಿಕೊಳ್ಳಲಿ? **(ಬಿಕ್ಕುವಳು.)** ನಾನಿನ್ನು ಒಳಗೆ ಹೋಗುತ್ತೇನೆ **(ಹೊರಡುವಳು)**

ವೇಣು : (ಅವಳನ್ನು ತಡೆದು ಹಿಡಿದು) ಛೀ. ಹಸಿ ಹುಚ್ಚಿ? ಇಷ್ಟೇನೆ ನಿನ್ನ ತಾಳ್ಮೆ ತಿಳುವಳಿಕೆ-ನಿಲ್ಲು. (ಅವಳನ್ನು ತಬ್ಬಿಕೊಂಡು) ನಿಮ್ಮೂ! ನಿಮ್ಮೂ! (ಮೃದವುತ್ತ ಸಂತೈಸುವಳು.) ಅರೇ ಈ ನಡುವೆ ಬಂದ ಕೆಲಸ ಮರೆತೇ ಹೋಯ್ತು. ನನಗೆ ಕಸೂತಿಗೆಲಸದ ಫ್ರೇಮು ಬೇಕಿತ್ತು. ನನ್ನ ಫ್ರೇಮು ಏನೋ ಕೆಟ್ಟಿದೆ. ನಿನ್ನ ಫ್ರೇಮು ಸರಿಯಿದ್ದರೆ ಕೊಡು.

ನಿರ್ಮಲೆ : ಫ್ರೇಮಿನ ಸ್ಕ್ರೂ ಸರಿ ಇದೆ. ಇಲ್ಲಿ ಪ್ರೇಮದ ಸ್ಕ್ರೂವೇ ಕಾಣೆಯಾಗಿದೆ. ನಿಲ್ಲು. (ಓಡಿ ಹೋಗಿ ತಂದು ಕೊಡುವಳು.)

ವೇಣು : (ನಿರ್ಮ ಬರುವನಕ) ಎಂಥ ಸಾಧ್ವಿ! ಚೆಲುವೆ! ಎಷ್ಟು ಮಧುರ! ಎಷ್ಟು ಚತುರ! ಆದರೆ ಹೂವಿನ ಮಾಲೆ ಈ ಮುಳ್ಳುಬೇಲಿಗೆ ಬಿದ್ದಂತೆ ಆಗಿದೆ! ತಂದೆಯಾ ಫ್ರೇಮು. Thanks ಇನ್ನು ಬರುತ್ತೇನೆ. (ಹೊರಡುವಳು)

ನಿರ್ಮಲೆ : ಏ ವೇಣು. ಹೋಗಬೇಡ. ನಾಲ್ಕು ನಿಮಿಷ ನಿಲ್ಲು.

ವೇಣು : (ಅವಳ ತಲೆ ಸವರಿ) ಇಲ್ಲ, ನಿಮ್ಮು ಹೋಗಲೇಬೇಕು. ಸಂಜೆ ಬರುತ್ತೇನೆ. ನಿನ್ನ ಕಾವೇರಮ್ಮ ಪುರಾಣಕ್ಕೆ ಗುಡಿಗೆ ಹೋದಾಗ. ನಿನಗೆ ಏನೋ ಮೋಜಿನ ಸಂಗತಿ ಹೇಳುವದಿದೆ.-

ನಿರ್ಮಲೆ : (ಆಕೆಯ ಕೈಹಿಡಿದು) ಈಗಲೆ ಹೇಳಲ್ಲ! ಹೇಳು. ಊಹೂಂ. ಹೇಳಿದ ಹೊರತು ಬಿಡೋಲ್ಲಾ.

ವೇಣು : ಬೇಡ. ಈಗ ಅಷ್ಟು ವೇಳೆ ಇಲ್ಲ. ಮತ್ತೆ ಅತ್ತೆ, ಬೇಬಿ ದಾಳಿ ಇಡುವ ಹೊತ್ತಾಗಿದೆ.

ನಿರ್ಮಲೆ : ಇಲ್ಲ. ಇನ್ನು ವೇಳೆ ಇದೆ. ಸ್ವಲ್ಪದರಲ್ಲಿ ಹೇಳು. ಸಂಜೆ ವಿಸ್ತಾರವಾಗಿ ಹೇಳುವಿಯಂತೆ! ನನ್ನ ಕುತೂಹಲ ಕೆರಳಿಸಿ ಬಿಟ್ಟಿರುವಿ -

ವೇಣು : ಬೇಬಿಯ ಹೆಸರಿನಲ್ಲಿ ನಿನ್ನ ಅತ್ತೆ ಪತ್ರ ಬರೆದಳು-ಅಳಿಯನಿಗೆ ತಂದೆ ತಾಯಿಗಳಿಂದ ದೂರ ಬೇರೆ ಬಿಡಾರ ಮಾಡೆಂದು.

ನಿರ್ಮಲೆ : ಸರಿ. ಅದು ನಂಗೆ ಗೊತ್ತು.

ವೇಣು : ಮುಂದೆ ಕೇಳು. ಆ ಪತ್ರ ಬೇಬಿಯ ಗಂಡನಿಗೆ ಮುಟ್ಟಲೇ ಇಲ್ಲ. ಮಾವನ ಕೈಗೆ ಬಿತ್ತು! ಪತ್ರ ಬರೆಯುವಾಗಿನ ಬುದ್ಧಿ, ವಿಳಾಸ ಬರೆಯುವಾಗ ಉಳಿಯಲಿಲ್ಲ! ಅದನ್ನು ಓದಿ ಮಾವ-ಅತ್ತೆ ದಿಗಿಲು ಬಿದ್ದರು. ಅವರು ಗೋವಿನಂತಹ ಜನ. ಆದರೆ ಗೋವಿಗೂ ಕೋಡು ಇರುತ್ತದೆ, ನೋಡು. ಈಗ ಈ ಬೇಬಿಯ ತಾಯಿಯ ಕುತಂತ್ರಕ್ಕೆ ಅವಳ ಅತ್ತೆ ತಾರಾಳೇ ತಿರುಮಂತ್ರ ಮಾಡುತ್ತಾಳೆ. ತಾರಾ ಇಲ್ಲಿಗೆ ಬತ್ತಾಳೆ. ನಿನ್ನ ಅತ್ತೆಯ ಮಗನ ಬಿಡಾರವನ್ನೆ ಬೇರೆ ಮಾಡಿಸಿ ನೀನು

ಅವನಲ್ಲಿ ಹೋಗುವಂತೆ ಮಾಡುತ್ತಾಳೆ. ನೋಡು!

ನಿರ್ಮಲೆ : (ಹರ್ಷಪಟ್ಟು) ಹೌದೇ? ನಿನ್ನ ಬಾಯಿಗೆ ಸಕ್ಕರೆ ಬೀಳಲಿ. ಮುಂಬಯಿಯಿಂದ ಒಂದೇ ಸಮನೆ ಪತ್ರ ಬರುತ್ತಾವೆ. ಪತ್ರದ ಮೇಲೆ ಪತ್ರ. ನನ್ನ ಜೀವ ಅಲ್ಲಿ ಹೋಗಲು ತಳಮಳಿಸುತ್ತದೆ. ಆದರೆ ಈ ಅತ್ತೆ ಮೊಸಳೆ ಕಾಲು ಹಿಡಿದುಬಿಟ್ಟದೆ! ಇನ್ನು ತಾರಾಬಾಯಿಯೇ ಬಂದು ಪುಣ್ಯಕಟ್ಟಿ ಕೊಳ್ಳುವಳೇ?

ವೇಣು : ನೋಡುತ್ತಿರು. ಸುಮ್ಮನೆ ತಾರಾಬಾಯಿ ಮಹಾಧೂರ್ತೆ. ಒಳ್ಳೆ ಉಪಾಯಗಾರ್ತಿ. ಆಕೆಬಂದು ಒಂದು ಹೊಂಚು ಹೂಡುವಳು. ನೀನು ಆಗ ಸುಮ್ಮನಿರಬೇಕು.

ನಿರ್ಮಲೆ : ಸರಿ. ಅದಾವ ಹೊಂಚು?

ವೇಣು : ಅದೆಲ್ಲ ಆಕೆಬಂದಾಗಲೇ ತಿಳಿಯುವದು. ತಾರಾಳ ತಂತ್ರ ಫಲಿಸಿತೆಂದರೆ, ನಿನ್ನ ಅತ್ತೆಯ ಫಜೀತಿಗೆ ದಿಕ್ಕೇ ಇಲ್ಲ. ನಿನ್ನ ಕಾವೇರಮ್ಮನಿಗೆ ಕಾವಿನ ದಮ್ಮೇ ಏರುವದು ಆ-ಡಾಕಿಣಿಗೆ!

ನಿರ್ಮಲೆ : ಹಾಗೆಲ್ಲ ಹೇಳಬಾರದು ವೇಣೂ, ಅವಳೂ ತಾಯಿ. ತನ್ನ ಮಗನ ಮೋಹ.

ವೇಣು : (ಹುಸಿ ಮುನಿಸಿನಿಂದ ಅವಳ ಗಲ್ಲ ಚಿವುಟ) ಸಾಕು ನಿನ್ನ ಆ ಗೊಡ್ಡು ವೇದಾಂತ! ನೀನೂ ಪುರಾಣ ಹೇಳಲು ಹೋಗು - ಅತ್ತೆಯ ಸೆರಗು ಹಿಡಿದು! ಅಲ್ವೇ, ನೀನೇ ಆಗ ಅಂದಿ. ಅತ್ತೆ ಮೊಸಳೆ. ಕಾಲು ಹಿಡಿದಿದ್ದಾಳೆ ಎಂದು. ಮತ್ತೆ ಈಗ ಅವಳಿಗೆ ಮಗನ ಮೋಹ-ಪಾಪ. ಎನ್ನುತ್ತೀ! ನಿನ್ನ ತಲೆ ಕೆಟ್ಟಿದೆಯೇ!

ನಿಮಾರ್ಲೆ : (ತಲೆ ಹಿಡಿದುಕೊಂಡು) ಹೌದು ವೇಣೂ. ನನ್ನ ತಲೇನೇ ಕೆಟ್ಟಿರಬೇಕು. ಏನೂ ಹೊಳೆಯುವದಿಲ್ಲ! ಏನೂ ತೋಚುವದಿಲ್ಲ!

ವೇಣು : ನಿಮ್ಮೂ ನಿನಗೆ ತುಂಬ ಆಯಾಸವಾಗಿದೆ ನಿಜ. ಹೋಗಿ ಮಲಗು ಕೋಣೆಯಲ್ಲಿ. ನಾ ಹೊರಟೆ. (ಹೋಗುವಳು.)

(ನಿರ್ಮಲಾ ತಲೆ ಹಿಡಿದುಕೊಂಡು ಕೊಂಚಕಾಲ ಕೂತಿರುವಳು ಸೋಫಾದಲ್ಲಿ. ಅಷ್ಟರಲ್ಲಿ ತೆರೆಯಲ್ಲಿ ಬೇಬಿಯ ಕೂಗು.)

ಬೇಬಿ : ಅಮ್ಮಾ! ಅಮ್ಮಾ! ತಾರು! ಮುಂಬಯಿಯಿಂದ ತಾರು! ಎಂದು ಕೂಗುತ್ತ ಬರುತ್ತಾಳೆ. ಅತ್ತಿಗೇ? ಎಲ್ಲಿ ಹೋದಿ ಈ ಹೊತ್ತಿಗೆ? ಅಮ್ಮಾ! (ಕಾವೇರಿ ಗಾಬರಿಯಾಗಿ ಬರುವಳು.)

**ಕಾವೇರಿ :** ಯಾರು ತಾರು? ಏನು ತಾರು? ಅಯ್ಯೋs! ಇದೇನು ಸಂಕಟ! ಬೇಬೀ ಒಡೆದು ಓದು!

**ಬೇಬಿ :** **(ತಾರು ಒಡೆದು)** ಅಮ್ಮಾ ಮುಂಬಯಿಯ ತಾರೆಂದು ಆ ಸಿಪಾಯಿ ಅಂದ. ಇದೋ! ಛೇ. ಛೇ ನಿನಗೆ ಬಿಟ್ಟತಾರು. ಅಣ್ಣ ಇಂಗ್ಲೀಷಿನಲ್ಲಿ ಬರೆದಿದ್ದಾನೆ. ಇವನ ಮನೆ ಹಾಳಾಗss!

**(ನಿರ್ಮಲೆ ಓಡಿ ಬಂದು ಬೇಬಿಯ ಬಾಯಿ ಮುಚ್ಚಿ ತಾರು ಓದುವಳು. ಹಾಗೆಯೇ ನಿಟ್ಟುಸಿರು, ಕೆಳಗೆ ಕೂಡುವಳು.)**

**ನಿರ್ಮಲೆ :** ಅಯ್ಯೋ! ಅತ್ತೆಮ್ಮಾ! **(ಬಿಕ್ಕಿ ಬಿಕ್ಕಿ)** ನನಗೆ ಮುಂಬಯಿಗೆ ಹೋಗಗೊಡಿ! ಅವರು ಅಲ್ಲಿ ಸೀಕು! ಹಾ-ದೇವರೇ! **(ಅಳುವಳು).**

**ಕಾವೇರಿ :** ಏನು? ಏನು? ನಮ್ಮ ಬಾಳಾ ಸಾಹೇಬ ಸೀಕೇ? ಅಯ್ಯೋss! ನನ್ನ ಮಗ ಸೀಕೇ? ಹಾಗಿದ್ದರೆ ನಾನೇ ಹೊರಟೆ. ನೀ ಯಾಕೆ ಹೋಗಬೇಕು? ನೀನು ಇಲ್ಲಿ ಇರು. ಮಾವನವರ ಉಪಚಾರ ಮಾಡಿಕೊಂಡಿರು. ಏ ಬೇಬೀ, ನಿಂತಿ ಏಕೆಬಾಯಿ ಕಳಕೊಂಡು- ಬೆಚ್ಚಿದ ಬೊಂಬೆಯ ಹಾಗೆ! ನಡೆ. ನನ್ನ ಟ್ರಂಕು ತುಂಬು. ತೊಳೆದು ತಾ ಆ ತಿರುಗಣೆ ಚೆಂಬು! ಏ ನಿರ್ಮೀ ನಡೆ ಹೋಗು 10-20 ಚಪಾತಿ ಮಾಡು. ಆ ಥರ್ಮಾಸಮೀಟರಿನಲ್ಲಿ ಕಾಫೀ ತುಂಬಿಡು ಬೇಬೀ. ಆ ನಮ್ಮ ಮಲ್ಲಿಗೆ ಪೇಟೆಗೆ ಓಡಿಸಿ - ಇಷ್ಟು ಬಾರ್ಲಿ ಶುಂಠಿ ತರಿಸು, ಓಡು. ಅಲ್ಲಿ ಮುಂಬಯಿಯಲ್ಲಿ ಶುಂಠಿ ಸಿಗತದೊ ಇಲ್ಲವೋ! ಅಲ್ಲಿ ಮತ್ತೆ ಬಾರ್ಲಿಯಕ್ಕಿಯ ಬಗ್ಗೆ ರೇಶನ್ ಕಾರ್ಡು ಯಾರು ಮಾಡ್ತಾರೆ!

**ಬೇಬಿ :** ಅಮ್ಮಾ ನಿನಗೆ ಚಿಂತೆ ಬೇಡಾ. ನಿನ್ನ ರೇಶನ್ ಕಾರ್ಡು ಅಣ್ಣನ ಪತ್ತೆಗೆ ಇಲ್ಲಿಂದ ಪೋಸ್ಟ್ ಮಾಡ್ತೇನೆ ಮುಂಬಯಿಗೆ!

**ಕಾವೇರಿ :** ಅಲ್ದೆ, ಮತ್ತೆ ನನ್ನ ಹಾಸಿಗೆ ಪಿಂಡಿ ಕಟ್ಟಿ ಹಾಕು ಮಡಿ ಸೀರೆಯಲ್ಲಿ! ಅಲ್ಲಲ್ಲ ಗಡಿಬಿಡಿಯಲ್ಲಿ ಎಲ್ಲ ತಿರುವು ಷುರುವಾಯ್ತು. ಮಡಿಸೀರೆ ಮಡಚಿ ಹಾಸಿಗೆಯಲ್ಲಿ ಹಾಕು. ದೊಡ್ಡ ಪ್ರವಾಸ. ರೇಲು ಹತ್ತಬೇಕು! ಸಮುದ್ರ ದಾಟಬೇಕು! ಬೋಟಿ ಇಳಿಯಬೇಕು!

**( ಅತ್ತಿತ್ತ ಗಡಿಬಡಿಯಲ್ಲಿ ಓಡಾಡುತ್ತ ಮಾತಾಡುತ್ತಾಳೆ. ಆಗಲೇ ತಾರಾಬಾಯಿ ಬರುತ್ತಾಳೆ.)**

**ಬೇಬಿ :** **(ನೋಡಿ ಹೆದರಿ)** ಅವ್ವಯ್ಯಾ! ಇವರೇಕೆ ಇಲ್ಲಿ? ಈಗಲೇ ಬಂದುಬಿಟ್ಟರು! **(ಒಳಗೆ ಓಡುವಳು, ತಾರಾಬಾಯಿ ಬರುವಳು.)**

**ತಾರಾ :** ಏನು ಕಾವೇರಮ್ಮಾ! ಏನು ಗಡಿಬಿಡಿ! ಏನಿದು ಭಾನಗಡಿ?

ಕಾವೇರಿ : (ದಿಗಿಲು. ಬೇಸರ) ಅಯ್ಯೋ! ತಾರಾಬಾಯಿಯೇ? ನೀವು ಈಗೇಕೆ ಇಲ್ಲಿ ಬಂದಿರಿ?

ತಾರಾ : (ಸಿಟ್ಟಾಗಿ) ಅಂದರೆ? ಇದರ ಅರ್ಥವೇನು? ಬೀಗತಿಯರ ಬಿಗುಮಾನ ಕಾಯಲು ಬರದಿದ್ದರೆ ಬಾಯಿಗೆ ಬೀಗ ಹಾಕಿ! ನಿಮ್ಮ ಬೇಬಿಯ ಅತ್ತೆಗೆ ಈ ಸ್ವಾಗತವೇ? ಛೀss!

ಕಾವೇರಿ : ಅಯ್ಯೋ! ದಮ್ಮಯ್ಯ! ಸಿಟ್ಟಾಗಬೇಡಿ. ಏನೋ ನನ್ನಷ್ಟಕ್ಕೆ ಹೇಳಿಕೊಂಡೆ! ನಿಮಗೂ ಕೇಳಿಸಿತೇ? ನನ್ನ ತಲೆಯೇ ಕೆಟ್ಟಿದೆ!

ತಾರಾ : ಅದೇನು ಹೊಸ ಸಂಗತಿಯಲ್ಲ ಬಿಡಿ. ಇದೇನು ತಾರು? ಓದಲೇ? (ನೆಲಕ್ಕೆ ಬಿದ್ದ ತಾರು ಎತ್ತಿಕೊಳ್ಳುವಳು.)

ಕಾವೇರಿ : ಬೇಡ. ಬೇಬಿ ಓದಿದ್ದಾಳೆ. ನಮ್ಮ ಬಾಳಾಸಾಹೇಬ ಬೇನೆ ಬಿದ್ದಾನಂತೆ. ನಾನು ಬರಬೇಕಂತೆ!

ತಾರಾ : ಯಾರು ಅಂದರು ಹಾಗೆ? ಪೂರಾ ತಾರು ಒದಿಲ್ಲ ನಿಮ್ಮ ಬೇಬಿ. ಅಲ್ಲ, ಕಾವೇರಮ್ಮಾ ನಿಮ್ಮ ತಲೆ ನೆಟ್ಟಗಿಲ್ಲವೆಂಬೋದು ನಿಜ. ಇಲ್ಲವಾದರೆ, ನಿಮ್ಮ ಬೇಬಿ ನಮ್ಮ ಸೊಸೆ ಮಾವ ದೊಡ್ಡ ಅರಣ್ಯ ಪಂಡಿತಳೆಂದ ನಾನು ಬಲ್ಲೆ. ಗಂಡನ ಪತ್ರಕ್ಕೆ ಸರಿ ವಿಳಾಸ ಬರೆಯಲು ಬಾರದ ಹೆಂಡತಿ ಅವಳು! ಗಂಡನಿಗೆ ಬರೆದ ಪತ್ರ ಮಾವನಿಗೆ ಕಳುಹಿಸುವ ದೀಡಶಾಣೆ!

ಕಾವೇರಿ : ಇದೇನು ಘಾತ! ಬೇಬೀ, ಬೇಬೀ! ಇಲ್ಲಿ ಬಾಯಿಲ್ಲಿ. (ಬೇಬ ಬರುತ್ತಾಳೆ.) ಅಲ್ಲೇ ಮೊನ್ನೆ ಆ ಪತ್ರ ಮಾವನವರಿಗೆ ಹಾಕಿ ಬಿಟ್ಟೆಯೇನೇ? ಥೂ, ನಿನ್ನ ಬಾಯಿಗೆ ಬೆಂಕಿ ಬೀಳs! (ತಾರಾಳಿಗೆ) ಅಯ್ಯೋ! ಬೇಬಿ. ಇನ್ನು ಚಿಕ್ಕ ಬಾಲೆ! ಏನೋ ತಪ್ಪಿ ಹಾಕಿದಳು. ನಿಮ್ಮ ಯಜಮಾನರು ಒಳ್ಳೆಯ ಜನ. ಹಾಗೆ ಮಗನಿಗೆ ಅವನ ಹೆಂಡತಿ ಬರೆದ ಪತ್ರ ಅವರು ಓದಲಿಕ್ಕಿಲ್ಲ!

ತಾರಾ : ಯಾಕೆ ಇಲ್ಲ? ಓದಿದರು. ಚೆನ್ನಾಗಿ ಓದಿದರು! ಆದ್ದರಿಂದಲೆ ಬಂದೆ. ಅದರ ಪಾರುಪತ್ಯ ಮಾಡಬೇಕಲ್ಲ! ಈ ನಿಮ್ಮ ಚಿಕ್ಕ ಬಾಲೆ! ತಂದೆ-ಮಕ್ಕಳಲ್ಲಿ ಒಡಕು ತರುವ ಹುಚ್ಚ ಬಾಲೆ! ಚಿಕ್ಕ ಬಾಲೆ! ಆ ಮಾತು ಆಮೇಲೆ. ಈಗ ಚೆನ್ನಾಗಿ ಕೇಳಿರಿ. ಬಾಳಾ ಸಾಹೇಬರು ಬಿಟ್ಟಿಲ್ಲ ತಾರು. ಹರಿಕಿಸನ ಹೊಸ್ಪಿಟಲ್‌ದಲ್ಲಿಯ ಡಾಕ್ಟರರು ಬಿಟ್ಟಿದ್ದಾರೆ. ಬಾಳಾ ಸಾಹೇಬ ಸೀಕು. ಒಂದೇ ಸಮನೆ ಹೆಂಡತಿಯ ಹಂಬಲ ಮಾಡುತ್ತಾನಂತೆ!

ಕಾವೇರಿ : ಆಂ! ನನ್ನದಲ್ಲವೇ ಹಂಬಲ?

ತಾರಾ : ನೀವು ಅವನ ಹೆಂಡತಿಯೋ? (ಆಗ ಒಳಗಿನಿಂದ ನಿರ್ಮಲೆ ಓಡಿ ಬರುತ್ತಾಳೆ. ಆದರೆ ತಾರಾ ಸನ್ನೆ ಮಾಡಿ ಒಳಗೇ ಇರುವಂತೆ ಸೂಚಿಸುತ್ತಾಳೆ.) ಕಾವೇರಮ್ಮಾ! ನಿರ್ಮಲೆಯನ್ನು ಕೂಡಲೇ ಕಳುಹಿಸಿಕೊಡಬೇಕು.

ಕಾವೇರಿ : ಅಯ್ಯೋss! ಅದು ಹೇಗೆ ಸಾಧ್ಯ? ಅಲ್ಲ, ನನ್ನ ಮಗ ನನ್ನ ಮರೆತನೇ? ಅಲ್ಲಿ ಯಾವ ಹೆಸರುಂಟು? ಸರಿಯಾಗಿ ನೋಡಿ! ತುಸು ನೋಡಿ. ನೋಡಿ ಕಾವೇರಿ -

ತಾರಾ : ಕಾವೇರಿದ್ದು ನಿಮಗೆ! ಬಾಳಾನ ಹೆಂಡತಿಯ ಹೆಸರು ಕಾವೇರಮ್ಮವೇ? ನಿರ್ಮಲೆಯನ್ನು ಕಳುಹಿಸೆಂದು ಸ್ಪಷ್ಟ ಬರೆದಿದ್ದಾರೆ. ನೀವು ಹೋದರೂ ಅಲ್ಲಿ ನಿಮ್ಮನ್ನು ಒಳಗೆ ಯಾರೂಬಿಡುವುದಿಲ್ಲ! ಖಾಲೀ ತಲೆ ಹರಟೆ ಬೇಡ. ನಿರ್ಮಲಾನನ್ನು ಕಳುಹಿಸುವ ತಯಾರಿ ಮಾಡಿರಿ. ನಿರ್ಮಲಾ ಇಲ್ಲಿ ಬಾ. ನೀನು ಮುಂಬಯಿಗೆ ಹೊರಡು.

ನಿರ್ಮಲೆ : ಇದೇನು ತಾರಾಬಾಯಿಯವರೇ! ಇಲ್ಲಿ ನಮ್ಮ ಅತ್ತೆಯವರು!

ತಾರಾ : ನಾವಿಬ್ಬರೂ ಅತ್ತೆಯರೇ! ನನ್ನ ಮಗನನ್ನು ನನ್ನಿಂದ ದೂರವಿಡಲು ನೀವು ಹೊಂಚು ಮಾಡಿದಿರಿ! ಅದಕ್ಕೆ ನಾನು ಸಿದ್ಧ. ನಿಮ್ಮ ಬೇಬಿಗೆ ನನ್ನ ಮಗನೆಡೆಗೆ ಕಳುಹಿಸಿರಿ. ಒಂದು ಹೊತ್ತು ಹೇಗೆ ಮನೆ ನಡೆಯಿಸಿಕೊಳ್ಳುವಳೋ ನೋಡೋಣ. ಆದರೆ, ಈಗ ನೀವೂ ನಿಮ್ಮ ಸೊಸೆಯನ್ನು ನಿಮ್ಮ ಮಗನ ಮನೆಗೆ ಕಳುಹಿಸಲಿಕ್ಕೆ ಬೇಕು. ಇದು ತೀರ ಅವಶ್ಯ. ಅವನ ಕಷ್ಟ ನನಗೆ ಗೊತ್ತು. ವೇಣು ಹೇಳುತ್ತಿದ್ದಳು! ನಿರ್ಮಲಾ, ನಿನಗೂ ಗೊತ್ತಾಯಿತಷ್ಟೇ! (ಸೂಚಕವಾಗಿ ನಗುವಳು) ಈ ತಾರು ಬಂದ ಮೇಲೆಯಂತೂ ನೀವು ಸೊಸೆಯನ್ನು ಅವಳ ಗಂಡನ ಬಳಿಗೆ ಕಳುಹಿಸದಿದ್ದರೆ ಕಾವೇರಮ್ಮಾ ನೀವು ಮಗನ ಮನೆ ಹಾಳು ಮಾಡಲು ಹೊರಟ ಹೆಣ್ಣು! ಮಗನ-ಸೊಸೆಯ ಮಂಗಲ ಬಯಸುವ ತಾಯಿಯಲ್ಲ! ಹೆಣ್ಣು ಪಿಶಾಚಿ ಅಂದಾರು ಜನ!

ಕಾವೇರಿ : ಇದೇನು ಬಂತಪ್ಪಾ ಗ್ರಹಚಾರs! (ಹಣೆಬಡಿದುಕೊಳ್ಳುವಳು.)

ತಾರಾ : ಇದು ನಿಮ್ಮ ಗ್ರಹಚಾರ. ನಿಮ್ಮಂಥ ಒತ್ತಾಸೆಗೆ ಸಾಯುವ ಅತ್ತೆಯರು ಮುಗ್ಧ ಸೊಸೆಯರ ರಾಶಿಗೆ ತಾಗಿಸಿದ ಕೆಟ್ಟ ಗ್ರಹಚಾರ. ಈ ಪೀಡೆ ಕಳೆಯಲೇಬೇಕು. ಹೇಳಿ ಸುಮ್ಮನೆ ರಾದ್ಧಾಂತ ಎಬ್ಬಿಸದೆ ಸೊಸೆಯನ್ನು ಗಂಡನಲ್ಲಿ ಕಳುಹಿಸುವಿರಾ?

ಕಾವೇರಿ : ಅರೇ! ಇದೆಂಥ ಒತ್ತಾಯ? ನಮ್ಮ ಮಗನ ಸುಖಾ ನಾವು ನೋಡುವದಿಲ್ಲವೇ?

**ತಾರಾ :** ಸರಿ. ಹಾಗೆಯೇ ತಿಳಿಯಿರಿ. ಹೂಂ ಮುಂದೇನು? ನಿಮಗೆ ಮಗನ ಸುಖಾಬೇಕು. ಮಗನಿಗೆ ಹೆಂಡತಿಯ ಆರೈಕೆ ಬೇಕು. ನಿಮಗೆ ಇಲ್ಲಿ ಸೊಸೆ ಬಿಟ್ಟಿಯ ಆಳಾಗಿ ದುಡಿಯಲು ಬೇಕು. **(ಅಷ್ಟರಲ್ಲಿ ಬಾಗಿಲಲ್ಲಿ ಗಂಟೆ.)** ಯಾರು!

**ಕಾವೇರಿ :** ಏನೋ! ಅದೇನು ತಂದಿ?

**ಜವಾನ :** ಕಣ್ಣು ಕಾಣಾಕಿಲ್ಲವೇ ಬಾಯವರೇ! ನೀನು ನೀನು - ಎಂದೇಕೆ ಅಂತೀರಿ? ನಾನು ಪೋಸ್ಟಿನ ಜವಾನ! ಖಾಸಗಿ ಆಳಲ್ಲ ಹೂಂ! ಈ ತಾರು **(ಕೊಡುವನು. ಅದನ್ನು ತಾರಾಬಾಯಿಯೇ ತೆಗೆದು ತೆರೆದು ನೋಡುವಳು.)**

**ತಾರಾ :** **(ಒಮ್ಮೆಲೆ ಹಿಗ್ಗಿ)** ನಿರ್ಮಾ - ನಿರ್ಮಿ-ನಿಮ್ಮೂ ಇಕೋ ನಿನ್ನ ಗಂಡನದೇ ತಾರು. ನಿನಗೇ ಬರೆದದ್ದು. Reaching tomorrow!

**ಕಾವೇರಿ :** ಅಂದರೆ ಇಂದು! ಏನು? ನಾ ಬರಬೇಕಂತೆಯೇ?

**ತಾರಾ :** ಯಾರೂ ಬರಬೇಕಿಲ್ಲ. ನಿಮ್ಮ ಬಾಳಾ ಸಾಹೇಬನೇ ಇಲ್ಲಿ ಬರ್ತಾನೆ - ಇಂದು ರಾತ್ರಿ! ನಿರ್ಮಲೆಯನ್ನು ಒಯ್ಯಲಿಕ್ಕೆ! ತಯಾರಾಗಿರಿ ಎಂದಿದ್ದಾನೆ. ನಿನ್ನ ಬಾಳಾ ಸಾಹೇಬ! ನಿರ್ಮಲೆ, ಇನ್ನು ನಿನ್ನ ಭಾಗ್ಯ ತೆರೆಯಿತು!

**ನಿರ್ಮಲೆ :** **(ಹಿಗ್ಗು, ದೇವರಿಗೆ ಕೈಮುಗಿದು)** ದೇವಾ! ದೇವಾ! ನನ್ನ ಗ್ರಹಚಾರ ಮುಗಿಯಿತು.

**(ತೆರೆ)**

# ಚಿದಂಬರ ಸ್ವಾರಸ್ಯ

(ಒಂದು ಪ್ರಹಸನ)

(ಖ್ಯಾತ ಆಂಗ್ಲ ಕಾದಂಬರಿಕಾರ ಅರ್ನಾಲ್ಡ ಬೆನೆಟ್ ಇವರ 'ದ ಗ್ರೇಟ್ ಎಡ್ವೆಂಚರ್' ಎಂಬ ನಾಟಕದ ಆಧಾರ ಪಡೆದ ಪ್ರಹಸನ)

## ಪಾತ್ರಗಳು

| | |
|---|---|
| ಚಿದಂಬರರಾಯ | ಚಿತ್ರಕಾರ |
| ಸಾಂಬಶಿವಯ್ಯ | ಜವಾನ |
| ಡಾ: ಧನ್ವಂತರಿ | ಡಾಕ್ಟರ್ |
| ಮಿಸ್ಟರ್ ಕುಂಭಕೋಣಂ | ಡಾಕ್ಟರರ ಅಸಿಸ್ಟಂಟ್ |
| ದಿಗಂಬರಯ್ಯ | ಚಿದಂಬರರ ಸೋದರ |

ರೊಡ್ರಗೀಜ ಮರ್ಚಂಟ (ಆರ್ಟ ಡೀಲರ್)
ಪತ್ರಿಕಾ ಪ್ರತಿನಿಧಿ (ಕುಂಭಕೋಣಂನ ಸೋದರ)
ಕುಮಾರಿ ಶ್ರೀಮತಿ ( ಚಿದಂಬರನ ಪ್ರೇಯಸಿ )

# ಅಂಕ ೧

## ದೃಶ್ಯ ಒಂದು

(ಒಂದು ಪ್ರಶಸ್ತ ಕೋಣೆ. ಹಿಂದುಗಡೆಗೆ ಒಳಕೋಣೆಗೆ ಹೋಗಲು ಬಾಗಿಲು. ರಂಗದ ನಡುವೆ ಒಂದು ಸೋಫಾ. ಸುತ್ತಲೂ ಸಾಮಾನೆಲ್ಲ ಅಸ್ತವ್ಯಸ್ತ, ಟ್ರಂಕು-ಬ್ಯಾಗು ಅಲ್ಲಲ್ಲಿ ಕೆಲವು ತೆರೆದಿವೆ-ಕೆಲವು ತೆರೆದಿಲ್ಲ, ಅದೇ ದೂರದ ಪ್ರವಾಸ ಮುಗಿಸಿ ಮನೆಯ ಮಂದಿ ಮರಳಿ ಬಂದ ವಾತಾವರಣ.

ಸಾಂಬಶಿವಯ್ಯ ಪ್ರಸಿದ್ಧ ಚಿತ್ರ ಕಲಾವಿದ ಚಿದಂಬರರಾಯರ ನಂಬಿಗೆಯ ಜವಾನ ಸೋಫಾದಲ್ಲಿ ಅಡ್ಡಾಗಿದ್ದಾನೆ-ಬೆನ್ನು ಆನಿಸಿ ಮಲಗಿದಂತೆ. ಮೈತುಂಬ ಬಟ್ಟೆಗಳು. ಇನ್ನೂ ಕಳಚಿಲ್ಲ, ತೀರ ಕಾಯಿಲೆ ಇದ್ದಂತೆ. ಕಾಲುಗಳ ಮೇಲೆ ಒಂದು ರಗ್ಗು ಪಕ್ಕದಲ್ಲಿ ಕುರ್ಚಿಯ ಮೇಲೆ ಒಂದು ಬೆಲೆ ಬಾಳುವ ಕಾಶ್ಮೀರಿ ಶಾಲು.

-ಚಿದಂಬರರಾಯ ಅಂಗಿ-ಲುಂಗಿನಲ್ಲಿ ಬರುತ್ತಾನೆ ಗಡಿಬಡಿಯಲ್ಲಿ, ಸಾಂಬ ಒಡೆಯನನ್ನು ಕಂಡು ಏಳಲು ಯತ್ನಿಸುತ್ತಾನೆ.)

**ಚಿದಂಬರ:** ಹಾಂ ಹಾಂ Dont move ಹಂದಾಡಬೇಡ. ನೀನು ಪೇಶಂಟ. ಜವಾನನೆಂಬುದು ಮರೆತು ಬಿಡು. ತೆಪ್ಪಗೆ ಬಿದ್ದಿರು. ಹಾಂ. (ಕುರ್ಚಿಯಿಂದ ಶಾಲು ಎತ್ತಿಕೊಂಡು ತಾನು ಹೊದ್ದುಕೊಳ್ಳುವಾಗ ಸಾಂಬ ಸದಾಶಿವ ಚಳಿಯಿಂದ ನಡುಗುತ್ತಾನೆ. ಅದನ್ನು ಕಂಡ ಕೂಡಲೆ ತನ್ನ ಶಾಲನ್ನು ಜವಾನನಿಗೆ ಹೊದಿಸುತ್ತಾನೆ. ಅಲ್ಲೆ ಗೂಟದಿಂದ ತೂಗುತ್ತಿದ್ದ ಒಂದು ಹಳೆಯ ಕೋಟನ್ನು ತೆಗೆದು ತನ್ನ ಮೈಗೇರಿಸುತ್ತಾನೆ.)

**ಸಾಂಬ :** ನೀವು ಬಹಳ ಲ-ಲ-ಲಗು ಬಂ-ಬಂದ್ರಿ ಸಾರ್.

**ಚಿದಂ :** ನಾ ಇದೇ ಓಣೆಯಲ್ಲಿ ಮೂರು ಬ್ಲಾಕು ಆಚೆ ಡಾಕ್ಟರರ ಶಾಪು ಕಂಡೆ. ಹೇಳಿ ಬಂದೆ. ಡಾಕ್ಟು ಇದೇ ಅರೆನಿಮಿಷದಲ್ಲಿ ಬಂದು ಬಿಡ್ತಾರೆ.

**ಸಾಂಬ :** ಡಾಕ್ಟ್ರು? ಯಾರೋ? ಯಾಕೋ?

**ಚಿದಂ :** ಡಾಕ್ಟ್ರು ಯಾಕೆ ಅಂತಿಯಾ? ಮುಟ್ಠಾಳಾ. ಡಾನ್ಸ್ ಮಾಡೋಕೆ! ಅಲ್ಲೊ ನಿನ್ನ ಕಾಯಿಲೆ ನೋಡೋಕೆ. ಇಷ್ಟು ಗೊತ್ತಾಗೋದಿಲ್ವೆ?

**ಸಾಂಬ :** ಅವರ ಹೆಸ್ರು?

**ಚಿದಂ :** ಡಾಕ್ಟ್ರ ಹೆಸರೇಕೋ ನಿಂಗೆ? ನಿಂಗೆ ಬೇಕು ಅವರ ಮದ್ದು! ಅವರ ಹೆಸರು ಡಾಕ್ಟರ ಧನ್ವಂತರಿ.

**ಸಾಂಬ :** ಅಲ್ಲ, ಸಾರ್. ಕೇಸು ನೋಡೋ ಮುಂಚೇನೆ ಧನವಂತರ್ರಿ ಅನ್ನೋ ಡಾಕ್ಟ್ರು? ಶಿವ ಶಿವ!

ಚಿದಂ : ಅಲ್ಲೋ ಪೆದ್ದಾ! ಧನಾತರ್ರಿ ಅಂತಲ್ಲಾ. ಧ-ನ್ವಂ-ತ-ರಿ ಇದು ಡಾಕ್ಟರ ಹೆಸರು. ಧನ್ವಂತರಿ ದೊಡ್ಡ ಹೆಸರು ಕಣೋ. ಅವರೊಬ್ಬ ಭಾರಿ ದೊಡ್ಡ ವೈದ್ಯರು. ಹಳೇಕಾಲದೋರು. ನಮ್ಮ ದೇಶದಲ್ಲಿ ಆಗಿ ಹೋದವರು.-

ಸಾಂಬ : ( ಭಾರಿ ಚಿರಗಾಗಿ ) ಅವರೇ ಇವರೋ?

ಚಿದಂ : (ಜವಾನನ ಹಣೆ ಮುಟ್ಟ ಒತ್ತಿ ನೋಡಿ) ನಿಂಗೆ ಜ್ವರಾ ನೆತ್ತಿಗೇರಿದ್ದೇ ನಿಜ. ಸುಮ್ನೆ ಬಿದ್ದಿರು. ಹಳೆಯ ವೈದ್ಯರ ಹೆಸರೇ ಡಾಕ್ಟರರಿಗೆ ಕೊಟ್ಟದ್ದು.

ಸಾಂಬ : ಇರಲಿ ಬಿಡಿ ಸಾರ್. ಅವರಿಗೆ ಪೂರಾ ಬಿಡಿಸಿ ಹೇಳಿದಿರಾ, ಸಾರ್. ಏನೆಂದು-

ಚಿದಂ : ಡಾಕ್ಟರನ್ನು ಏನು ಬಿಡಿಸೋದು? ಅದೂ ಪೂರಾ? ಡಾಕ್ಟರ್ರೇ ಬಿಡಿಸೋದು? ಬೇನೆ. ಅದಕ್ಕೇ ಬರ್ತಾರೆ. ಮುಂದೆ ನಾವೇ ಬಿಡಿಸಿಕೊಳ್ಳೋದು-ಡಾಕ್ಟರರಿಂದ!

(ಸಾಂಬ ನಗಲು ಯತ್ನಿಸುತ್ತಾನೆ. ಆದರೆ ಬಲವಾದ ಕೆಮ್ಮು ಕಟ್ಟಬರುತ್ತದೆ.)

ಸಾಂಬ : ನಿಮ್ಮ ಹಾಳು ಹಾಸ್ಯ ಸಾರ್! ಸಾಕು. ಸಾರ್, ಸಾಕು (ಕೆಮ್ಮುತ್ತಲೆ) ಹುಶ್ss! ಅವ್ವಾ! ಅಲ್ಲ (ನಿದಾನಿಸಿ) ನಂಗೇನಾಗಿದೆ ಹೇಳಿದ್ರಾ?

ಚಿದಂ : ಅಯ್ಯೊ! ಮಂಕೇ! ನಿಂಗೇನಾಗಿದೆ-ನಂಗೇನು ಗೊತ್ತು? ಅದನ್ನು ಡಾಕ್ಟರು ಗೊತ್ತಮಾಡೋದು ಅಂದಾಗ ನಾನೇನು ಹೇಳೋದು? ನಾನು ಅವರಿಗೆ ಇಷ್ಟೇ ಹೇಳಿಬಿಟ್ಟು ಬಂದೆ - ನಂಬರು ೧೨೬ಗೆ ಬನ್ನಿ ಒಂದು ಅರ್ಜಂಟ ಕೇಸಿದೆ. ಕೂಡಲೇ ಬನ್ನಿ ಎಂದು.

ಸಾಂಬ : ೧೨೬? ಅದು ನನ್ನ ನಂಬರೇ?

ಚಿದಂ : ನಿನ್ನ ನಂಬ್ರು ಫೋರ್‌ಟ್ವೆಂಟಿ-೪೨೦! ಸುಮ್ಮನಿರು. ೧೨೬ ಈ ಮನೆ ನಂಬ್ರು. ಇಷ್ಟು ವರ್ಷ ಇಲ್ಲಿ ಇದ್ದಿ. ಇಷ್ಟು ಗೊತ್ತಿಲ್ವೇ? ಆ ಡಾಕ್ಟರಿಗೂ ಗೊತ್ತಿತ್ತು!

ಸಾಂಬ : ಎಷ್ಟು ವರ್ಷ ಇಲ್ಲಿ ಇದ್ವೀ? ಇಂದೇ ಬಂದದ್ದು. ಆ ಡಾಕ್ಟರಿಗೆ ಅದ್ಹೇಂಗೇ ಗೊತ್ತು?

ಚಿದಂ : ಅವನೇ ಕೇಳಿದ - ೧೨೬? ಆ ಮನೆಗೆ ಬೀಗಬಿದ್ದು ವರ್ಷಗಟ್ಲೆ ಆಯ್ತು-ಅಂದ.

ಸಾಂಬ : (ನಗಲು ಯತ್ನಿಸಿ) ನೀವೇನಂದ್ರಿ ಸಾರ್?

ಚಿದಂ : ಏನಂದೆ? ೧-೨-೬ ಎಂದು ಮತ್ತೆ ಕೂಗಿ ಅಲ್ಲಿಂದ ಕಾಲು ಕಿತ್ತುಬಿಟ್ಟೆ!

ಸಾಂಬ : ಹಾಗಾದ್ರೆ ಡಾಕ್ಟರು?

ಚಿದಂ : ಅವರೆಲ್ಲಿ ಹೋಗ್ತಾರೆ? ಬೆನ್ನಿಗೆ ಬರ್‍ತಾರೆ. ನಾನೇನು ಬೆನ್ಮೇಲೆ ಹೊತ್ಕೊಂಡು ತರಬೇಕಾಗಿತ್ತೇ? ನಮಗೆ ಡಾಕ್ಟರು ಬೇಕು. ಹಾಗೇ ಅವರಿಗೆ ಪೇಶಂಟು ಬೇಕು, ನೋಡು. ಅವರೇ ನನ್ನ ಬೆನ್ನಿಗೆ ಕೂಗಿದರು-ಇದೀಗ ಬಂದು ಬಿಡ್ತೇನೆ ಎಂದು.

ಸಾಂಬ : ಆಯ್ತಪ್ಪಾ. ಹುಶ್‌ss.

ಚಿದಂ : ಆಯ್ತೇನು ಎಲ್ಲ ಆಗಿಯೇ ಹೋಯ್ತನ್ನು. ನಾನು ತಿರುಗಿ ಬಂದ ಸುದ್ದಿ ಈಗಾಗಲೇ ಗೊತ್ತಾಗಿ ಬಿಟ್ಟಿದೆ. ಊರಿಗೆ ಎಂದಾಯ್ತು! - ಕೇರಿಯಿಂದ ಆ ಕೇರಿಗೆ ಇಡೀ ಊರಿಗೆ ಹೋಯ್ತು. ಚಿತ್ರಕಾರ ಚಿದಂಬರರಾಯರು ಬೆಂಗಳೂರಿಗೆ ಮರಳಿದರೆಂದು ಎಲ್ಲರಿಗೂ ಗೊತ್ತೇ ಆಗಿ ಬಿಡ್ತಲ್ಲೋ! ಆ ಡಾಕ್ಟರರ ದನಿಯಿಂದಲೇ ನನಗೆ ಗೊತ್ತಾಯಿತು. ಇನ್ನೇನು ಮಾಡಲಿ? ಈ ನಾನು ಎಂಬ ಜಗತ್ಪ್ರಸಿದ್ಧ ಚಿತ್ರಕಾರ ಚಿದಂಬರರಾಯ ಸ್ವದೇಶಕ್ಕೆ, ಸ್ವಸ್ಥಾನಕ್ಕೆ ಬಿಜಯಂ ಗೈದಿದ್ದಾರೆ! ಎಂಬ ಸುವಾರ್ತೆ ಹಬ್ಬಿ ಹೋಯ್ತಲ್ಲೋ! ಈಗ ನಂಗೆಲ್ಲಿ ಸ್ವಾಸ್ಥ್ಯ? ನಂಗೆಲ್ಲಿ ಶಾಂತಿ? ನಂಗೆಲ್ಲಿ ಏಕಾಂತ? ಏನು ಮಾಡಲಿ?

ಸಾಂಬ : ಅದಕೇನ್ ಸರ್, ಮಾಡೋದು? ನಮ್ಮನೆಗೆ ನಾವು ಬಂದ್ರೆ ಅದೇನು ಅಪರಾಧವೇ?

ಚಿದಂ : ಅಪರಾಧಾನೋ ಅಪವಾದಾನೋ! ನಾನಂತೂ ಮಹಾಪರಾಧಿಯೇ ಎಂಬಂತೆ ನಂಗೆ ಅನಿಸ್ತಾ ಇದೆ ನೋಡು. ಸಾಂಬಶಿವಯ್ಯಾ, ಅದೇಕೋ ನಂಗೆ ಎಲ್ಲೂ ಇಲ್ಲದ ನಾಚಿಕೆ, ಸಂಕೋಚ, ಭಯ! ಈ ಕೀರ್ತಿ ಒಂದು ಸಾಡೇಸಾತ ಶನಿಯೊ! ಇದರ ಕಾಟದಿಂದ ಪಾರಾಗುವದು ಹೇಗೋ? ನಾ ಹೋದಲ್ಲಿ ಇದು ಬೆನ್ನಟ್ಟಿಕೊಂಡು ಬರ್‍ತದೆ ನೋಡು. ಈ ಹಾಳು ಕೇರಿಗೆ ಈ ನಮ್ಮ ಮನೆಗೆ ಬರೋದರ ಬದಲು ನಾವು ಯಾವದೇ ಹೋಟ್ಲಿಗೆ ಹೋಗಿ ಉಳಿಯಬೇಕಿತ್ತು ನೋಡು! **(ಕೋಣೆಯಲ್ಲಿ ಶತಪಥ ಹಾಕುತ್ತ)** ಇಲ್ನೋಡು, ನೀನು ಹಾಸಿಗೆ ಹಾಸಿ ಇಟ್ಟಿದ್ದೀಯಾ?

ಸಾಂಬ : ಅದನ್ನೆ ಮಾಡ್ತಿದ್ದೆ, ಆಚೆ ಕೋಣೆಯಲ್ಲಿ. ಆಗಲೆ ಈ ಕೆಟ್ಟ ಚಳಿ ನಡುಕ ಬಂದು ಬಿಟ್ಟಿತು ಸಾರ್.

ಚಿದಂ : ಇರಲಿ **(ಒಂದು ಯೋಚನೆ ಹೊಳೆದು)** ಹಾಸಿಗೆ ಅಲ್ಲಿ Ready ಆಯ್ತು. ಇನ್ನು ನೀನು ಹಾಸಿಗೆ ತನಕ ನಡಕೊಂಡು ಹೋಗ್ತಿಯೋ? ನಾನೇ ಕೈಹಿಡಿದುಕೊಂಡು -

ಸಾಂಬ : ಏನಿದು? ನಾನು? ನಿಮ್ಮ ಹಾಸಿಗೆಗೆ? ಉಂಟೇ ಸಾರ್?

ಚಿದಂ : ಇಲ್ಲದೇ ಮತ್ತೆ? ಹಾಸಿಗೇನೂ ಉಂಟು! ನೀನು ಉಂಟು! (ಹುಸಿ ಮುನಿಸಿನಿಂದ) ಇಲ್ನೋಡು ಸಾಂಬಾ, ಸುಮ್ನೆ ನಾ ಹೇಳಿದ್ಹಾಂಗೆ ಕೇಳು. ಹೀಗೆ ಇದಿರಾಡಬೇಡ. ಮತ್ತೆ ಹೀಗೆ ದನಿಯೆತ್ತಿದರೆ, ಇದೀಗ ನಿಂತಮಟ್ಟಿಗೆ ನಿಂಗೆ ಡಿಸ್.ಮಿಸ್-! ಹಾಂ ಕೇಳು. ಡಾಕ್ಟರು ಬರೋತನಕ ಅಲ್ಲಿ ನನ್ನ ಹಾಸಿಗೆಯಲ್ಲಿ ಹೋಗಿ ಬಿದ್ದಿರು. ಅಡ್ಡಾಗು ಬಾ. ಕೈಯತಾ! (ಬೆಲ್ ಸದ್ದು).

ಸಾಂಬ : ಬಾಗಿಲ ಬೆಲ್ಲು! ನಿಲ್ಲಿ ನಾ ಹೋಗಿ - (ಏಳಲು ಮಾಡುವನು)

ಚಿದಂ : (ಅವನನ್ನು ನೂಕ ಕೂಡ್ರಿಸಿ) ನೀ ಎಲ್ಲಿ? ಬಿದ್ದಿರು ಅಲ್ಲಿ. ನಾ ನೋಡಿಕೊಳ್ಳೇನೆ. ಆ ಧನ್ವಂತರೀನೇ ಬಂದಿರಬೇಕು. (ಸಾಂಬ ಕೆಮುತ್ತ ಬಾಯಿಗೆ ಕರ್‌ಚೀಫ್ ಒತ್ತಿಕೊಳ್ಳುತ್ತಿರುವಾಗ ಚಿದಂಬರ ಹೋಗಿ ಡಾಕ್ಟರರನ್ನು ಕರೆ ತರುತ್ತಾನೆ.)

ಡಾಕ್ಟರ್ : (ಮುಂದಾಗಿ) ಇವರೇನೋ ಪೇಶಂಟು? ಇವರು...........

ಚಿದಂ : ಅಲ್ಲ ನೀವು ಚಿದಂಬರರಾಯರನ್ನು ಹಿಂದೆ ಕಂಡಿದ್ದಿರಾ?

ಡಾ : ಛೇ ಛೇ. ಆ ಅದೃಷ್ಟ ನನಗೆಲ್ಲಿ? ಅವರ ಕುರಿತು ಕೇಳಿದ್ದೆ ಅಷ್ಟೇ-

ಚಿದಂ : (ದೇಶಾವರಿ ನಗೆ) ಅವರ ಫೋಟೋ -

ಡಾ : ಫೋಟೋನೂ ಇಲ್ಲ ಗೀಟೋನೂ ಇಲ್ಲ. ನಾವು ನೋಡೋದು X-Ray ಫೋಟೋ. ಅದೇಕೆ ಈಗ?

ಚಿದಂ : ಕ್ಷಮಿಸಿ. ಕೆಟ್ಟ ಕುತೂಹಲ. ಇವರೇ --

ಡಾ : ನಂಗೊತ್ತು, Be quiet. (ಸಾಂಬನ ಹತ್ತಿರ ಹೋಗಿ ನೋಡಿ ಥರ್ಮಾಮೀಟರ್ ತೆಗೆದು ಉದ್ದಿ ಉಡುಗಿ ತುಂಬ ಆದರದಿಂದ) Please Sir. ಬಾಯಿ ತೆರೀತಿರಾ? ಇದನ್ನು ಅರ್ಧಮಿನಿಟು ನಾಲಿಗೆ ಕೆಳಗೆ ಇಡ್ತೇನೆ. (ಸಾಂಬ ಗಾಬರಿಯಿಂದ ಸುಮ್ಮನೆ ಸಹಕರಿಸುತ್ತಾನೆ. ನಾಡಿ ಪರೀಕ್ಷೆ ಎಲ್ಲ ಮುಗಿಸಿ ಚಿದಂಬರನ ಬಳಿಗೆ ತಗ್ಗಿದ ದನಿಯಲ್ಲಿ) ಇದು ಎಂದು ಸುರುವಾಯ್ತು?

ಚಿದಂ : ಇದು ಇಂದೇ. ಈಗ ಇದೇ 6 ಗಂಟೆಗೆ ಮೈಯಲ್ಲಿ ನೆಟ್ಟಗಿಲ್ಲಾ-ಎಂದು.

ಡಾ : ೬ ಗಂಟೆಗೆ ಹೇಳಿದ್ರು?

ಚಿದಂ : ಹೂಂ. 'ಹೇಳಿದ್ರು' ನಾವು ಊರಿಗೆ ಇದೇ ನಸುಕಿಗೆ ಬಂದ್ವಿ ಮದರಾಸಿನಿಂದ.

ಡಾ : ಬಾಯಿ ತೆರೀರಿ ಸರ್. (ಥರ್ಮಾಮೀಟರು ಹೊರತೆಗೆದು ನೋಡಿ)

ಟೆಂಪರೇಚರು ೧೦೪.೫ ಇದೆ. ಪಲ್ಸ ೧೪೦, ತುಂಬಾ ವೀಕು.

ಸಾಂಬ : ಅಯ್ಯಪ್ಪಾ. ಮದ್ದು ಸ್ಟ್ರಾಂಗ್ ಇದ್ದರೆ ಸರಿ!

ಡಾ : ಹೌದು. ರಾಯ್ರೇ

ಚಿದಂ : (ಸ್ವಗತ) ಹಾಂ 'ರಾಯ್ರೇ'!

ಡಾ : ಲೋ ಮಿಸ್ಟರ್. ನಂಗೆ ಇಷ್ಟು ಬಿಸಿ ನೀರು ಬೇಕು.

ಚಿದಂ : ಬಿಸಿ ನೀರು? ನಿಮಗೇಕೆ?

ಡಾ : ಏಕೆಂದೆ? You Fore ಸಿರಿಂಜು ಕಾಯಿಸಲಿಕ್ಕೆ. ಪೋಲ್ಟೀಸು ಕಾಸಲಿಕ್ಕೆ.

ಚಿದಂ : ಆದರೆ ಡಾಕ್ಟರ್ - ಇಲ್ಲಿ ಅದೇನೂ ಇಲ್ಲ. ನಾವು ಇದೇ ನಸುಕಿಗೇ-ಬಂದದ್ದು.

ಡಾ : ಮನೇಲಿ ಹೆಂಗಸರಾರು ಇಲ್ವೇ?

ಚಿದಂ : ಇಲ್ಲ! (ನಿಟ್ಟುಸಿರು ಬಿಟ್ಟು).

ಡಾ : ಪರವಾ ಇಲ್ಲ. ನಾನೇ ಶಾಪಿಗೆ ಹೋಗಿ ತರ್ತೇನೆ.

ಚಿದಂ : ಹೆಂಗಸರನ್ನ ಏಕೆ?

ಡಾ : ಛೀ ಮುಟ್ಠಾಳಾ! ಹೆಂಗಸರನ್ನಲ್ಲೋ ತರೋದು! ಸಿರೀಂಜು, ಪೋಲ್ಟೀಸು ಕುದಿಸಿ ತರ್ತೇನೆ. ಇವನೆಂಥ ಜವಾನ!

ಚಿದಂ : (ಯೋಚನೆ ಹೊಳೆದು ಹಿಗ್ಗಿ) ಜವಾನ!

ಡಾ : ಜವಾನ ಅಲ್ವೆ? ಮತ್ತೆ ನೀನೇ ಚಿತ್ರಕಾರ ಚಿದಂಬರ ರಾಯರೆಂದುಕೊಂಡು ಬಿಟ್ಟೆಯಾ? (ದೊಡ್ಡ ನಗು)

ಚಿದಂ : (ತಪ್ಪು ತಿದ್ದಿಕೊಳ್ಳುವಂತೆ) ಕ್ಷಮಿಸಿ, ಸಾರ್, ನಾ-ನಾನೇ ಜವಾನ.

ಡಾ : (ಸಾಂಬಶಿವಯ್ಯನನ್ನು ಸಮೀಪಿಸಿ) ಸಾರ್. ಇದೀಗ ದವಾಖಾನೆಗೆ ಹೋಗಿಬಿಟ್ಟು ಬರ್ತೇನೆ. - ಎಲ್ಲ ಸಲಕರಣೆ ಸಜ್ಜು ಮಾಡಿಕೊಂಡು. (ಚಿದಂಬರರಿಗೆ) ಏ Whats your name?

ಚಿದಂ : ಆಂ! ನಾ. ನನ್ನ ಹೆಸರೇ? ಸಾಂಬಶಿವಯ್ಯ.

(ಸಾಂಬ ಆಶ್ಚರ್ಯದಿಂದ ಉದ್ಗಾರ ತೆಗೆಯಲು ಹೋಗಿ ಕೆಮ್ಮುತ್ತಾನೆ. ಚಿದಂಬರ ಕಣ್ಣು ಕೆಕ್ಕರಿಸುತ್ತಾನೆ. ಸಾಂಬ ಕರ್ಚೀಫ ಬಾಯಿಗೆ ಒತ್ತಿಕೊಳ್ಳುತ್ತಾನೆ.)

ಡಾ : ಏ, ಸಾಂಬನೋ ಶುಂಭನೋ! ನಿನ್ನ ರಾಯರಿಗೆ ಬೆಚ್ಚಗೆ ಹೊದಿಸಿ

ಇಡು. ಅಷ್ಟಾದರೂ ಮಾಡ್ತೀಯಲ್ಲ? **(ಹೋಗುವನು.)**

**ಚಿದಂ :** ಸಾಂಬಾ, ಆ ಡಾಕ್ಟ್ರು ನಿನ್ನನ್ನೆ ನಾನೆಂತ ನಂಬಿ ಬಿಟ್ಟಿದ್ದಾರೆ! ನಾನು ಕೋಟು ಹ್ಯಾಟು ಇಟ್ಟೆ ಅವರನ್ನು ಕರೆಯಲಿಕ್ಕೆ ಓಡ್ದೆ. ಅದರ ಫಲ ಇದು. ಭೋಗಿಸು.

**ಸಾಂಬ :** ಹಾಗಾದರೆ -

**ಚಿದಂ :** ಹಾಗಾದ್ರೆ ಹೀಗೆ. ಇಲ್ನೋಡು ಸಾಂಬಾ. ನೀನೇ ನಾನೆಂದು ಡಾಕ್ಟ್ರು ತಿಳಿಯಲಿ. ಆಗ್ತದೆ. ನೀನು ಬಲು ಬೇಗ ಗುಣ ಆಗ್ತೀ. ಮತ್ತೆ ನಾನು ಬದುಕಿ ಉಳಿಯುತ್ತೇನೆ ಹಾಯಾಗಿ, ಅವರ ಕೆಟ್ಟ ಕೌತುಕದಿಂದ.

**ಸಾಂಬ :** ಅದು ಸರಿ ಅನ್ನಿ. ನಾನು ಹಾಗಾದ್ರೆ ಅಂದದ್ದು ಅದಕ್ಕೆ ಅಲ್ಲ.

**ಚಿದಂ :** ಮತ್ತೇಕೆ?

**ಸಾಂಬ :** ಈವಾಗ ನಾನು ಒಬ್ಬ ಪ್ರಾಯದ ಹೆಣ್ಣು ಮಗಳನ್ನೆ ನಿರೀಕ್ಷೆ ಮಾಡ್ತಾ ಇದ್ದೆ.

**ಚಿದಂ :** ಪ್ರಾಯ ಹೆಣ್ಣಿಗೋ? ಮಗಳಿಗೋ?

**ಸಾಂಬ :** ನಿಮಗೆ ತಮಾಷೆ ಸಾರ್. **(ಕೆಮ್ಮು)** ಪ್ರಾಯದ ಅಂದ್ರೆ ಎಳೆ ಪ್ರಾಯದ ಹೆಣ್ಣು. ಇನ್ನು ಆಕೆಯ ಪ್ರಾಯ ಎಳೆಯದೇ ಇರಬೇಕು ಎಂದು ನನ್ನ ನಂಬಿಕೆ.

**ಚಿದಂ :** ಗೊತ್ತಾಯ್ತು, ಬಿಡು. ಇಂದು ಎಲ್ಲರೂ ನಂಬಿ ಕೆಟ್ಟವರೇ! ಆ ಡಾಕ್ಟ್ರು, ನಾನು ನಿಮ್ಮ ನಂಬಿಕೆ-ಅಂಬಿಕೆ. ಸಾಂಬಾ, ನೀನು ಶಿವಯ್ಯಸಾಂಬ ಅಲ್ಲ ಕಣೋ--,

**ಸಾಂಬ :** ಅಂದ್ರೆ?

**ಚಿದಂ :** ನೀನು ಆ ಯಾದವರ ಸಾಂಬ. ಭಾಗವತದ ಆ ಯಾದವರಿಗೆ ಹೆಣ್ಣಿನ ಹುಚ್ಚು ಬಹಳ ಇತ್ತು ಎಂತ ಕೇಳಿದ್ದೆ.

**ಸಾಂಬ :** **(ಅನುಮಾನದಿಂದ)** ಯಾವ ಮೇಳದ ಭಾಗವತರೋ -

**ಚಿದಂ :** ಹಳೇ ಹುಚ್ಚ! ಭಾಗವತ ಅಂದರೆ ಆ ಹಳೆಪುರಾಣವೋ -ಇಂಥದೇನಾದರೂ ಹೆಣ್ಣು ಹವ್ಯಾಸ ನೀನು ಕಟ್ಟಿಕೊಂಡು ಇರುವವನೇ ಎಂದು ನನಗೆ ಎಂದೋ ಗುಮಾನಿ! ಈಗ ಗೊತ್ತಾಯ್ತು! ಅದಕೇನೇ ಬಂದಕೂಡ್ಲೆ ಎಲ್ಲ ಕೆಲಸ ಬಿಟ್ಟು ಮೊದಲು ನನ್ನ ಹಾಸಿಗೆ ಹಾಸ್ತಾ ಇದ್ದೀ! ನನ್ನ ಆದಷ್ಟು ಬೇಗ ಮಲಗಿಸಿ ನಿದ್ದೆ ಮಾಡಲಿಕ್ಕೆ ಹಚ್ಚುವ

ಚಿಂತೆ ಹತ್ತಿತು ನಿಂಗೆ!

ಸಾಂಬ : ಛೇ. ಛೇ! ಉಂಟೇ! ಸಾರ್ (ಜೋರು ಕೆಮ್ಮು)

ಚಿದಂ : ಸಾಕು. ಸಾಕು. ನಿಧಾನಿಸು ನಿಧಾನಿಸು (ಸಾಂಬನ ತಲೆ ಬೆನ್ನು ತಟ್ಟಿ) ಆ ನಿನ್ನ ಪ್ರಾಯದ ಹೆಣ್ಣಿಗೆ ನಾ ಏನು ಹೇಳಬೇಕು?

ಸಾಂಬ : ನೀವು-ಇಷ್ಟೇ (ಮತ್ತೆ ಕೆಮ್ಮು) (ಡಾಕ್ಟರನ ಪ್ರವೇಶ).

ಡಾ : Here I am

ಚಿದಂ : (ಧಿಗ್ಗನೆ ಎದ್ದು ನಿಂತು) Present Sir!

ಡಾ : ಎಲಾ, ಎಲಾ! ರಾಯರ ಪಕ್ಕದಲ್ಲೆ ಕೂತು ಬಿಡ್ತಿಯೇನೋ? ಒಳ್ಳೆ ಜವಾನಾ! ಶುದ್ಧ ಹೈವಾನಾ! ಇಲ್ಲಿ ಬಾ. ನನಗೊಂದು ಗ್ಲಾಸು ಸ್ವಚ್ಛ ನೀರು ತಾ. (ಸಾಂಬನಿಗೆ) ರಾಯರೇ, ಇದೊಂದು ಕಪ್ಪು ಸ್ಟ್ರಾಂಗ್ ಕಾಫಿ ಕುಡಿಯಿರಿ (ಥರ್ಮಾಸ್ಸಿನಲ್ಲಿ ತಂದ ಕಾಫೀ ಕೊಡುತ್ತಾನೆ) (ಚಿದಂಬರ ಇಷ್ಟರಲ್ಲಿ ಒಳಗೆ ಹೋಗಿ ಬಂದು).

ಚಿದಂ : ಡಾಕ್ಟರೇ, ಸ್ವಚ್ಛ ನೀರಿದೆ ಗ್ಲಾಸು ಇಲ್ಲ. ಒಂದು ಕಪ್ಪು ತರಲೇ? ಅದು ಸ್ವಚ್ಛ ಇಲ್ಲ. ಕಪ್ಪ ಕಪ್ಪಾಗಿದೆ!

ಡಾ : ಇರಲಿ. ಬೇಡ ನಿನ್ನ ತಲೆಹರಟೆ. ಈ ಎಂಪ್ಯೂಂ ಹಿಡಿ - ಹೀಗೆ. (ಸಿರಿಂಜನಲ್ಲಿ ಮದ್ದು ಹೀರುತ್ತಾನೆ.)

ಚಿದಂ : ಇದೇನು, ಮದ್ದು ಚುಚ್ಚುತ್ತೀರಿ?

ಡಾ : ನಿನಗೇಕೋ ಆ ಉಸಾಬರಿ?

ಚಿದಂ : (ಗಲ್ಲ ಬಡಿದುಕೊಂಡು) ಹಾಂ ಬರೋಬರಿ!

ಡಾ : ರಾಯರೇ ಒಂದು ಪೆನ್ಸಿಲಿನ್ ಶಾಟ ಕೊಟ್ಟು ಬಿಡ್ತೇನೆ.

ಸಾಂಬ : 'ಏನ್ ಶಾಟು? ಪೆನ್ಸಿಲ್ಲು? (ಚಿದಂಬರ ಕಣ್ಣು ಕೆಕ್ಕರಿಸುತ್ತಾನೆ.) ಅಯ್ಯಪ್ಪಾ! ಏನು ಕೊಡ್ತೀರೋ ಕೊಡಿ. ಲಗು ಗುಣಾಮಾಡಿ ಕೊಡಿ!

ಡಾ : ಅದರ ಆಶೆ ಬಿಡ್ರಿ ಸರ್. ನಾವು ಮದ್ದು ಕೊಡೋದು.

ಚಿದಂ : ಮತ್ತೆ ಅದಕ್ಕೂ ದೊಡ್ಡ ಬಿಲ್ಲು ಕೊಡೋದು.

ಡಾ : ಏ ಸಾಂಬಾ ದುರು ದುರು ನೋಡ್ತೀ ಏನು? ಇಕೋ ರಾಯರ ಶರ್ಟಿನ ತೋಳು ಮೇಲೇರಿಸು. ಈ ಹತ್ತಿ ಅಲ್ಲಿ ಉಜ್ಜು. ಸರಿ. ಈಗ ನೀನು ಹಿಂದೆ ಸರಿ ಇಂಜಕ್ಷನ್ ನಿನಗಲ್ಲ. ರಾಯರಿಗೆ Please Sir ತುಸು ಅತ್ತ

ಕಡೆಗೆ ನೋಡ್ತೀರಾ? (ಮದ್ದು ಚುಚ್ಚುವನು)

ಚಿದಂ : ಡಾಕ್ಟರೇ, ನಮ್ಮ ರಾಯರಿಗೆ ಕಾಯಿಲೆ-ಯಾವ ನಮೂನೆ?

ಡಾ : ನಮೂನೆ ನ್ಯೂಮೋನಿಯಾ! (ಹೊರಗೆ ಬೆಲ್)

ಚಿದಂ : (ಗಾಬರಿ) ಅದೋ ಮತ್ತಾರೋ ಬಂದರು! ಏನು ಮಾಡಲಿ?

ಡಾ : ಏನೂ ಮಾಡಬೇಡ. ಸುಮ್ಮನೆ ನಿಲ್ಲು. ಬಂದವ ನನ್ನ ಅಸಿಸ್ಟೆಂಟು. ಪೋಲ್ಟೀಸ ತಂದಿರಬೇಕು - ರಾಯರ ಎದೆಗೆ ಹಚ್ಚಲಿಕ್ಕೆ. ಬನ್ನಿ, ಒಳಗೆ ಬನ್ನಿ.

ಮಿಸ್ಟರ್ ಕುಂಭಕೋಣಂ : ಇಲ್ಲಿ ಇತ್ತ ಬನ್ನಿ. ತಂದಿರಾ ಎಂಟಿಫ್ಲೆಮಿನ್.

ಕುಂಭ : ಹೌದು ಡಾಕ್ಟರ್!

ಡಾ : 'ಸರ್' ಅನ್ನಿ, ಮತ್ತೆ ಮರೆತ್ರಾ?

ಕುಂಭ : ಕ್ಷಮಿಸಿ ಡಾಕ್ಟರ್ ಅಲ್ಲ, sorry ಸರ್ ಡಾಕ್ಟರ,...ಛೇ ಡಾಕ್ಟರ್ ಸಾರ್! (ಪೆಚ್ಚಾಗಿ ನಿಲ್ಲುತ್ತಾನೆ,-ರೋಗಿಯನ್ನೂ ಡಾಕ್ಟರನ್ನೂ ನೋಡುತ್ತ)

ಡಾ : ಬೆಡ್ ರೂಂ ಎಲ್ಲಿ ಜವಾನ!

ಚಿದಂ : (ತುಸು ದಿಗಿಲು ಬಿದ್ದು) ಅದೋ ಅಲ್ಲಿದೆ, ಸಾರ್

ಡಾ : ರಾಯರನ್ನು ಹಾಯಾಗಿ ಅಲ್ಲಿ ಒಯ್ದು ಮಲಗಿಸೋಣ ಮಿಸ್ಟರ್ ಕುಂಭ-

ಕುಂಭ : (ಸ್ವಗತ) ನನ್ನ ಪುಣ್ಯ. ಮಿಸ್ಟರ್ ಕೋಣ - ಅನ್ನಲಿಲ್ಲ! (ಪ್ರ) ರೆಡಿ ಸರ್. ಆದರೆ ಹಾಸಿಗೆ ರೆಡಿಯೇ?

ಚಿದಂ : ಆತ ಆಗಲೇ ರೆಡಿ ಮಾಡಿಟ್ಟಿದ್ದ -

ಡಾ : ಆತ? ಏ ಶಿವಯ್ಯ ಹೀಗೇನೋ ಕರೆಯೋದು ನಿನ್ನ ರಾಯರಿಗೆ?

ಚಿದಂ : ಅಯ್ಯೋ, ಗಡಿಬಿಡಿಯಲ್ಲಿ ಹಾಗೆ ಬಂದುಬಿಡ್ತು - ಇದಕೂ ಮದ್ದುಂಟೇ? (ಹುಸಿನಗೆ)

ಡಾ : ನಿನ್ನ ತಲೆಗೂ ಉಂಟು. ಅಲ್ಲ, ನಿಮ್ಮ ರಾಯರು ತಮ್ಮ ಹಾಸಿಗೆ ತಾವೇ ಹಾಸಿಕೊಳ್ಳೋದೇ?

ಚಿದಂ : ಹೌದು, ಹೌದು ಸಾರ್. ಯಾವಾಗಲೂ ಹಾಗೇನೇ. ನಂಗೆ ಮುಟ್ಟಲಿಕ್ಕೆ ಕೊಡುವದಿಲ್ಲ, ಅಷ್ಟು ಸ್ವಾವಲಂಬಿ!

ಡಾ : ಭೇಷ್! ಹಾಗಿರಬೇಕು. ನೀನೋ ಹೇವಿಲಂಬಿ ಸಂವತ್ಸರಕ್ಕೆ ಹುಟ್ಟಿದ್ದಿರಬೇಕು, ಸಾಂಬಶಿವಾ! ರಾಯರೇ ನೀವು ಬಿದ್ದೀರಿ. ನಾವು ನಿಮ್ಮನ್ನು ಒಳಗೆ ಒಯ್ತೇವೆ. ನಿಧಾನವಾಗಿ. ಹೆದರಬೇಡಿ. ನಿಮ್ಮ ಜೀವ ನನ್ನ ಕೈಯಲ್ಲಿದೆ!

ಚಿದಂ : **(ಸ್ವಗತ)** ಮತ್ತೆ ನಿಮ್ಮ ಕೈ? ನನ್ನ ಜೇಬಿನಲ್ಲಿದೆ!

ಡಾ : ಏ. ಎಲ್ಲಿ ನೋಡ್ತಿದ್ದಿ? ಏ ಮಿಸ್ಟರ್ ಕೋಣ -

ಕುಂಭ : **(ಸ್ವಗತ)** ಭೇ ಭೇ ಅಂದೇ ಬಿಟ್ಟ ಪ್ರಾಣಿ. **(ಪ್ರಕಟ)** Ready sir ಹಾಂ. one -two - three.

ಚಿದಂ : ತಡೀರಿ, ತಡೀರಿ. ಈ ಸೀಸೆಯಾತಕ್ಕೆ? ಅವರಿಗೆ ಮದ್ದು ಕುಡಿಸಬೇಕೇ?

ಡಾ : ಹೌದು ಹೌದು, Sorry ಮರೆತೇ ಹೋದೆ. ಒಂದು ಪಾಲು ಈಗಲೇ ಕುಡಿಸು. **(ಚಿದಂಬರ ಹಾಗೆ ಮಾಡಲು ಹೋಗುತ್ತಾನೆ.)** ಇದ್ನೋಡು, Shake-well before giving the dose. ಅಂದರೆ ಡೋಸು ಕುಡಿಸೋ ಮುಂಚೆ ಚೆನ್ನಾಗಿ ಗದಗದ ಅಲ್ಲಾಡಿಸಬೇಕು!

ಚಿದಂ : ಓ.ಕೆ. ಡಾಕ್ಟರ್. ಅದಕೇನಂತೆ! **(ಆತ ಸಾಂಬನನ್ನೆ ಅಲುಗಾಡಿಸ ಹತ್ತುವನು)** ರಾಯರೇ ತುಸು ತಾಳಿ..

ಸಾಂಬ : ಅಯ್ಯಯ್ಯೊ! ಸರ್, ಸಾರ್!

ಡಾ : ಅಯ್ಯೋ, ಮನೆಹಾಳಾ! ರೋಗಿನಲ್ಲೊ ಅಲ್ಲಾಡಿಸೋದು, ಮದ್ದನ್ನ. ಮದ್ದಿನ ಸೀಸೆಯನ್ನು.

ಚಿದಂ : ಹೀಗೋ ತಪ್ಪಾಯ್ತು, ಸಾರ್. ಇಕೊಳ್ಳಿ ರಾಯರೆ, ಮದ್ದು (ಕುಡಿಸುವನು) ಈಗ No Problem!

ಡಾ : ತಪ್ಪು ನಿಂದಲ್ಲ ಬಿಡು, ಅದು ನಿನ್ನ ಅಪ್ಪ ಅವ್ವಂದು. ನಿಂಗೆ No problem! ಅದು ನಮಗೆ ಡಾಕ್ಟರ ಪೇಶಂಟ್ರಿಗೆ! ಇರಲಿ. ಇನ್ನು ರಾಯರನ್ನು ಎತ್ತಿ ಒಳಗೆ ಒಯ್ಯೋಣ, ಬನ್ನಿ ಕುಂ -ಕೋss

ಕುಂಬ : ಬಂದೆ. ಕರೆಯೋದೇ ಬೇಡ. I am ready. Ever Ready.

ಡಾ : ನೀನೇನು ಬ್ಯಾಟ್ರಿಯೆ?

ಕುಂ : **(ನಗೆ)** ಹೆ: ಹೆ: ಹೆ s

ಚಿದಂ : ನಾನೇನು ಮಾಡಲಿ ಸರ್! ನನ್ನ ಕೈಕೊಡ್ಲಾ?

ಡಾ : ಆಗಲೆ ಕೈಕೊಟ್ಟೆ ಅಲ್ಲ! ಅದೋ ಆ ಕುರ್ಚಿ ಕಾಣ್ತದಲ್ಲ!

ಚಿದಂ : ಹೌದು ಸಾರ್ ಕಾಣ್ತದೆ.

ಡಾ : ಹೋಗಿ ಅದರಲ್ಲಿ ಕೂತುಕೋ (ಚಿದಂಬರ ತೆಪ್ಪಗೆ ಕೂಡುತ್ತಾನೆ. ಡಾಕ್ಟರ ಮತ್ತು ಕುಂಭಕೋಣಂ ಸಾಂಬನನ್ನು ಎತ್ತಿ ಒಳಗೆ ಒಯ್ಯುತ್ತಾರೆ. ಕುಂಭ ತಿರುಗಿ ಒಂದು ಮೆಡಿಕಲ್ ಬ್ಯಾಗು ಇತ್ಯಾದಿ ಒಳಗೆ ಒಯ್ಯುತ್ತಾನೆ.)

ಚಿದಂಬರ : (ಕೂತ ಕುರ್ಚಿಯಿಂದ ಎದ್ದು ಇನ್ನೊಂದು ಕಡೆಗೆ ಕೂತು ಮತ್ತೆ ಅತ್ತಿತ್ತ ಸುಳಿದಾಡಿದಾಗ ಬೆಲ್ ಸದ್ದು, ಗಾಬರಿಯಿಂದ-)

ಅದಾರು?

(ಕುಮಾರಿ ಶ್ರೀಮತಿ ಬರುತ್ತಾಳೆ).

ಶ್ರೀಮತಿ : ಎರಡು ಸಲ ಬೆಲ್ಲ ಬಾರಿಸಿದೆ -

ಚಿದಂ : Sorry ಕೇಳಿಸಲಿಲ್ಲ. ಬೆಲ್ ಕೆಟ್ಟಿರಬೇಕು.

ಶ್ರೀಮತಿ : (ನಕು) ನಾ ನಂಬಲಾರೆ. ಕೆಟ್ಟಿದ್ದು ಬೆಲ್ ಇರಲಿಕ್ಕಿಲ್ಲ.

ಚಿದಂ : ಹಾಗಾದರೆ, ನನ್ನ ತಲೆಯೇ?

ಶ್ರೀಮತಿ : ಅದು ನನಗೆ ಹೇಗೆ ಗೊತ್ತಾಗಬೇಕು? ನಾ ಏನು ಹೇಳಲಿ? ಕೆಟ್ಟಿದ್ದು ನಾ ಬಂದ ವೇಳೆ. ನೀವು ಈಗ ತಾನೇ ಮನೆಗೆ ಬಂದಿರಿ! (ಸುತ್ತಲೂ ನೋಡಿ) ಎಲ್ಲವೂ ಅಸ್ತವ್ಯಸ್ತ! ನೀವೆಲ್ಲ ಪ್ರಸಿದ್ಧ ಜನ!

ಚಿದಂ : (ಗಾಬರಿ) ಪ್ರಸಿದ್ಧ ಜನ!

ಶ್ರೀಮತಿ : ಅದೇನೂ ನನಗೆ ವಿಶೇಷ ಗೊತ್ತಿಲ್ಲ. ಏನೋ ಚಿತ್ರ-ಚಿತ್ರಕಾರ, ಕಲೆ-ಕಲಾವಿದ!

ಚಿದಂ : ಸರಿ ಸರಿ ಆಮೇಲೆ?

ಶ್ರೀಮತಿ : ಆಮೇಲೆ ಅಲ್ಲ, ಈ ಮೊದಲು ಆದದ್ದು ಹೇಳ್ತಿದ್ದೇನೆ - ಬೆಲ್ ಎರಡುಸಲ ಬಾರಿಸಿದೆ ಯಾರೂ ಕೇಳಲಿಲ್ಲ. ನೋಡಿದೆ, ಬಾಗಿಲು ತೆರೆದೇ ಇತ್ತು - ಯಾರಿಗೋ ಬರಲಿಕ್ಕೆಂದು. ನಾನೇ ಬಂದೆ.

ಚಿದಂ : ಸರಿ. ಯಾರೋ ಬರುವವರಿದ್ದರು. ಸಾಂಬಶಿವಯ್ಯ ಕಾಯು ತಿದ್ದ-ಪ್ರಾಯದ ಹೆಣ್ಣು! ನೀನೇ ಏನು?

ಶ್ರೀಮತಿ : (ತುಸು ಕೆರಳಿ) ಅಂದರೆ! ಹಾಗೇನು ನಾನು ಅಷ್ಟು ಪ್ರಾಯದವಳೇ? ನಿಮ್ಮ ಅಭಿಪ್ರಾಯವೇನು?

| | |
|---|---|
| ಚಿದಂ : | ಪ್ರಾಯಶಃ ಅಷ್ಟೇನು ಆದಂತಿಲ್ಲವೆನ್ನಿ. ಇರಲಿ. ನೀವು ಬೆಲ್ ಬಾರಿಸಿರಬಹುದು. ಆದರೆ ಕೇಳಿಸಿಲ್ಲ. ಬೆಲ್ ಕೆಟ್ಟಿರಬೇಕು. |
| ಚಿದಂ : | ಅದೇ ಆ ಪ್ರಾಯದ ಹೆಣ್ಣು! |
| ಶ್ರೀಮತಿ : | ಮತ್ತೆ ಅದೇ ಪ್ರಾಯದ ಹೆಣ್ಣು! (ವ್ಯಾನಿಟಿ ಬೇಗ ತೆರೆದು ಮುಖ ಸಿಂಗಾರ ಮಾಡಿಕೊಳ್ಳುತ್ತ) ಈಗ ಹೇಗೆ? ಪ್ರಾಯ ಕಾಣುತ್ತದೆಯೇ? (ನಗುವಳು). |
| ಚಿದಂ : | ಓ ಆ ಬಾಗಿಲು (ಏಳುವನು ಕದ ಇಕ್ಕಲು). |
| ಶ್ರೀಮತಿ : | ನಿಲ್ಲಿ, ನೀವೇ ಹೋಗಬೇಕಾಗಿಲ್ಲ. ನಾನೇ ಬಾಗಿಲ ಮುಚ್ಚಿ ಒಳಗೆ ಬಂದೆ. ಯಾರಾದರೂ ಬರಲಿದ್ದಾರೋ.-- |
| ಚಿದಂ : | ಇನ್ನಾರೂ ಇಲ್ಲ. ನೀವೇ ಆ ತರುಣಶ್ರೀಮತಿ ಕುಮಾರಿ- |
| ಶ್ರೀಮತಿ : | ನಾನು ಶ್ರೀಮತಿಯೂ ಅಲ್ಲ, ಶ್ರೀಮಂತ ಕುಮಾರಿಯೂ ಅಲ್ಲ. ನಾನು ಕುಮಾರಿ ಶ್ರೀಮತಿ! |
| ಚಿದಂ : | ಸರಿ. ಶ್ರೀಮತಿಯವರೇ ನಿಮಗಾಗಿಯೇ ಕಾಯುತಿದ್ದೆ. |
| ಶ್ರೀಮತಿ : | ಏಕೆ? ಏನಾದರೂ ಸಂದೇಶವಿದೆಯೇ? |
| ಚಿದಂ : | ಸಂದೇಶವಲ್ಲ ಸಂದೇಹ. |
| ಶ್ರೀಮತಿ : | ಅದು ಬಿಡಿ. ದೇಹ ಇರೋವರೆಗೂ ಸಂದೇಹ ಇರೋದೆ- ಏನಾದರೂ, ಸರಿ. |
| ಚಿದಂ : | ಸರಿಯೋ ತಪ್ಪೋ. ನಿಜ ಸಂಗತಿ ಅಂದರೆ ಇದೀಗ ನಾವು ತುಸು ಗಡಿಬಿಡಿಯಲ್ಲಿ ಇದ್ದೇವೆ. |
| ಶ್ರೀಮತಿ : | ಪಾಃ ಪ. ಕಾಯಿಲೆ, ಯಾರಿಗೋ? |
| ಚಿದಂ : | ಅದೇ! ಮ್ಯಾಡಂ, ಒಂದು ಪ್ರಶ್ನೆ ಕೇಳಲೇ? |
| ಶ್ರೀಮತಿ : | ಮಡ್ಡಮ್ಮಾ ಅಲ್ಲ ನಾನು. ಮಿಸ್ ಅಲ್ಲ, ಪ್ರಶ್ನೆ ಅಲ್ದೆ ಇನ್ನೇನು ಕೇಳ್ತಾರೆ? ಸದ್ದನ್ನೇ? |
| ಚಿದಂ : | ಅಲ್ಲ, ಕೇಳೋ ಪ್ರಶ್ನೆ ನೀವು ಅಧಿಕ ಎಂದು ಭಾವಿಸದಿದ್ದರೆ - |
| ಶ್ರೀಮತಿ : | (ತುಂಟ ದನಿ) ಪ್ರಶ್ನೆ ಅಧಿಕವಾದರೆ ಬುದ್ಧಿ ಉಣಾ! ಅದ್ಯಾವ ಪ್ರಶ್ನೆ? |
| ಚಿದಂ : | ಅಲ್ಲ, ನಮ್ಮಲ್ಲಿ ಕಾಯಿಲೆ ಎಂದಿರಿ. ನಿಮಗೆ ಹೇಗೆ ಗೊತ್ತು? |
| ಶ್ರೀಮತಿ : | ಅದೇನು ಮಹಾ! ಅಲ್ಲಿ ಬಾಗಿಲಲ್ಲಿ ನಾನಿಂತಿದ್ದೆ. ಆಗ ಪಾಪಚ್ಚಿಯೊಬ್ಬಳು |

ಚಿದಂ : ಆಂ? ಪಾತಾಳದ ಪಾಪಚ್ಚಿಯೇ?

ಶ್ರೀಮತಿ : ಅಲ್ಲ ಇದು ಪಕ್ಕದ ಮನೆಯವಳು! ಆಕೆ ಬೇತಾಳದಂತೆ ತಲೆ ಹೊರಗೆ ಹಾಕಿ 'ಇದೀಗ ಡಾಕ್ಟ್ರು ಹೊರಬಿದ್ದು ಹೋದ್ರು' ಎಂದಳು. ಸೀಕೇನು ಸೀರಿಯಸ್ಸೊ?

ಚಿದಂ : ನ್ಯುಮೋನಿಯಾ!

ಶ್ರೀಮತಿ : ನ್ಯುಮೋನಿಯಾ! ದೇವರದೇ ದಯೆ!

ಚಿದಂ : (ಚಕಿತ) ದೇವರ ದಯೆ!

ಶ್ರೀಮತಿ : ದೇವರ ದಯೆ ಅಲ್ದೆ ಇನ್ನೇನು? ಈ ಸೆಕೆಯಲ್ಲಿ, ಈ ಹವಾಮಾನದಲ್ಲಿ ಬೇನೆಗಳಲ್ಲಿ ನ್ಯುಮೋನಿಯಾನೇ ಭಾರಿ ಲೇಸು!

ಚಿದಂ : ಹೌದೆ? ಅದು ಹೇಗೆ? ಇದ್ಯಾವ ನಮೂನೆ?

ಶ್ರೀಮತಿ : ಅದು ಹೀಗೆ - ನ್ಯುಮೋನಿಯಾ ಆದವರನ್ನು ಭಾರಿ ಬೆಚ್ಚಗೆ ಇಡಬೇಕು. ಉರಿಸೆಕೆಯಲ್ಲಿ ಅದು ತನ್ನಾರೆಯೇ ಆಗುತ್ತದೆ. ಆದರೂ ಇದೂ ಒಂದು ಚೋದ್ಯವೇ-

ಚಿದಂ : ಯಾವುದು ಚೋದ್ಯ?

ಶ್ರೀಮತಿ : ಈ ವೈಶಾಖ ಮಾಸದಲ್ಲಿ ಸಾಮಾನ್ಯವಾಗಿ ತಾಳಿ ಕಟ್ಟಿ ಕೊಳ್ಳಬೇಕಾದದ್ದು. ಆದರೆ ಇದು ಇಲ್ಲಿ ಹೀಗಾಯ್ತು!

ಚಿದಂ : ಇದು ಬರಿ ಕುಚೋದ್ಯದ ಮಾತು. ಇರಲಿ ಬಿಡಿ. ನಾವು ಮದರಾಸಿನಿಂದ ಬಂದದ್ದು. ಅಲ್ಲಿ ಮತ್ತೆ ಇನ್ನೂ ಸೆಕೆ!

ಶ್ರೀಮತಿ : ಹೌದೆ? ಆದರೆ ಒಂದು ಸಂಗತಿ ಗೊತ್ತಾಗೇ ಇಲ್ಲ. ಈಗ ಕಾಯಿಲೆ ಬಿದ್ದವರು ಸಾಂಬಶಿವಯ್ಯ ಅಲ್ಲ?

ಚಿದಂ : ಅಲ್ಲವೇ ಅಲ್ಲ. ಖುದ ಚಿತ್ರಕಾರ ಚಿದಂಬರ ರಾಯರೇ ಸೀಕು ಬಿದ್ದದ್ದು! (ಸ್ವಗತ) ಅಂದರೆ ಈಗ ಸಿಕ್ಕಿಬಿದ್ದವರೆನ್ನಿ!

ಶ್ರೀಮತಿ : (ಕಳವಳ. ದನಿತಗ್ಗಿಸಿ) ಅಯ್ಯೋ! ಪಾಽಪ. ರಾಯರಿಗೆ ಸೀಕೇ? ಮತ್ತೆ ಮನೆಯಲ್ಲಿ ಗಂಡಸರು ಬಿಟ್ಟರೆ ಯಾರೂ ಇಲ್ಲ -

ಚಿದಂ : ಅದ್ದೇಂಗೆ ನಿಮಗೆ ಗೊತ್ತಾಯಿತು?

ಶ್ರೀಮತಿ : (ಸುತ್ತಲೂ ನೋಡಿ) ಸಾಽಽರಿ. ಅದೂ ಗೊತ್ತಾಗೋದಿಲ್ವೆ- ಹೆಂಗಸಿಗೆ? ಇದೆಲ್ಲ ಏನು ಹೇಳ್ತದೆ? ಇಲ್ಲಿ ಹೆಂಗಸರಿದ್ರೆ ಹೀಗೆಲ್ಲ ಅಸ್ತವ್ಯಸ್ತ ಆಗುತ್ತಿತ್ತೇ? ಗಂಡ್ಸು ಒಳ್ಳೆ ಗಟ್ಟುಮುಟ್ಟಾಗಿದ್ದರೂ ಹೀಗೇನೇ! ಇನ್ನು

ನೋಡಿಕೊಳ್ಳೋದಕ್ಕೆ ಒಬ್ಬ ನರ್ಸ್‌ಳನ್ನು ಕಳುಹಿಸಿ ಕೊಡುತ್ತೇನೆ. ಯಾಕೆ? ನಿಂದೇನು ಆಕ್ಷೇಪ?

ಚಿದಂ : Thanks ಡಾಕ್ಟರ್. Very many thanks ಆದರೆ ಒಳ್ಳೆಯ ನರ್ಸೋ, ನರ್ಸು ಒಳ್ಳೆಯವಳೋ? ನನ್ನ ಆಕ್ಷೇಪವೇ ಇಲ್ಲ. ಈ ಕೇಸು ಭಾರೀ ಕಾಳಜಿಯಿಂದ ನೋಡಿಕೊಳ್ಳಬೇಕು. ಇಷ್ಟೇ ನನ್ನ ಅಪೇಕ್ಷೆ-ಆಕ್ಷೇಪವಲ್ಲ.

ಡಾ : ಆ ನರ್ಸು ಪರ್ವಾ ಇಲ್ಲ ಕಣೋ. ಭಾರಿ ಒಳ್ಳೆಯವಳೇ-ಹೇಗೆ ನೋಡಿದರೂ, ರಾಯರನ್ನು ಮೈಮೇಲೆ ತಕ್ಕೊಂಡು ನೋಡಿ ಕೊಳ್ತಾಳೆ ಬಿಡು.

ಚಿದಂ : ಸರಿ. ನನಗೆ ಭಾರಿ ಸಹಾಯ-

ಡಾ : ಎಂಥ ವಿಚಿತ್ರ ಪ್ರಾಣಿ! ನಿನಗೇಕೋ ಅವಳ ಸಹಾಯ? ಅವಳಿಗೆ ರಾಯರಿಗೇ ಗಂಟು. ನಿನ್ನದೇನು ಇಲ್ಲಿ ನಂಟು? ಎಂಥ ವಿಚಿತ್ರ ಇಸಮು ಈತ.

ಚಿದಂ : ನಾನು ಅಂಥ ವಿಚಿತ್ರಾನೇ? ಇರಬಹುದು ಇರಬಹುದು. ನಂಗೆ ಗಾಬರಿ ಡಾಕ್ಟ್ರೇ! ರಾಯರಿಗೆ ಏನಾಗ್ತದೋ! ಅದೇ ಗಾಬರಿ. ಹೀಗೆ ಉಲ್ಟಾಪಲ್ಟಾ ವಿಚಿತ್ರ ಮಾತಾಡ್ತೀನಿ! ರಾಯರಂತೆ-

ಡಾ : ಅಂದ್ರೆ ನಿಮ್ಮ ರಾಯರೂ ಹೀಗೇ ವಿಚಿತ್ರಾ ಉಲ್ಟಾ ಪಲ್ಟಾ?

ಚಿದಂ : (ಹುಸಿ ನಗುತ) ಅದೇನು ಕೇಳ್ತೀರಿ ಡಾಕ್ಟ್ರೇ? ಅವರು ಚಿತ್ರಾನೂ ಅಷ್ಟೇ ಅವರೂ ಅಷ್ಟೇ! ತಲೆತಿರುಕತನಕ್ಕೆ ನಾವಿಬ್ಬರೂ ಒಂದೇ-ಒಂದು ಕಾಳಿನ ಎರಡು ಹೋಳು ಅನ್ನಿ! ನನ್ನ ಅಡಗಿಸಬೇಕು. ಅವರನ್ನು ಕಾಣಿಸಬೇಕು!

ಡಾ : ಗೊತ್ತಾಯ್ತು ಸಾಂಬಯ್ಯಾ ಗೊತ್ತಾಯ್ತು!
ಅಂದ್ರೆ, ಅವರೇ ನೀನು ನೀನೇ ಅವರು!

ಚಿದಂ : ರೂಪಾಯಿಗೆ ನೂರು ಪೈಸೆ ಖರೆ. ಡಾಕ್ಟರರೇ ಎಷ್ಟೋ ಸಲ 'ರಾಯರೇ' ಎಂತ ಕರೆದರೆ ನಾನೆ ಓ ಎಂದು ಹೋಗ್ತೇನೆ!

ಡಾ : ಸೈ ಸೈ! ನೀನೂ ಒಬ್ಬ ಭಾರಿ ತಮಾಷೆ ಜವಾನ ಕಣೋ! ಅಲ್ಲೋ ನಿನ್ನ ರಾಯ್ರು ಭಾರಿ ಆರ್ಟಿಸ್ಟು. ದೊಡ್ಡ ಪೇಂಟರ್ ಅಲ್ಲವೆ?

ಚಿದಂ : ಆಂ? ಅದು ನಿಮಗೆ ಹೇಗೆ ಗೊತ್ತು ಸಾರ್? ಅಲ್ಲ ನೀವೂ ಪೇಂಟು ಮಾಡ್ತೀರಿ. Throat Paint.

ಡಾ : ಎಲಾ ಮುಠ್ಠಾಳಾ! ನಿನ್ನ Throat paint ತುಂಬಬೇಕು. ಬಣ್ಣದ ಮಾತೇ

ಮಾತು! ನೀನೂ ಒಬ್ಬ ಇವನೇ!

ಚಿದಂ : ಕ್ಷಮಿಸಿ. ಇದು ಬರಿ ಜೋಕು, ಆದರೆ ಜೋಕೆ! - ರಾಯರ ಆರ್ಟಿನ ಬಗೆಗೆ ಮಾತಾಡಿದರೆ! ಅವರ ಒಂದು ಚಿತ್ರ ೫೦೦೦ ರೂಪಾಯಿಗೆ ೧೦೦೦೦ರೂಪಾಯಿಗೆ ಮಾರಿ ಹೋಗ್ತದೆ, ನೋಡಿ!

ಡಾ : ನೋಡಿದ್ದೇನೆ ಬಿಡೋ. ಅವರೆ ಬರೆದ ಚಿತ್ರ ನನ್ನ ಮೇಜಿನ ಮುಂದೆ ಇದೆ - ಈ ಇಂದಿಗೆ ೫ ವರ್ಷವಾಯ್ತು!

ಚಿದಂ : ಅದರ ಹೆಸರು?

ಡಾ : ಹೆಸರು 'ಗಜನಿಂಬೆರಂಭೆ'!

ಚಿದಂ : ಹೌದೆ! ಅದೃಷ್ಟವಂತರು ನೀವು! ಅದಕ್ಕೆ ಎಷ್ಟು ಸಾವಿರ ರೂಪಾಯಿ ಕೊಟ್ರಿ?

ಡಾ : ಅದು ಒಂದು ಕೆಲೆಂಡರೋ! ಒಬ್ಬ ಪೇಶಂಟನ ಮನೆಯಿಂದ ಎತ್ತಿ ತಂದಿದ್ದೆ! ಇನ್ನೂ ಇದೆ.

ಚಿದಂ : ಆ ಕೆಲೆಂಡರು ನೋಡಿಯೇ ದಿನದ ತಾರೀಖು ತಿಳಿಯುತ್ತೀರಾ?

ಡಾ : ಏ ಹುಚ್ಚಾ! ಇಂಥ ಕೆಲೆಂಡರು ತಾರೀಖು ನೋಡಲಿಕ್ಕೆ ಯಾರು ಇಟ್ಟುಕೊಳ್ತಾರೋ? ತೂಗಿ ಹಾಕುವದು ಅವರ ಚಿತ್ರಕ್ಕಾಗಿ. ಇಷ್ಟೂ ಗೊತ್ತಿಲ್ವೇ? ಹಃ ಹಃ ಹಃ ಹಸೀ ಹುಚ್ಚ!

ಚಿದಂ : **(ಪೆಚ್ಚು ಬಿದ್ದಂತೆ)** ನನ್ನ ಮುಂದೆ ಚಿತ್ರಕಾರರೇ ಇದ್ದಾಗ ಆ ಚಿತ್ರ ಏಕೆ ಬೇಕು ಬೇರೆ?

ಡಾ : ಅದೇ ನೆನಪಾಯ್ತು ನೋಡು. ಸಾಂಬಾ, ನಿಮ್ಮ ರಾಯರು ಹೀಗೆ ವರ್ಷಗಟ್ಲೆ ಬೆಂಗಳೂರಿನಿಂದ ದೂರ ಏಕೆ ಉಳಿತಾರೋ? ಕಣ್ಣ ಮುಂದೆಯೇ ಇರುವದಿಲ್ಲ.

ಚಿದಂ : ಅವರಿಗೆ ಇಲ್ಲಿಯ ಹವಾಮಾನವೇ ಹಿಡಿಸೋದಿಲ್ಲ. ಇಲ್ಲಿ ಭಾರಿ ಪ್ರಸಿದ್ಧಿ ಅಲ್ವೇ ಅವರದು?

ಡಾ : ಇದೇನು ಮಳ್ಳು ಪ್ರಶ್ನೆಯೋ? ನೀ ಸಾಂಬಯ್ಯನಲ್ಲ. ಶುದ್ಧ ಶುಂಭಯ್ಯ! ರಾಯರು ಇಲ್ಲಿ ಬರುವರೆಂಬ ಸುದ್ದಿ ಇಲ್ಲಿ ಹಬ್ಬಿ ಒಂದುವಾರ ಆಯ್ತು!

ಚಿದಂ : ಅಬ್ಬಬ್ಬ!

ಡಾ : ಅವರಿಗಾಗಿ ಸತ್ಕಾರ ಸಮಾರಂಭ ಇಟ್ಟುಕೊಂಡಿದ್ದಾರೆ ಕಾರ್ಪೊರೇಶನ್

ಚಿದಂ : ಅಯ್ಯೋ! ಅಯ್ಯೋ!

ಡಾ : ಅದಕ್ಕಾಗಿ ನಾಳೆ ಅವರನ್ನು ಭೆಟ್ಟಿ ಆಗಲಿಕ್ಕೆ ಮೇಯರರೇ ಬರಲಿದ್ದಾರೆ!

ಚಿದಂ : ಅಯ್ಯೋ! ದೇವರೇ! (ಧಪ್ಪನೆ ಕೂತು ಬಿಡುವನು.)

ಡಾ : (ಗಾಬರಿ) ಏನು? ಏನಾಯ್ತು?

ಚಿದಂ : ಏನಿಲ್ಲ, ಏನಿಲ್ಲ ಸುಸ್ತು. ತುಸು ಸುಸ್ತು. ಸಿಗರೇಟು ಸೇದ್ಲೇ? ನೀವೂ ಒಂದು ಸ್ಮೋಕು ಮಾಡ್ತೀರಾ? (ಸಿಗರೇಟ ಕೇಸು ಮುಂದೆ ಮಾಡುವನು)

ಡಾ : (ಕಣ್ಣುಬಿಟ್ಟು) ಇದೇನು? ಗೋಲ್ಡಕೇಜು? ಮನೆ ಆಳಿನ ಕೈಯಲ್ಲಿ ರಾಯರ ಸಿಗರೇಟ ಕೇಸು? ಬಂಗಾರದ್ದು! ಎಲ್ಲಿ ಲಫ್ಟಾಯಿಸಿದಿಯೋ, ರಾಜಾ, ಇದನ್ನು? (ತಾನೇ ಜೇಬಿಗೆ ಹಾಕಿಕೊಳ್ಳಹತ್ತುವನು.)

ಚಿದಂ : ಹಾಂ ಹಾಂ ಇತ್ತ ಕೊಡಿ ಆ ಕೇಸು. ನೀವೂ ಲಫ್ಟಾಯಿಸಬೇಡಿ. ನಮ್ಮ ರಾಯರೂ ನಾನು ಬಹಳ ಅನ್ಯೋನ್ಯ. ಹೇಳಲಿಲ್ಲವೇ ಆಗ್ಲೇ? ಅಣ್ಣ-ತಮ್ಮಂದಿರಂತೆ. ಬಾಯಿಗೆ ಸಿಗರೇಟು ಇದ್ದಂತೆ. ರಾಯರೇ ನಂಗೇ ಸಿಗರೇಟ ಕೇಸು ಕೊಟ್ಟರು. ಆರ್ಟಿಸ್ಟರೇ ಹಾಗೆ, ನೋಡಿ. ಅವರ ಹೆಸರೇ ಒಳಗೆ ಕೊರೆದಿದೆ! ಹಾಂ. ಹಚ್ಚಿ ಸಿಗರೇಟು ಸೇದಿ.

ಡಾ : (ಸೇದುತ್ತ) ವ್ಹಾ ವ್ಹಾ very high class! ಲೋ ಸಾಂಬಾ ನಿನಗೆ ಈ smoking ಚಟ ಹೇಗೋ?

ಚಿದಂ : ಚಟ ಇಲ್ಲದ ಬದುಕು ಒಂದು ಬದುಕೇ? ಅದು ಬರಿ ಸಾಯಬಾರದೆಂಬ ಹಟ-ಚಟದ ಮೇಲೆ ಇಟ್ಟಂತೆ! ಏನಂತೀರಿ? (ಇಬ್ಬರೂ ಸಿಗರೇಟು ಸೇದುವರು).

ಡಾ : ಹೋಗಲಿ ಬಿಡು. ನಾವೆಲ್ಲ ಹೊಗೆಯಲ್ಲೆ ಹೋಗುವದು. We all end in smoke.

ಚಿದಂ : ನಮ್ಮ ರಾಯರೂ ಹಾಗೆಯೇ ಅಂತಿದ್ದರು. (ಒಳಗಿಂದ ಕುಂಭ ಕೋಣಂ ಬರುವನು)

ಡಾ : ನಿಂಗೆ ನಿನ್ನ ರಾಯರಿಗೆ smoke ಒಂದು jokeಉ! (ದೊಡ್ಡಕ್ಕೆ ನಗುವನು. ಕೆಮ್ಮುವನು) ಏನು ಮಿಸ್ಟರ್ ಬಂದು ಬಿಟ್ರಿ? ಪೇಶಂಟು?

ಕುಂಭ : ಗಡದ್ದು ನಿದ್ದೆ ಹತ್ತಿದೆ ಪೇಶಂಟಿಗೆ.

ಡಾ : ನೀವೇಕೆ ಇಂಪೇಶಂಟಾಗಿ ಬಂದ್ರಿ!

ಕುಂಭ : ಆ ಥರ್ಮಾಸಿನಲ್ಲಿ ಬಿಸಿ ಕಾಫಿ ಇದ್ದರೆ -

ಡಾ : ಎಂಥ ಪ್ರಶ್ನೆ! ಥರ್ಮಾಸಿನಲ್ಲಿ ಇರೋದೇ ಬಿಸಿ ಕಾಫಿ. ಅದು ತಣ್ಣಗಾದದ್ದಲ್ಲ. ಅದೇಕೆ ನಿಮಗೆ? ರಾಯರಿಗೆ ನಿದ್ದೆಲೇ ಕಾಫಿ ಕುಡಿಸುವಿರೇನು?

ಕುಂಭ : ಅವರಿಗಲ್ಲ ಸರ್, ನಾನೇ ಕುಡಿಯುತ್ತೇನೆ. ಗಂಟೆಗಟ್ಲೆ ಆಯ್ತು ನಿಮ್ಮ ಮಾತೇ ಮುಗಿದಿಲ್ಲ. ನನ್ನ ಗಂಟಲು ಒಣಗಿ ಹೋಯ್ತು!

ಡಾ : ಎಂಥ ಮನುಷ್ಯ! ಗಂಟೆಗಟ್ಲೆ ಮಾತು ನಮ್ಮ ಗಂಟಲಿನಿಂದ. ಮತ್ತೆ ಗಂಟಲು ಒಣಗಿದ್ದು ಈ ಮಹಾರಾಯರಿಗೆ! ಸರಿ ಸರಿ. ಕಾಫಿ ಕುಡಿಯಿರಿ. ಕಾಫಿರಾಗಾ ಮಾತ್ರ ಹಾಡಬೇಡಿ. ರಾಯರ ನಿದ್ದೆ ಹರಿದೀತು! ಥರ್ಮಾಸು ಅಲ್ಲೇ ಒಯ್ಯಿರಿ! **(ಕುಂಭ ಹೋಗುವನು)** ಎಂಥ ಮೂರ್ಖ! ಕಾಫಿ ಕುಡಿಯಲೂ ಇಷ್ಟು ಸಂಕೋಚವೇ? ಹುಂ!

ಚಿದಂ : ಸಂಕೋಚ ಅಂದ್ರಿ. ಅದಕ್ಕೆ ನೆನಪಾಯ್ತು. ನಮ್ಮ ರಾಯರಿಗೂ ವಿಪರೀತ ಸಂಕೋಚ. ಅದೊಂದು ದೊಡ್ಡ ಕಾಯಿಲೆಯೋ ಅವರಿಗೆ ಅಂಟಿಕೊಂಡಂತಿದೆ. ಅದಕ್ಕೆ ಅವರು ಊರಿಂದೂರಿಗೆ ದೂರದೂರ ದೇಶದಲ್ಲೆಲ್ಲ ಸಂಚಾರ ಮಾಡ್ತಾ ಇರತಾರೆ.

ಡಾ : ಅಷ್ಟೇನು ಸಂಕೋಚ? ಎಲ್ಲಿ ಹೋದರೂ ಜನಾನ ತಪ್ಪಿಸಿಕೊಳ್ಳೋಕೆ ಬರ್ತದೆಯೇ? ಸತ್ತಮೇಲೂ ಹೊತ್ತವರು ನಾಲ್ಕು ಮಂದಿ ಇದ್ದೇ ಇರತಾರೆ ಜತೆಗೆ!

ಚಿದಂ : ಹಾಗಲ್ಲ ಡಾಕ್ಟ್ರೇ. ಅವರ ಸಂಕೋಚಾನೇ ಒಂದು ಥರಾ. ಅವರಿಗೆ ಪ್ರಸಿದ್ಧಿ ಪ್ರಶಂಸೆ ಸತ್ಕಾರ ಸಮಾರಂಭ ಪತ್ರಿಕಾ ಸಂದರ್ಶನ ಅಂದರೆ ಮುಗಿದೇ ಹೋಯ್ತು. ಅದೇ ಅವರಿಗೆ ಜನಸಾಮಾನ್ಯರೊಂದಿಗೆ ಯಾವ ಭಿಡೆ ನಾಚಿಕನೂ ಇಲ್ಲ. ಪೇಟೇಲಿ ಸಿಕ್ಕವರ ಸಂಗಡ ಎಲ್ಲ ಅವರಿಗೆ ಹಾಗೆ ನಾಚಿಕೆ ಗೀಚಿಕೆ ಇಲ್ಲ!

ಡಾ : ಅಲ್ಲ. ಸಿಕ್ಕ ಸಿಕ್ಕವರ ಸಂಗಡ ಹಾಗೆ ಪೇಟೇಲಿ ನಾಚಿಕೆ ಬಿಟ್ರೆ ಹೇಗೆ?

ಚಿದಂ : ಅಲ್ಲ. ನೀವೂ ತಮಾಷೆಯ ಮಾತು ಕಲ್ತಿರಿ! ಪರವಾ ಇಲ್ಲ. ನಮ್ಮ ರಾಯರಿಗೆ, ಡಾಕ್ಟರರೇ, ದೊಡ್ಡ ಮನುಷ್ಯ ಎಂದೂ ಕಾಣಬಾರದು. ಇನ್ನು ನೀವು ಸಿಕ್ಕರೆ ನಿಮ್ಮ ಜತೆ ಗಂಟೆಗಟ್ಲೆ ನನ್ನ ಹಾಗೆಯೇ ಹರಟುತ್ತಾರೆ ನೋಡಿ!

ಡಾ : (ರೇಗಿ) ಅಂದರೆ ನಾನೇನು ಸಣ್ಣ ಮನುಷ್ಯನೇ? ನೋಡಿ ಮಾತಾಡೊ ಮೂಳಾ!

ಚಿದಂ : ಕ್ಷಮಿಸಿ ಸಾರ್. ನನ್ನ ಮಾತಿಗೆ ಅಪಾರ್ಥ ಮಾಡಿಕೊಳ್ಳಬೇಡಿರಿ.

ಡಾ : (ಸಿಟ್ಟು ಇಳಿಯುತ್ತ) ನಾ ಅಪಾರ್ಥನೇ! ನಾನೇನು ಪಾರ್ಥ ಅಲ್ಲ!

ಚಿದಂ : ಛೇ ಛೇ. ಇದೇನು ಬಯಲಾಟದ ಮಾತಲ್ಲ ಮಾರಾಯ್ರೇ! ಹೇಳೋ ಮಾತು ಇಷ್ಟೇ - ಈ ಸಂಕೋಚದ ಸ್ವಭಾವಕ್ಕೇ ರಾಯರು ಹೀಗ ದೇಶಾಟನ ಹಿಡಿದದ್ದು.

ಡಾ : ಆದರೆ ಈ ಸಂಕೋಚ ದೇಶಾಂತರದಿಂದ, ಹವಾ ಬದಲಿಸಿದರಿಂದ ಗುಣವಾಗುವ ರೋಗವೇ? ಇರಲಿ. ಅಂದ್ಹಾಂಗೆ ನಿಮ್ಮ ರಾಯರು

ಚಿದಂ : ಅದೂ ಒಂದು ದೊಡ್ಡ ಕತೆಯೇ. ರಾಮೇಶ್ವರಕ್ಕೆ ಹೋದರೂ ಶನೀಶ್ವರ ಬಿಡೋದಿಲ್ಲ ಅಂತಾರಲ್ಲ. ಹಾಗೇ ನಮ್ಮ ರಾಯರ ಫಜೀತಿ; ಮದರಾಸಿಗ ಹೋದರು. ಅಲ್ಲಿ ಒಬ್ಬ ಸುಂದರಿ ಗಂಟು ಬಿದ್ದಳು! ಅವಳಿಗೂ painting ಮೋಹ.

ಡಾ : ಅದೇನು ಕೇಳ್ತಿ? ಈಗಿನ ಕಾಲದಲ್ಲಿ ಎಲ್ಲ ಹೆಣ್ಣು ಮಕ್ಕಳಿಗೂ ತಮ ತಮ್ಮ ಮೋರೆ paint ಮಾಡಿಕೊಳ್ಳುವ ಹುಚ್ಚೇ! ನಮ್ಮ ಆ ನರ್ಸೂ -

ಚಿದಂ : ಛೇ ಛೇ ಆ painting ಅಲ್ಲ. ಸುಂದರಿಗೆ ಚಿತ್ರಕಲೆಯ painting ಮೋಹ. ಅದನ್ನೆ ಕಲಿಯೋಕೆ ಬಂದಳು ರಾಯರ ಹತ್ತಿರ.

ಡಾ : ಅಂದರೆ ಎಷ್ಟು ಹತ್ತಿರ?

ಚಿದಂ : ಬಹಳ ಹತ್ತಿರವೇ ಬರುತಿದ್ದಳು. ಗಂಟು ಬಿದ್ದವಳಿಗೆ ಮದುವೆಯ ಗಂಟು ಹಾಕುವದೊಂದೇ ಬಾಕಿ ಉಳಿದಿತ್ತು. ಆದರೆ ರಾಯರಿಗೆ ಹೇಗೋ ಗೊತ್ತಾಯಿತು. ಆ ಸುಂದರಿ ಯಾರೋ ಸಂಸ್ಥಾನಿಕನ ಮಗಳು ಎಂದು

ಡಾ : ಆಗ?

ಚಿದಂ : ಆಗೋದೇನು? ಒಮ್ಮೆಲೆ ರಾಯರಿಗೆ ನಾಚಿಕೆ ಹೆದರಿಕೆ! ರಾಯರ ಮೋರೆಯ ಬಣ್ಣ ಇಳಿದೇ ಹೋಯ್ತು. ಮದರಾಸಿನಿಂದ ಕಂಬಿಕಿತ್ತದ್ದು ನೆಟ್ಟಗೆ ಇಲ್ಲಿಗೆ ಬೆಂಗಳೂರಿಗೆ ಬಂದು ಇಳಿದದ್ದು!

ಡಾ : ಆದರೆ ಸಾಂಬಾ. ನಿನ್ನ ರಾಯರನ್ನು ಕಂಡರೆ ಹೀಗೆಲ್ಲ ಹೆಣ್ಣಿಗೆ ಹೆದರಿ ಓಡುವವರ ಹಾಗೆ ಕಾಣುವದಿಲ್ಲ!

ಚಿದಂ : ಅಂ? ಹಾಗೂ ಉಂಟೇ? (ತನ್ನ ಮೋರೆ ಮುಟ್ಟಿ ಉದ್ದಿಕೊಳ್ಳುತ್ತ) ಅಲ ಹಾಗಾದರೆ ಈ ನುಣ್ಣಗಿದ್ದವರ ಬಣ್ಣಾನೇ ಬೇರೆ ಅಂದ ಹಾಗೆ ಆಯ್ತು.

ಡಾ : ಇವರೂ ಬಣ್ಣದವರೆ? ಚಿತ್ರಕಾರರು. ಇವರ ಬಣ್ಣಾನೇ ನುಣ್ಣಗೆ! ಇರಲಿ

(ವಾಚುನೋಡಿ) ಭಾರಿ ಲೇಟಾಯ್ತು ಹೋಗ್ತೇನೆ.
(ಹೊರಡುವನು ಕುಂಭ ಬರುವನು)

ಏನ್ರೀ? ಮತ್ತೇನು ಬಂದ್ರಿ? ಕಾಫೀ ಮುಗೀತೇ?

ಕುಂ : ಅಲ್ಲೋ. ಸಾಂಬಶಿವಯ್ಯಾ! ನಿಮ್ಮ ರಾಯರ ಕೈ ಅಷ್ಟೇಕೆ ಹಾಗೆ?

ಡಾ : ಎಲಾ ನಿಮ್ಮ! ಅವರ ಕೈ ನೋಡಲು ನೀವೇನು ಹಸ್ತ ಸಾಮುದ್ರಿಕ ಬಲ್ಲವರೋ? ಅವರೇ ನಿಮಗೆ ಕೈ ಕಾಣಿಸಿದರೋ?

ಕುಂಭ : ಅಲ್ಲ ಸರ್. ಹಾಗೇ ನೋಡಿದೆ ಅವರ ಕೈ ಮಹಾಹುರುಬುರುಕು. ಜಿಡ್ಡು ಬಿದ್ದದ್ದು! ಆಳು ಕೆಲಸ ಮಾಡುವವರ ಹಾಗೆ.

ಚಿದಂ : (ಸ್ವ) ಅಯ್ಯಯ್ಯೋ! (ಪ್ರಕಾಶ) ಅದೇನಿಲ್ಲ, ಅದೇನಿಲ್ಲ. ಆರ್ಟಿಸ್ಟರ ಕೈಯೇ ಹಾಗೆ. ಬಣ್ಣ ಆಸಿಡ್ಡು ಬ್ರಶ್ಯು ರಸಾಯನ ದಪ್ಪ ಹಾಳೆ ಟುವಾಲು - ಏನೆಲ್ಲ ಹಿಡಿದು ಬಳಸಿ ಬೆರಸಿ ಇದೋ ನನ್ನ ಕೈಯೂ ಹಾಗೆಯೇ ನೋಡಿ.

ಡಾ : ಅಂದರೆ ನೀನೂ ಆರ್ಟಿಸ್ಟ್ ಆಗಿ ಬಿಟ್ಟೆಯೋ ಏನು?

ಚಿದಂ : (ನಾಲಿಗೆ ಕಚ್ಚಿಕೊಂಡು) ಅಲ್ಲ ಹಾಗಲ್ಲ. ಆಗಲೇ ಹೇಳಿಲ್ಲವೇ. ನಾನೂ ರಾಯರೂ ಒಂದೇ ಅಂತ? ಅವರಂತೆ ಅವರೊಂದಿಗೆ ನಾನೂ ಬಣ್ಣಗಿಣ್ಣಕ್ಕೆ ಕೈ ಹಾಕುವವ! (ದೇಶಾವರಿ ನಗೆ).

ಡಾ : ನೀ ಗಿಣ್ಣಕ್ಕೆ ಕೈ ಬಾಯಿ ಹಾಕುವವನೇ! ಇರಲಿ. ಮಿಸ್ಟರ್ ಕುಂಭಕೋಣಂ, ಹೇಗೆ ರಾಯರ ಸ್ಥಿತಿ?

ಕುಂ : ಅದೇ ಹೇಳಲು ಬಂದೆ. ಬಣ್ಣನೆ ಮಾತೇ ಆಯ್ತು. (ಗಂಭೀರ) Serious, Sir very Serious! ಅವರ ಲಂಗ್ಸು-ಎರಡೂ ಲಂಗ್ಸು ಕೆಟ್ಟಿವೆ!

ಡಾ : ಹೀಗೋ! ಅಚ್ಚಾ!

ಚಿದಂ : ಅಚ್ಚಾ! My God!

ಡಾ : ಅಲ್ಲ, ನಾವೇನು ಮಾಡಲಿಕ್ಕೆ ಬರುತ್ತದೆ? ನಮ್ಮ ಕೆಲಸ ನಾವು ಮಾಡಿದಿವಿ.

ಚಿದಂ : ಅಂದರೆ ಮಾಡಿ ಮುಗಿಸಿದಿವಿ!

ಕುಂ : Yes. no hopesಉ!

ಚಿದಂ : ಇದೇನು ಡಾಕ್ಟರೇ! ಹೀಗೆ ಅಂದರೆ?

ಡಾ : (ಗಡುಸಾಗಿ) ನೋಡು. ನಾನು ಮದ್ದು ಕೊಡತ್ತೇನೆ. ಆಯುಷ್ಯವಲ್ಲ.

ಕುಂಭ : ಆಯುಷ್ಯವೇ ಇಲ್ಲದಿದ್ದರೆ ಮದ್ದು ಉಪಯೋಗವಿಲ್ಲ!

ಚಿದಂ : ಮತ್ತೆ ಆಯುಷ್ಯ ಇದ್ದರೆ ಮದ್ದು ಅಗತ್ಯವಿಲ್ಲ! ಹೀಗೇನು ನಿಮ್ಮ ಅಂಬೋಣ? ಆದರೆ ಡಾಕ್ಟರ. ರಾಯರು ಗಟ್ಟುಮುಟ್ಟು ಆಳು. ತುಂಬಾ ಆರೋಗ್ಯವಂತರು!

ಡಾ : ಅದೇ ಅದೇ ನಾ ಹೇಳೋದು. ಎಂಥ ಗಟ್ಟುಮುಟ್ಟು ಆರೋಗ್ಯವಂತನೂ ನ್ಯುಮೋನಿಯಾವಂತನಾದರೆ ೨೪ ತಾಸುಗಳಲ್ಲಿ ಅಂತಗೊಳ್ಳುವದೇನೂ ಆಶ್ಚರ್ಯವಲ್ಲ! ಸಾಂಬಶಿವಯ್ಯಾ! ನಿನ್ನ ಪ್ರಾಯಕ್ಕೆ ಹಾಗೆ ಗಟ್ಟುಮುಟ್ಟಾಗಿ ಆರೋಗ್ಯವಂತನಾಗಿರುವದೇ dangerous ವಿ. ನಡಿರಿ ಮಿಸ್ಟರ್ ಕೋಣಂ. ಒಮ್ಮೆ ಕೊನೆಯ ಪರೀಕ್ಷೆ ಮಾಡಿ ಹೋಗೋಣ.

(ಒಳಗೆ ಹೋಗುವರು)

ಚಿದಂ : ಇದೇನು ಬಂತು ಪೀಕಲಾಟ! ತಮಾಷೆ ಎಂಬುದೇ ಯಮಪಾಶ ಆಯ್ತಲ್ಲ! ಸಾಂಬಶಿವಯ್ಯಾ! ಅಯ್ಯೊ, ಸಾಂಬ ಸತ್ತರೆ ಶಿವಶಿವಾ ಅನ್ನೋದೆ! ಆದರೆ ಲೋಕಕ್ಕೆ ಸತ್ತವರು ಸಾಂಬ ಅಲ್ಲ, ಚಿದಂಬರರಾಯ! ಕಲಾವಿದ! ಅಳಬೇಕೋ-ನಗಬೇಕೋ!

**(ರಂಗದಲ್ಲಿ ಕತ್ತಲೆ ಹಬ್ಬುವದು-ಕಾಲಕ್ರಮಣ ಸೂಚಕ).**

## ದೃಶ್ಯ - ೨

**(ಮೂರನೆಯ ದಿನ ಮುಂಜಾನೆ, ಅದೇ ಕೋಣೆ ಸ್ವಲ್ಪ ಅಚ್ಚುಕಟ್ಟು. ಡಾಕ್ಟರು ಮತ್ತು ಚಿದಂಬರ.)**

ಚಿ : ಇನ್ನು ಸಾವಿನ ಬಗೆಗೆ ವಿಚಾರಣೆ ಆಗಬೇಕೋ?

ಡಾ : ವಿಚಾರಣೆ? ಛೇ-ಬೇಡವೇ ಬೇಡ.

ಚಿ : (ಉಸಿರೆಳೆದು) ಸರಿ. ಒಂದು ಪೀಡೆ ತೊಲಗಿತು. ಆ ಮೆಜಿಸ್ಟ್ರೇಟರ್ ಇದಿರು ನಾನು ನಿಲ್ಲುವದು! ಭಾರಿ ಕಷ್ಟವಿತ್ತು.

ಡಾ : ಏನು ಕಷ್ಟ? ಯಾಕೆ ನಿಲ್ಲಬೇಕು? ಸಾವು ತೀರ ಸಾಮಾನ್ಯ ಸಂಗತಿ.

ಚಿದಂ : ಅದು ಅಷ್ಟು ಸಾಮಾನ್ಯವೇ? ಸಾಯುವವನಿಗೆ ಸಾಮಾನ್ಯ ವಿರಬಹುದು. ಎಲ್ಲರೂ ಸಾಮಾನ್ಯವಾಗಿಯೇ ಸಾಯುತ್ತಾರೆ. ಆದರೆ ಹಿಂದೆ ಉಳಿದವರಿಗೆ ಅದು ಸಮಸ್ಯೆ! ಅಲ್ಲ? ಮಂಗಳವಾರ ಸಂಜೆ ಮನುಷ್ಯ ಕ್ಷೇಮವಾಗಿ ಇರುತ್ತಾನೆ. ಬುಧವಾರ ಮುಂಜಾನೆ? ನೆಗೆದು ಬೀಳುತ್ತಾನೆ!

ಡಾ : ಯಾರೂ ಜೀವವಿರುವವರೆಗೆ ಸಾಯುವದೇ ಇಲ್ಲ!

ಚಿದಂ : ಮತ್ತು ಸತ್ತಾಗ ಜೀವ ಉಳಿಯುವದಿಲ್ಲ! ಸಾಂಬಶಿವಯ್ಯ! ಸಾಂಬ ಶವಯ್ಯನಾಗಿರುತ್ತಾನೆ! ಇದನ್ನು ಸಂಬಾಳಿಸುವದು ಹೇಗೆ? **(ಕೈಗಡಿಯಾರ ನೋಡಿ)** ಇಕೋ ಈ ಅರಿಷ್ಟ ವಾಚಿನ ಹಾಂಗೆಯೇ! ಇದ್ದಕಿದ್ದಂತೆ ನಿಂತೇ ಹೋಗಿದೆ!

ಡಾ : ಹಾಗಾದರೆ ಅದು ನಮ್ಮ ಸ್ವದೇಶೀ ವಾಚೇ ಇರಬೇಕು. ಕೀಲಿ ಕೊಡದಿದ್ದರೆ ನಿಂತೇ ಬಿಡುತ್ತದೆ. ಅಲ್ಲೊ, ಭೂಪತಿ, ರಾತ್ರಿ ಇಡೀ ನೀನು ಜಾಗರಣ ಮಾಡಿದಿ. ನಿನ್ನಷ್ಟೇ ಸಂಭ್ರಮ ನಿನ್ನ ವಾಚಿಗೂ ಇರಬೇಕಿತ್ತೇ?

ಚಿದಂ : ಅದೂ ನಿಜ, ಆದರೂ-

ಡಾ : ಇದು ನೋಡು, ಸಾಂಬಾ ನಿನಗೆ ನಿದ್ದೆಗೆಟ್ಟು ತಲೆ ಕಾದಿದೆ. ನೀನು ತಿಂಡಿಗಿಂಡಿ ತಿಂದು ಎಷ್ಟು ಹೊತ್ತಾಯ್ತು?

ಚಿದಂ : ಗಿಂಡಿ ತಿನ್ನಲಿಲ್ಲ. ತಿಂಡಿ ತಿಂದು ಅರ್ದತಾಸು ಆಗಿಹೋಯ್ತು. ರಾತ್ರಿ ನರ್ಸಳ ಬಗ್ಗೆ ತಂದಿಟ್ಟ ಬ್ರೆಡ್ಡು ಬೆಣ್ಣೆ ಇತ್ತು. ನಾನೇ ತಿಂದು ಬಿಟ್ಟೆ!

ಡಾ : ಹಾಗಾದರೆ ನರ್ಸಳೋ?

ಚಿದಂ : ಅವಳು ಆಗಲೇ ಹೊರಟುಹೋದಳು.

ಡಾ : ಹಾಗಾದರೆ ಈಗ ನೀನು ಸ್ವಲ್ಪ ನಿದ್ದೆ ಮಾಡು. ಆದರೆ ರಾಯರ ಆಪ್ತರಿಂದ, ಅವರ ಆ ದೊಡ್ಡ ದಲ್ಲಾಳಿ ತಮ್ಮ ದಿಗಂಬರನಿಂದ ಉತ್ತರ ಬಂತೇ?

ಚಿದಂ : ಉತ್ತರ? ಯಾವದಕ್ಕೆ?

ಡಾ : ತಾರಿಗೆ. ಪರೀಕ್ಷೆ-ಪ್ರಶ್ನೆಗಲ್ಲ.

ಚಿದಂ : ಯಾರು ಬಿಟ್ಟವರು ತಾರು?

ಡಾ : ಥೂ ನಿನ್ನ! ತಾರು ಬಿಡಲಿಲ್ಲವೇ? ನಿನ್ನೆ ಮತ್ತೆ ನಾನು ನೆನಪು ಮಾಡಿದ್ದೆ.

ಚಿದಂ : ಹೌದು ಡಾಕ್ಟರ್. ಆದರೆ ಅದೇ ನಂಗೆ ಮರೆತು ಹೋಯ್ತು. ಅಲ್ದೆ ಆ ದಿಗಂಬರಯ್ಯನ ವಿಳಾಸ ಯಾರಿಗೆ ಗೊತ್ತು?

ಡಾ : ಅಲ್ಲೊ, ಮೂರ್ಖಾ. ಟೆಲಿಫೋನ್ ಡೈರೆಕ್ಟರಿ ಎಂಬ ಒಂದು ವಸ್ತುವಿದೆ. ಅದಾದರೂ ನಿಂಗೆ ಗೊತ್ತೋ? ಈಗಾದರೂ ಓಡಿ ಹೋಗಿ ತಂತಿ ಕಳುಹಿಸಿ ಬಾ, ಅಲ್ಲ, ಚಿತ್ರಕಾರ ಚಿದಂಬರ ರಾಯರೇನು ಸಾಮಾನ್ಯರೇ? ಅವರ ಸಾವು ಏನು ಸಾಮಾನ್ಯವೇ? ಅವರು ನನ್ನ ಕೈಯಲ್ಲೇ ಸತ್ತರು. ಅಂದಾಗ ನನಗೂ ಎಷ್ಟು ಖ್ಯಾತಿ!

ಚಿದಂ : ಆದರೆ ಆ ದಿಗಂಬರಯ್ಯರಿಗೂ ನಮ್ಮ ಚಿದಂಬರರಾಯರಿಗೂ-

ಡಾ : ಹೌದು, ಹೌದು. ಅದೆಲ್ಲ ನಂಗೆ ಗೊತ್ತು ನೀನೇ ನಿನ್ನೆ ಹೇಳಿದ್ದೆ. ಅವರ ಹಾಳು ಜಗಳದ ಹಳೆಯ ರಗಳೆ!

ಚಿದಂ : ಒಬ್ಬರ ಮೋರೆ ಒಬ್ಬರು ನೋಡೋದಿಲ್ಲಾ ಅಂತ ಆ ದಿಗಂಬರಯ್ಯಾ -

ಡಾ : ಈಗಲೂ ನೋಡಬೇಕಾಗಿಲ್ಲ. ಆದರೂ ಅಣ್ಣ ಸತ್ತ ಸುದ್ದಿ ತಮ್ಮಿಗೆ ತಿಳಿಸದಿದ್ದರೆ ಹೇಗೆ? ಅವನು ನಾಳೆ ಕೇಳಿದರೆ ಏನಂದಾನು? ಸತ್ತಂವ ಗೆದ್ದ. ನಾವೇ ಇದ್ದವರು ಸತ್ತಂತೆ!

ಚಿದಂ : ಇಲ್ಲಿ ನೋಡಿ ಡಾಕ್ಟರ್. ಇಲ್ಲಿ ಏನೋ ಪ್ರಮಾದ ಆಗಿದೆ -

ಡಾ : ಏನು? ಏನು ಪ್ರಮಾ -

ಚಿದಂ : ನಾ-ನಾನು -- **(ಬೆಲ್ಲು)**

ಡಾ : ಮಾರಾಯಾ ನನ್ನ ಮಾತು ಕೇಳು. ಯಾವ ಪ್ರಮಾದವೂ ಆಗಿಲ್ಲ. ಸಾವಿಗೆ ಮದ್ದೇ ಇಲ್ಲ. ರೋಗಕ್ಕೆ ಮದ್ದು. ಅದನ್ನು ಕೊಟ್ಟಾಯ್ತು. ಆಸೆ ಬಿಟ್ಟಾಯ್ತು. ಏನಾದರೂ ಹುಚ್ಚಾಪಟ್ಟೆ ಆಡಬೇಡ. ರಾಯರು ಸತ್ತದ್ದೇ ಪ್ರಮಾದವೋ? ಹೌದು. ನಮಗೆ ಡಾಕ್ಟರಿಗೆ ನಮ್ಮ ಮದ್ದಿಗೆ ಒಂದಿಷ್ಟು chance ಕೊಡಬೇಕಿತ್ತು. ಇವರಿಗೇಕೆ ಹೀಗೆ ಸಾಯುವ ಅವಸರ? ನಿನ್ನ ತಲೆಕೆಟ್ಟಿದೆ. ಹೋಗು ಸ್ವಲ್ಪ ಅಡ್ಡಾಗು. ಇಲ್ಲದಿದ್ದರೆ ನೀನೂ ಬೇನೆ ಬೀಳುವಿ. ರಾಯರನ್ನೇ-ಸ್ವಾಮಿಭಕ್ತ ನೀನೂ ಹಿಂಬಾಲಿಸುವಿ! ನಾನು ಆ ದಿಗಂಬರಯ್ಯರನ್ನು ಫೋನಿನಲ್ಲಿ ಮಾತಾಡಿಸಿ ಬರುತ್ತೇನೆ. - **(ಮತ್ತೆ ಬೆಲ್ ಸದ್ದು)** ಇದೋ ಮತ್ತೆ ಸದ್ದು ಯಾರೋ ಪದಗ್ರಹಸ್ಥ ಬಂದರು! ಹೋಗಿ ನೋಡಿ ಬರ್ತೇನೆ. **(ಡಾಕ್ಟರ್ ಹೋಗುವನು)** ನೀನು ನಿಧಾನಿಸು.

ಚಿದಂ : ಹೂಂ (ಉಸಿರು ಬಿಟ್ಟು) ಸತ್ತವನೇ ಸುಖಿ! ಇದ್ದವ ಸಿಕ್ಕಿಬಿದ್ದ ಹಕ್ಕಿ! ಇನ್ನು ಯಾರ್‍ಯಾರನ್ನು ಇದುರಿಸಬೇಕೋ! .... **(ಹಣೆ ಚಪ್ಪಿಕೊಳ್ಳುತ್ತಾನೆ)**

**(ಡಾಕ್ಟರನ ಪ್ರವೇಶ. ದಿಗಂಬರಯ್ಯನೊಂದಿಗೆ).**

ಡಾ : ಹೌದು, ದಿಗಂಬರಯ್ಯನವರೇ! ಆಕಸ್ಮಿಕ ತೀರ ಆಕಸ್ಮಿಕ. ಆಗ ನಾನೂ ನನ್ನ ಅಸಿಸ್ಟಂಟೂ ನಮ್ಮ ನರ್ಸೂ ಮೂವರು ಇಲ್ಲಿ ಇದ್ದಿವಿ. ನಮ್ಮ ಮುಂದೇ ರಾಯರ ಈ ಸ್ಟಂಟು! ಈತ ಸಾಂಬಶಿವ ಎಂತ, ರಾಯರ ಸರ್ವೆಂಟು.

ದಿಗಂಬ : (ಸುತ್ತಲೂ ನೋಡಿ) ಇದೇನು ಮನೆಯೋ ಮಠವೋ ಗೋಡೋನೋ!

ಚಿದಂ : ಸರಿ ಗೋಡೋನೇ! Going down ಉ!

ದಿಗಂ : ಆಂ! ಏನಂದಿ?

ಚಿದಂ : ನಾ, ನಂದಿ ಅಲ್ಲ. ಸಾಂಬಶಿವಯ್ಯ.

ಡಾ : ಸಾಂಬಾ ಇವರೇ ದಿಗಂಬರಯ್ಯ. ನಿನ್ನ ಚಿದಂಬರ ರಾಯರ ತಮ್ಮ-ಏಕಮೇವ ಉತ್ತರಾಧಿಕಾರಿ!

ದಿಗಂ : ನೀನು ಕೇಳಿರಲೇಬೇಕು, ನನ್ನ ವಿಷಯ.

ಚಿದಂ : ಕೇಳಿದ್ದೇನೆ. ಬಹಳ ಸಲ ಕೇಳಿದ್ದೇನೆ. ನೀವು ೧೨ವರ್ಷದವರಿದ್ದಾಗ ಅಣ್ಣ ಜುಟ್ಟ ಕತ್ತರಿಸಿ ಅವರದೇ ಜೇಬಿನಲ್ಲಿ ಇಟ್ಟಿದ್ದರಂತೆ! ಆಂ! ಏನಾಯ್ತು? ನನ್ನನ್ನು ಏಕೆ ದುರುಗುಟ್ಟುತ್ತೀರಿ?

ದಿಗಂ : ಏ ಜವಾನಾ! ಅಲ್ಲ ನೀನೂ ನಮ್ಮಣ್ಣನ ಹಾಂಗೇ ಕಾಣ್ತೇಯಲ್ಲ!

ಡಾ : (ನಕ್ಕು) ಹೆ.ಹೆ.ಹೆ! ಒಬ್ಬರಂತೆ ಒಬ್ಬರು ಕಾಣ್ತಾರೆ ಬಿಡಿ.

ಚಿದಂ : ಅಲ್ಲ ಜುಟ್ಟ ಸಿಕ್ಕಿತು. ಆದರೆ ಜಗಳಾಡಿದ್ದೇಕೆ? ಕಿತ್ತ ಜುಟ್ಟ ತಿರುಗಿ ತಲೆಗೆ ಅಂಟಿಸಲಿಕ್ಕೆ ಆಗಲಿಲ್ಲವಂತೇ?

ದಿಗಂ : (ಗಂಭೀರ ದನಿ) ಏ ಜವಾನ! ಜೋಕೆ! ಅಣ್ಣ ಜುಟ್ಟ ಕತ್ತರಿಸಿದರೆ ತಮ್ಮ ನಿನ್ನ ನಾಲಿಗೆನೇ ಕತ್ತರಿಸಬಲ್ಲ ಹಾಂ! ನಿನ್ನ ಮಾತು ರೀತಿ ವಿಶೇಷ ಸಭ್ಯ ಕಾಣುವದಿಲ್ಲ! ನನ್ನ ಅಣ್ಣನೊಂದಿಗೆ ನೀನು ಹೇಗೂ ನಡೆದಿರಬಹುದು. ಆದರೆ ಅಂಥ ಸಲಿಗೆ ವಾಚಾಳಿತನ ನನ್ನೊಂದಿಗೆ ನಡೆಯೋ ಹಾಂಗಿಲ್ಲ, ಹಾಂ. ನೋಡು, ನೀನು ನನ್ನ ಜವಾನನಲ್ಲ.

ಚಿದಂ : ಸಾರಿ, ಸಾರ್. ಆದರೆ ನಿಮಗೆ ಹೇಗೆ ಗೊತ್ತಾಯಿತು. ನಮ್ಮ ರಾಯರ ವರ್ತಮಾನ?

ದಿಗಂ : ಈಗೇನು ವರ್ತಮಾನ? ಅದೀಗ ಭೂತ. ಪೂರ್ಣ ಭೂತ! ಅಲ್ಲೊ ಪೆಡಂಭೂತ, ಅದು ನನಗೆ ಗೊತ್ತಾಗಬಾರದಾಗಿತ್ತೆ? ನಮ್ಮಣ್ಣ ನಿಂಗೆ ಹಾಗೆ ಗೊತ್ತಾಗಬಾರದೆಂದು ಹೇಳಿದ್ದೇನೇ? (ಚಿದಂಬರ ಮೌನ) ಹೌದೋ ಅಲ್ಲೊ?

ಚಿದಂ : (ಅದೇ ಜಾಡು ಹಿಡಿದು) ಹೌದೆನ್ನಿ.

ದಿಗಂ : ಸರಿ ನಂಗೊತ್ತು. ಹದ್ದಿನ ಬಾಯಿಗೆ ಬಿದ್ದರೂ ಜಿದ್ದಿನ ಬಾಯಿ ಬಿಡೂದಿಲ್ಲ ನಮ್ಮಣ್ಣ! ಅದೇ ಅವನ ಬಡಾಯಿ!

ಚಿದಂ : ಹಾಂ! ಅಂಥ ಆಸಾಮಿಯೇ? ಅದಕ್ಕೆ ನಿಮಗೆ ಆತ ತಂತಿ ಬಿಡಲಿಲ್ಲ!

ದಿಗಂ : ಆದರೆ ನಾವೆಲ್ಲ ಬಿಡ್ತೆವೆ ಅವನಿಗೆ? ನನಗೆ ಗೊತ್ತಾಗದೇ ಹೋಗುತ್ತದೆಯೇ? ಇದ್ದೋ ಈ 'ಪ್ರಾತರ್ವಿಧಿ' ಪತ್ರಿಕೆ. ಚಿದಂಬರಣ್ಣನ ಸುದ್ದಿ ಬಂದಿದೆ. ಅಲ್ಲೊ, ನಂಗೆ ಅವನ ದಾಂಡಿಗ ತಮ್ಮಂಗೆ ಈ ಸುದ್ದಿ ತಿಳಿಸಲಿಲ್ಲ. ಆದರೆ ಈ ಮೂರುಕಾಸಿನ ಮುಂಜಾವಿನ ವಿಧಿಗೆ ಅದನ್ನು ಕೊಟ್ಟಿಯಲ್ಲೋ!

ಚಿದಂ : ಇಲ್ಲ. ನಾನು ಯಾವ ಸುದ್ದಿಗಾರನೊಂದಿಗೂ ಮಾತಾಡಲಿಲ್ಲ. ಇಡೀ ಜೀವನದಲ್ಲಿಯೇ ಈ ಪತ್ರಿಕಾ ಸುದ್ದಿಗಾರರ ಮುಸುಡು ನೋಡಿಲ್ಲ!

ದಿಗಂ : ಇಡೀ ಜೀವನ ಮುಗಿದದ್ದು ನಿನ್ನ ರಾಯರದು. ಸತ್ತವರು ನೀನಲ್ಲ.

ಡಾ : (ಮುಂದೆ ಬಂದು) ಹಾಂ. ಹೀಗಾಗಿರಬೇಕು. ಅಯ್ಯನೋರೇ ಈ ಸುದ್ದಿ ನನ್ನ ಅಸಿಸ್ಟಂಟ್ ಕುಂಭಕೋಣಂ ಕೊಟ್ಟಿರಬೇಕು. ಅವನ ತಮ್ಮ ಈ 'ಪ್ರಾತಃರ್ವಿಧಿ'ಯ ಸುದ್ದಿಗಾರ. ಈ ಸುದ್ದಿಗಾರರಿಗೇನು? ಯಾರು ಇದ್ದರೇನು? ಬಿದ್ದರೇನು? ಸತ್ತರೇನು? ಯಾವ ಸುದ್ದಿಯೂ ಸಿಕ್ಕರೆ ಸಾಕು. ಅವರಿಗೆ ಅದೊಂದು ಹಬ್ಬ! ಆಹಾರಕ್ಕೆ ತಕ್ಕ ಲದ್ದಿ! ಪ್ರಾರಬ್ಧಕ್ಕೆ ತಕ್ಕಬುದ್ಧಿ! ಆದದ್ದೆಲ್ಲ ಸುದ್ದಿ!

ಚಿದಂ : ನೋಡಿಕೊಳ್ಳಿ ಡಾಕ್ಟರೇ. ಪತ್ರಿಕೆಯಲ್ಲಿ ನಿಮ್ಮ ಸುದ್ದಿಯೂ ಬಂದಿದೆಯೋ ನೋಡಿಕೊಳ್ಳಿ!

ಡಾ : ಅಂದರೆ ನಾನು ಸತ್ತಿದ್ದೇನೇ?

ಚಿದಂ : ಅಲ್ಲ ನೀವು ಸತ್ತವರಿಗೆ ಮದ್ದು ಕೊಟ್ಟವರು!

ಡಾ : ಸತ್ತವರಿಗೆ ಯಾರು ಕೊಡ್ತಾರೆ ಮದ್ದು? ಸಾಯೂ ಮುಂಚೆಯೇ ಕೊಡೋದು.

ದಿಗಂ : ಇರಲಿ ನಿಮ್ಮ ಈ ಮಹಜರು. ನಮ್ಮಣ್ಣನ ಶವ ಎಲ್ಲಿ?

ಚಿದಂ : ಅಲ್ಲಿ ಮಹಡಿಯ ಮೇಲೆ ಹಿಂದಿನ ಕೋಣೆಯಲ್ಲಿ ತೋರಿಸ್ತೇನೆ ಬನ್ನಿ.

ದಿಗಂ : ನೀ ಬೇಡ. ನಾನೊಬ್ಬನೇ ಹೋಗಿ ನೋಡುವೆ.

(ಹೋಗುವನು)

ಡಾ : ನಾನೂ ಹೊರಡುತ್ತೇನೆ. ಏ-ಈ ಕಾರ್ಡು ಆ ಅಮ್ಮನೋರಿಗೆ ಕೊಡು-visiting card. ಅಗತ್ಯ ಬಿದ್ದರೆ ನನಗೆ ಕರೆಯಲು ಹೇಳು, ಬರ್ತೇನೆ.

ಚಿದಂ : ಅಲ್ಲ. ಡಾಕ್ಟರರೇ ಒಂದು ಮಾತು.

ಡಾ : ಮತ್ತೇನು ಮಾತು?

ಚಿದಂ : ನಾ-ನಾನು-ನಂಗೆ-

ಡಾ : ನಂಗೆ ವ್ಯಾಕರಣ ಗೊತ್ತು. ನಾ ಸರ್ವನಾಮ ನಡಯಿಸಬಲ್ಲೆ. ನೀನು ಸರ್ವರಿಗೂ ನಾಮ ಎಳೆಯುವ ಪೆದ್ದ. ಮತ್ತೆ ನಾ-ನಾನು ಅನ್ನಬೇಡ. ಅದು ಕೆಟ್ಟ ಅಹಂಕಾರ. ಕನಕದಾಸರಿಗೆ ಕೇಳು. ಇದು ನೋಡು. ನೀನು ಜವಾನ ಆಗಲು ಪೂರಾ ನಾಲಾಯಕು. ರಾಯರಿಗೆ ಹೇಗೋ ಸೇರಿ ಹೋದಿ. ಅಂದರೆ ನೀ ಸೇರಿದೆ ಅವರು ಹೋದರು. ನೀನು ಜವಾನ ಅಲ್ಲವೇ ಅಲ್ಲ. ಈ ಜವಾನಿಕೆ ಬರಿ ಸೋಗು. ಸದ್ಯ ಹೋಗಿ ಮಲಗು. ಆಮೇಲೆ ಎದ್ದು ಬೇರೆ ಎಲ್ಲಾದರೂ ಏನಾದರೂ ಮಾಡು. ಜವಾನಿಕೆಗೆ ನೀನು ಹೇಳಿ ಮಾಡಿಸಿದ ಆಳಲ್ಲ, ಹಾಂ. **(ಹೋಗುವನು)**

**(ಸ್ವಲ್ಪ ಹೊತ್ತು ಸ್ತಬ್ಧ )**

ಚಿದಂ : ' ನಾ ಮಾಡಿದ ಕರ್ಮ ಬಲವಂತವಾದರೆ ನೀ ಮಾಡುವಿಯೇನೊ ಹರಿಯೇ! - ಇದು ಸರಿಯೇ?

**(ದಿಗಂಬರ ಬರುತ್ತಾನೆ)**

ದಿಗಂ : ಏನೋ? ಯಾವದು ಸರಿಯೋ ಎಂದಿ? **(ಹತ್ತಿರ ಸರಿಯುತ್ತಾನೆ)**

ಚಿದಂ : ಅಲ್ಲ ತುಸು ಆಚೆಗೆ ಸರಿ ಎಂದೆ! ಹೆಣ ಮುಟ್ಟಿ ಬಂದಿರಲ್ಲ! ಇರಲಿ. ಅಣ್ಣನವರ ಗುರುತು ಹತ್ತಿತೇ? (ತುಸು ಗಾಬರಿಯ ಪ್ರಶ್ನೆ.)

ದಿಗಂ : ಅಯ್ಯೊ ಸಾಂಬಾ ನೀನು ಶುಂಭ. ೧೨ ವರ್ಷದ ಆ ಹುಡುಗನ ಚರ್ಯೆ ಈಗ ೩೧ ದಾಟಿದಾಗ ಇರುತ್ತದೆಯೇ? ಆದರೂ ನನಗೆ ಅವನ ಪಕ್ಕಾ ಗುರುತು ಹತ್ತಿತು! ಹೋ!

ಚಿದಂ : **(ಸ್ವಗತ)** ಎಲಾ ಖದೀಮ! **(ಪ್ರಕಟ)** ಗೊತ್ತಾಯ್ತು ಗೊತ್ತಾಯ್ತು. ೨೦ ವರ್ಷ ಹಿಂದೆ ನೀವಿಬ್ಬರೂ ಕಡಿದು ಕಚ್ಚಿ ಕಾದಾಡಿದ ಗುರುತು. ಅಣ್ಣನ ಮೈಮೇಲೆ ಅಲ್ಲಲ್ಲಿ ಇನ್ನು ಉಂಟೆಂದಾಯಿತು **(ನಗುತ್ತಾನೆ.)**

ದಿಗಂ : ಏ ಜವಾನಾ. ಇದ್ನೋಡು ನಾನೂ ನೀನೂ ಈಗಲೇ ಒಂದು ತೀರ್ಮಾನಕ್ಕೆ ಬರುವದು ಒಳಿತು. ಅಣ್ಣ ನಿನಗೆ ಎಷ್ಟು ಸಂಬಳ

ಕೊಡುತ್ತಿದ್ದ? ನಿನ್ನ ಈ ಅದ್ಭುತ ಸಲಿಗೆ ಸೇವೆಗೆ? ಎಷ್ಟು?

ಚಿದಂ : ಸಂಬಳ? ಎಷ್ಟು?

ದಿಗಂ : ಹೂಂ ಸಿಂಬಳ ಅಲ್ಲ ಸಂಬಳ. ಎಷ್ಟು ಸಂಬಳ ತೆರುತಿದ್ದ?

ಚಿದಂ : (ಸ್ವ) ಅಯ್ಯೊ! ಏನು ಹೇಳಲಿ? ಹಾಂ! ತಿಂಗಳಾ ೬೦ರೂಪಾಯಿ.

ದಿಗಂ : ನೀನು ಕೊನೆಯ ಸಂಬಳ ಯಾವಾಗ ಪಡೆದಿ?

ಚಿದಂ : ಮೊ. ಮೊ ಮೊನ್ನೆ.

ದಿಗಂ : **(ಜೇಬಿನಿಂದ ಒಂದು ಪತ್ರ ಮತ್ತು ನೋಟಿನ ಕಟ್ಟ ತೆಗೆದು)** ಇದೋ ಇಲ್ಲಿ ಒಂದು ತಿಂಗಳ ಸಂಬಳ ಇದೆ. ಅದಕ್ಕಿಂತ 40 ರೂಪಾಯಿ ಹೆಚ್ಚೇ ಇದೆ - ಫಕ್ಕನೆ ಕೆಲಸದಿಂದ ಕಿತ್ತು ಹಾಕಿದ್ದಕ್ಕೆ. ತೆಗೆದುಕೋ-ಮತ್ತೆ ಈ ನೋಟೀಸು! **(ಕೊಡಲು ಕೈ ಚಾಚುವನು).**

ಚಿದಂ : ಛೇ. ಛೇ! ಇದೇನು ಅಧ್ವಾನ! ತುಸು ಕೇಳಿ.

ದಿಗ : ಅಧ್ವಾನವೇನು? ಮುಚ್ಚುಬಾಯಿ! ತೆಗೆದುಕೋ ನೋಟೀಸು-ಹೂಂ! **(ಚಿದಂಬರ ತೆಗೆದುಕೊಳ್ಳುತ್ತಾನೆ)** ಇನ್ನು ನಿನ್ನ ಗುಡಿಚಾಪೆ ಕಟ್ಟಿಕೊಂಡು ಹೊರಡು - ಒಂದು ಗಂಟೆಯೊಳಗೇ ಈ ಮನೆ ಬಿಡಬೇಕು! ಹೂಂ!

ಚಿದಂ : **(ತಲೆ ಕೆದರಿಕೊಂಡು)** ನಾ-ನಾನೇ?

ದಿಗಂ : ಹೌದು ಹೌದು ನೀನೇ. ಮತ್ತೆ ಯಾರು? ನಿನ್ನ ರಾಯರು ಆಗಲೇ ಕಟ್ಟಿದರು. ಹೋದರು. ನೀನೂ ಹೋಗು ಅವರ ಬೆನ್ನಿಗೆ! ಅವರ ನಂಬಿಗೆಯ ಆಳು! ವಾದಿಸಬೇಡ. ನಿನ್ನ ರಾಯರು ತಮ್ಮ ಕಾಗದ ಪತ್ರ ಎಲ್ಲ ಎಲ್ಲಿ ಯಾವ ಬ್ಯಾಂಕಿನಲ್ಲಿ ಇಡುತ್ತಿದ್ದರು?

ಚಿದಂ : ಯಾವ ಬ್ಯಾಂಕು? ಎಲ್ಲೂ ಇಲ್ಲ!

ದಿಗಂ : ಎಲ್ಲೂ ಇಲ್ಲ? ಹಾಗಂದರೇನೋ?

ಚಿದಂ : ಅವರು ಅದೆಲ್ಲ ತನ್ನ ಜತೆಯಲ್ಲಿಯೇ ಜೇಬಿನಲ್ಲಿಯೇ ಇಡುತ್ತಿದ್ದರು.

ದಿಗಂ : ಏನಂದಿ? ಜೇಬಿನಲ್ಲಿ? ದೊಡ್ಡ ಔರಾಂಗಜೇಬಾ! ಪ್ರವಾಸದಲ್ಲಿ ಇದ್ದಾಗಲೂ?

ಚಿದಂ : ಹೌದು. ಯಾಕೆ ಇಟ್ಟುಕೊಳ್ಳಬಾರದು? ಜೇಬೂ ಜತೆಯಲ್ಲಿಯೇ-

ದಿಗಂ : ಓ, Shut up. ಈ ಲಗೇಜು ಯಾರದು?

ಚಿದಂ : **(ಮೌನ)**

**ದಿಗಂ :** ಸುಮ್ಮನೇಕೆ ನಿಂತಿ? ಮಾತಾಡು.

**ಚಿದಂ :** Shut up ಅಂದಿರಿ! ಹೇಗೆ ಮಾತಾಡಲಿ?

**ದಿಗಂ :** ಮತ್ತೆ ಈಗ ಹೇಗೆ ಮಾತಾಡಿದಿ? ಈ ಲಗೇಜು?

**ಚಿದಂ :** ನಂದು.

**ದಿಗಂ :** ಎಲ್ಲಾ ನಿಂದೇ?

**ಚಿದಂ :** ಅಂದರೆ?

**ದಿಗಂ :** ಇದು ನಿಂದೋ, ನನ್ನ ಅಣ್ಣಂದೋ? ಸರಿಯಾಗಿ ಹೇಳು.

**ಚಿದಂ :** ನಿಮ್ಮಣ್ಣಂದು! (ದಿಗಂಬರ ಅದನ್ನು ಜಗ್ಗಾಡುತ್ತಾನೆ) ಹಾಂ ಹಾಂ (ಸಿಟ್ಟಗೆದ್ದು) ಜೋಕೆ! ಅದರಲ್ಲಿ ಚಿತ್ರಗಳಿದ್ದಾವೆ! ಅಯ್ಯೋ! ss

**ದಿಗಂ :** ಸುಮ್ಮನಿರು. ನಾ ನೋಡಿಕೊಳ್ಳುತ್ತೇನೆ. ನಿನಗೇಕೆ ಗಾಬರಿ? ನೀನೇ ಚಿತ್ರಕಾರನೇ? - ಮತ್ತೆ ಇದೇನು?

**ಚಿದಂ :** ಅದು Type Writerಉ

**ದಿಗಂ :** ಚಿತ್ರಗಾರನಿಗೇಕೆ Type writerಉ?

**ಚಿದಂ :** ಅದು ರಾಯರದಲ್ಲ. ಅವರ ಜವಾನಂದು.

**ದಿಗಂ :** ಅಂದರೆ ನಿಂದೇ ತಾನೇ? ಜವಾನಂದಂತೆ! ಮತ್ತೆ ನೀನು ಯಾರೋ!

**ಚಿದಂ :** ಹೌದು, ನಂದೆ ಅನ್ನಿ.

**ದಿಗಂ :** ಹಾಗೆ ಮುಂಚೆ ಏಕೆ ಹೇಳಲಿಲ್ಲ?

ಅಲ್ಲೊ, ನಿಂಗೇಕೋ ಟೈಪರೈಟರು?

**ಚಿದಂ :** (ಚಾಕಾಶಿ ತಾಳದೆ) ನಿಮಗೇಕೆ ಅದರ ಉಸಾಬರಿ?

**ದಿಗಂ :** ಏ! ಮುಚ್ಚು ಬಾಯಿ. ಕೇಳಿದಷ್ಟಕ್ಕೇ ಉತ್ತರ ಬೊಗಳು! ಇಲ್ಲವಾದರೆ ಕತ್ತಿಗೆ ಕೈಹಾಕಿ ಹೊರಗೆ ದಬ್ಬುತ್ತೇನೆ ರಸ್ತೆಗೆ!

**ಚಿದಂ :** ಹಾಗಲ್ಲ ಅಯ್ಯನೋರೇ. ಇದು ನೋಡಿ, ನಾನು ಏನೋ ಹೇಳೋದಿದೆ-

**ದಿಗಂ :** You. Shut up. ಕೇಳಿದ್ದಕ್ಕೆ ಉತ್ತರ ಕೊಡು. ಇದೇನು ಬ್ಯಾಗು! ರಾಯರ ಕಾಗದ ಪತ್ರಗಳೆಲ್ಲ ಬ್ಯಾಗಿನಲ್ಲಿವೆಯೇ?

**ಚಿದಂ :** ಹೌದು.

ದಿಗಂ : ಅದರ ಕೀಲಿ?

ಚಿದಂ : ಇಲ್ಲಿದೆ (**ಸಾವಕಾಶ ಹೊರಗೆ ತೆಗೆಯುತ್ತಾನೆ**).

ದಿಗಂ : ಅಂದರೆ ನಮ್ಮಣ್ಣನ ಕೀಲಿ ನೀನೇ ಇಟ್ಟುಕೊಳ್ತಿದ್ದೀಯಾ? ಅವನ ಬಟ್ಟೆನೂ ನೀನೇ ತೊಡುತ್ತಿರಬೇಕು. (**ಬ್ಯಾಗು ತೆರೆಯುತ್ತ**) ಅರೇ! ಇಲ್ಲಿ ಕೆಲವು ಹಣ ಇದೆ!

ಚಿದಂ : ಕೆಲವಲ್ಲ! ಬಹಳವಿದೆ (**೧೨೦೦ ರೂಪಾಯಿ**).

ದಿಗಂ : ಅದು ನಿಂಗೆ ಹೇಗೆ ಗೊತ್ತು?

ಚಿದಂ : (**ಥಕ್ಕನೆ**) ಅದು ನಂದೇ!

ದಿಗಂ : ನಿಂದೇ? ನಿನ್ನ ಹಣ. ಇಷ್ಟು ಹಣ ಅಣ್ಣನ ಬ್ಯಾಗಿನಲ್ಲಿ! ಬ್ಯಾಗಿನ ಕೀಲಿ ನಿನ್ನ ಜೇಬಿನಲ್ಲಿ!

ಚಿದಂ : ಹೌದು, ಏನು ತಪ್ಪು?

ದಿಗಂ : ಹಾಗಾದರೆ ನಮ್ಮಣ್ಣ ನಿನ್ನ ಹಣ ಪಡೆದುಕೊಂಡ ಬಗ್ಗೆ ಪಾವತಿ ಎಲ್ಲಿದೆ? ಅದನ್ನು ಕಾಣಿಸಿ ನಿನ್ನ ದುಡ್ಡು ನೀನು ತೆಗೆದುಕೋ, ಹಾಂ! ಆತನಕ ಇದು ಕುಟುಂಬದ ಸೊತ್ತು. - - ಇದೇನು ಕಡ್ತ?

ಚಿದಂ : ಅವು ಕಾಗದ ಪತ್ರಗಳು - ಅವೂ ನನ್ನವೇ!

ದಿಗಂ : (**ತೆರೆದು ಓದುತ್ತ**) ಯಾರೋ ಹೆಂಗಸು ಬರೆದಂತಿದೆ. 'ನನ್ನ ಪ್ರಿಯತಮಾ' - ಅಲ್ಲೊ! ನೀನು ಈಕೆಯ ಪ್ರಿಯ ತಮ್ಮನೋ?

ಚಿದಂ : ಇಲ್ಲಿ ಕೊಡಿ. ಹೆಚ್ಚು ಮಾತುಬೇಡ!

ದಿಗಂ : ಕೊಡೋದಿಲ್ಲ. ಇವನ್ನು ಸುಟ್ಟು ಹಾಕ್ತೇನೆ!

ಚಿದಂ : ಅಡ್ಡಿ ಇಲ್ಲ. ಇಕೋ ಕಡ್ಡಿ ಕೊರೆದು ಕೊಡುತ್ತೇನೆ-

ದಿಗಂ : ತಡೆ. ಇದೇನು? ಮೃತ್ಯು ಪತ್ರ! ಇದು ಹಿಂದಿನಿಂದ ನೋಡೋಣ. ಬೇಡ. ನಿನ್ನ ಬಗೆಗೆ ಏನು ಇದೆಯೋ ಓದೋಣ. (**ಓದುತ್ತಾನೆ**) - ಮತ್ತು ನನ್ನ ಜವಾನ ಉದ್ದಂಡ ನಿದ್ದಂಡಿ. ಪರಮಲಫಂಗ, ಆದರೂ ಉದ್ದಕ್ಕೂ ನಂಬಿಗೆಯಿಂದ ಚಾಕರಿ ಮಾಡಿಕೊಂಡು ಬಂದಿದಾನೆ-ಸಾಂಬಶಿವಯ್ಯ. ಇವನಿಗೆ ತಿಂಗಳಿಗೆ 60 ರೂಪಾಯಿ - (**ಚಿದಂಬರನಿಗೆ ದೊಡ್ಡ ನಗೆ**).

ದಿಗಂ : ನಗ್ತಿಯೇನೋ? ಪರಮಲಫಂಗ ನಿದ್ದಂಡಿ ಎಂಬ ಸರ್ಟಿಫಿಕೇಟಿಗೋ! ನಿಜವಾಗಿ ನೋಡಿದರೆ ನೀನು ಈ ಮಾಸಾಶನ ಮುಟ್ಟಲೇಕೂಡದು

- ಹೀಗೆಲ್ಲ ಹೊಗಳಿಕೊಂಡು ಹೊನ್ನಶೂಲ ಏರಲಿಕ್ಕೆ! **(ಮೃತ್ಯುಪತ್ರ ಮಡಚಿ ಜೇಬಿನಲ್ಲಿ ಇಟ್ಟುಕೊಳ್ಳುತ್ತಾನೆ.)** ಇನ್ನು ಡಾಕ್ಟರರು ಎಲ್ಲಿ?

**ಚಿದಂ :** ಇಕೊಳ್ಳಿ ಅವರ ಕಾರ್ಡು.

**ದಿಗಂ :** ಅವರನ್ನೇಕೆ ತಡೆಯಲಿಲ್ಲ?

**ಚಿದಂ :** ಅವರಿಗೆ ಶಾಪ್ ಇದೆ. ಅಲ್ಲಿ ಪೇಶಂಟ್ಸು ಶಾಪ ಹಾಕುತಿದ್ದಾರೆ.

**ದಿಗಂ :** ಎಲ್ಲಿದೆ ಅವರ ಶಾಪ್?

**ಚಿದಂ :** ಇಲ್ಲಿಯೇ ಮೂರು ಬ್ಲಾಕು ಆಚೆಗೆ.

**ದಿಗಂ :** **(ಎದ್ದು)** ಹಾಗಾದರೆ ನಾ ಡಾಕ್ಟರರನ್ನು ಕಂಡು ಬರ್ತೇನೆ. ಅಣ್ಣನ Death Certificateಗೆ ಅವರ ಸಹಿಬೇಕು. ಆದರೆ ನೀ ನಿನ್ನ ಗಂಟುಮೂಟೆ ಕಟ್ಟಿದಂತೆ ಇಲ್ಲ! **(ವಾಚು ನೋಡಿ)** ನಿನಗಿನ್ನೂ ಅರ್ಧಗಂಟೆ ಅವಕಾಶ. ಅಷ್ಟರಲ್ಲಿ ನಾನು ಬರ್ತೇನೆ. ಹೋಗೋಮುಂಚೆ ನಾನೊಮ್ಮೆ ಬಿಚ್ಚಿ ನೋಡಬೇಕು -

**ಚಿದಂ :** ಹೌದೇ? ಅದಕ್ಕೇ ಅವನ್ನು ಕಟ್ಟಲಿಲ್ಲ. ಬಂದ ಮೇಲೆ ನಿಮ್ಮಮುಂದೇನೇ ಮೂಟೆ ಕಟ್ತೇನೆ ಆಯ್ತಾ?

**ದಿಗಂ :** ಹಾಗೇ ಮಾಡು. ಮಾತಿನ ಮಲ್ಲ - ಅಲ್ಲ ಮಳ್ಳ! ಹೂಂ. ಇದೋ ನಿನ್ನ ಹತ್ತರ ಮನೆಯ ಬಿಡಿ ಕೀಲಿಕೈ ಇದ್ದರೆ ಇತ್ತ ಕೊಡು. **(ಕೊಳ್ಳುವನು)** ನಾ ಹೊರಟೆ ಡಾಕ್ಟರು - **(ಹೊರಡುವನು)**

**ಚಿದಂ :** ಹಾಂ ಈವಾಗ-

**ದಿಗಂ :** ಮತ್ತೇನು?

**ಚಿದಂ :** ಏನಿಲ್ಲ - ಏನಿಲ್ಲ.

**ದಿಗಂ :** ಅದೇ ನಮ್ಮಣ್ಣ ಹೇಳಿದ್ದು ಪರಮಲಫಂಗ! ಉಂಡಾಡಿ! ನಿದ್ದಂಡಿ! **(ಹೊರಡಬೇಕೆಂದಾಗ ಶ್ರೀಮತಿ ಬರುತ್ತಾಳೆ)**

**ಶ್ರೀಮತಿ :** ಯಾರು? ಸಾಂಬಶಿವಯ್ಯನೇ?

**ದಿಗಂ :** (ಸಿಟ್ಟಿನಿಂದ ಸಿಡಿದು) ಯಾರು ನಾನೇ? ಸಾಂಬಶಿವs? ಇಕೋ ಇಲ್ಲಿ ಇದ್ದಾನೆ- ಇವನೇ ಇರಬೇಕು ನಿಮ್ಮ - ಆ ನಿಮ್ಮ - 'ಪ್ರಿಯತಮ್ಮಾ'

**(ಹೋಗುವನು)**

**ಚಿದಂ :** ಓ, ನೀವೋ ಬನ್ನಿ ಬನ್ನಿ!

ಶ್ರೀಮತಿ : ನಂಗೆ ಅಂದೇ ಅನುಮಾನ. ನೀವೇ ಸಾಂಬಶಿವಯ್ಯ ಇರಬೇಕೂಂತ.

ಚಿದಂ : ಹಾಗೋ ಮತ್ತೆ? ಇರಲಿ. ಕೂತುಕೊಳ್ಳಿ. ಈಗ ಹೋದ್ರಲ್ಲ. ಈ ಮಹಾಶಯರ ಬಗೆಗೆ ನಿಮಗೆ ಏನು ಅನಿಸ್ತದೆ?

ಶ್ರೀಮತಿ : ಆ ಪ್ರಾಣಿ! ಯಾರ‍್ರೀ?

ಚಿದಂ : ವ್ಹಾ! ಸರಿಯಾಗಿ ಅಂದ್ರಿ! ಪ್ರಾಣೀ! ಅವರು ನನ್ನ-ಅಂದ್ರೆ ನಮ್ಮ ರಾಯರ ತಮ್ಮ

ಶ್ರೀಮತಿ : ಅವರೇ ಆ ಪ್ರಿಯತಮ್ಮ? **(ನಗು)**

ಚಿದಂ : ಹಾಂ. ಅವರೇ. ದೊಡ್ಡ ದಲ್ಲಾಳಿ. ಹೆಸರು ದಿಗಂಬರಯ್ಯ.

ಶ್ರೀಮತಿ : ಅಂದರೆ ಆ ಪ್ರಿಯತಮ್ಮ?

ಚಿದಂ : ತಮ್ಮ ಹೌದು. ಪ್ರಿಯ ಅಲ್ಲ. ನನಗೆ ಎರಡೂ ಅಲ್ಲ, ಆ ರಾಯರಿಗೆ.

ಶ್ರೀಮತಿ : ಅವರೇಕೆ ಮತ್ತೆ ಹೀಗೆ ಉರಿದೆದ್ರು? ನನ್ನ ನೋಡಿ?

ಚಿದಂ : ಅವರು ಮೊದಲೆ ಎದ್ದಿದ್ರು. ನಿಮ್ಮನ್ನು ನೋಡಿ ಉರಿದ್ರು. ಅಲ್ಲ ಮತ್ತು ನೀವು ಅವರನ್ನೆ ಸಾಂಬಶಿವಯ್ಯ ಅನ್ನೋದೆ?

ಶ್ರೀಮತಿ : ನಂಗೇನು ಗೊತ್ತು ಅವರು ಬೇರೆ ಅಯ್ಯ ಎಂತ? ನಂಗೆ ಹಾಗೇ ಕಂಡ್ರು. ಥೇಟ ಜವಾನಂದೇ ಮೋರೆ! ನಗು

ಚಿದಂ : ಅವನೇ ದೊಡ್ಡ ಕತ್ತೆ!

ಶ್ರೀಮತಿ : ಹೀಗೋ?

ಚಿದಂ : ಬರಿ ಕತ್ತೆ ಅಲ್ಲ! ಹೇಸರಗತ್ತೆ! ಹೆಸರಿಲ್ಲದ ಬಿಂಕದ ಕತ್ತೆ. ಸುತ್ತಲೂ ಲತ್ತೆ ಕೊಡುವ ಕತ್ತೆ!

ಶ್ರೀಮತಿ : ಅದು ಹೇಗೆ ಗೊತ್ತಾಯ್ತು? ನಿಮಗೂ ಬಿತ್ತೇ ಮತ್ತೆ?

ಚಿದಂ : ಅಲ್ಲ. ಆಗಿಂದ ನಾನು ಅವರಿಗೆ ಏನೋ ಒಂದು ರಹಸ್ಯ ಹೇಳಬೇಕೆಂದು ನೋಡ್ತೇನೆ. ಪಾಪಿ, ಹೇಳಲೇ ಕೊಡೊಲ್ಲ!

ಶ್ರೀಮತಿ : ಅದೆಂಥ ರಹಸ್ಯ? ಚಿದಂಬರ ರಹಸ್ಯ?

ಚಿದಂ : ಅದು ರಹಸ್ಯವಲ್ಲ. ಚಿದಂಬರ ಸ್ವಾರಸ್ಯ! ಆದರೆ ಈ ದಿಗಂಬರಯ್ಯ ಅದನ್ನು ಹೇಳಲಿಕ್ಕೆ ಕೊಡೊಲ್ಲ. ಮಾತಾಡಲಿಕ್ಕೇ ಬಿಡೋಲ್ಲ!

ಶ್ರೀಮತಿ : ನೀವು ಹೇಳಿದ್ರೆ ಆತ ನಂಬತಿದ್ದನೇ ಮತ್ತೆ?

ಚಿದಂ : ಅದೇನಿಲ್ಲ ಬಿಡ್ರಿ. ನಂಬೂ ಪ್ರಾಣಿಯೇ ಆತ-ದಲ್ಲಾಳಿ ಖದೀಮ?

ಶ್ರೀಮತಿ : ಹಾಗಾದರೆ ಮತ್ತೇಕೆ ಹಳಹಳಿಸುತ್ತಿದ್ದೀರಿ? ನಾ ಹೇಳಲೋ? ನಿಜ ಅಂದ್ರೆ, ನಿಮಗೆ ಆ ರಹಸ್ಯ ಹೇಳೋ ಇಷ್ಟವೇ ಇಲ್ಲ.

ಚಿದಂ : (ನಸುನಗು) ಅದೂ ಇರಬಹುದು. ಆದ್ರೆ ನಿಮಗೆ ಹೇಗೆ ಗೊತ್ತಾಯ್ತು?

ಶ್ರೀಮತಿ : ಅಲ್ಲ. ಆತ ಮಾತಾಡಲಿಕ್ಕೆ ಬಿಡಲಿಲ್ಲ ಅಂತೀರಿ. ಸರಿ ಆದ್ರೆ ನೀವು ಬರೆದು ತಿಳಿಸಬಹುದಿತ್ತು. ಅದೂ ಮಾಡಲಿಲ್ಲ! ಆತ ನಿಮಗೇನು ಬರೆಯಬಾರದೆಂದು ಕೈ ಕಟ್ಟಿದನೇ?

ಚಿದಂ : ಆತ ಕೈಕಟ್ಟಲಿಲ್ಲ. ನೀವು ನನ್ನ ಬಾಯಿ ಕಟ್ಟಿದಿರಿ! ನಿಜವಾಗಿಯೂ ಶ್ರೀಮತಿ ನೀವು

ಶ್ರೀಮತಿ : ನೀವು ಅಲ್ಲ, ನೀನು! -

ಚಿದಂ : ತಥಾಸ್ತು. ನೀನು ಬಲುಬಲು ಜಾಣೆ! ನನ್ನ ಇಷ್ಟ ನಿನಗೆ ಹೇಗೆ ಗೊತ್ತಾಯ್ತು?

ಶ್ರೀಮತಿ : Thanks ಇಷ್ಟಾದರೂ ಊಹಿಸಿದಿರಿ ಈಗ. ಆದರೆ ಮೊನ್ನೆ ನಾನು ನಿಮ್ಮನ್ನು ಗುರುತಿಸಲೇ ಇಲ್ಲ. ನನ್ನ ಪತ್ರ ಫೋಟೋ ನೀವು ನೋಡಿದ್ದೀರಿ.

ಚಿದಂ : (ಗಾಬರಿ ಆಗಿ) ಪತ್ರ! ನಿಮ್ಮ ಫೋಟೋ! (ಸಾವರಿಸಿಕೊಂಡು) ಹಾಂ. ನೀನು ಕಳಿಸಿದ್ದೆ. ಯಾವಾಗ ಕಳಿಸಿದ್ದೆ? ಯಾಕೆ ಕಳಿಸಿದ್ದೆ?

ಶ್ರೀಮತಿ : ಇದೇನು ತಮಾಷೆ ಮಾಡ್ತೀರಾ? ಯಾವಾಗ, ಯಾಕೆ, ಯಾರು? ಎಂದು. ನೀವೇ ತಿಳಿಸಿದ್ದಿಲ್ವೆ?

ಚಿದಂ : ನಾನು ತಿಳಿಸಿದ್ದೆ?

ಶ್ರೀಮತಿ : ಮುಗಿದೇ ಹೋಯ್ತು! ಇದೇನು ಮರವೋ! ಎಲ್ಲ ತಿರುವು ಮುರವೋ!

ಚಿದಂ : (ಗೊಂದಲದಲ್ಲಿ) ಎರಡೂ ಅನ್ನು.

ಶ್ರೀಮತಿ : ನೀವು ಆ 'ಕಲ್ಯಾಣ ಮಂಟಪ' ಪತ್ರಿಕೆಯಲ್ಲಿ ಜಾಹೀರಾತು ಕೊಟ್ಟಿದ್ದಿರಿ. ನೆನಪುಂಟೇ? ನಾ ಅದಕ್ಕೆ ಉತ್ತರ ಕೊಟ್ಟಿದ್ದೆ - ಪತ್ರಿಕೆಗೆ ಅಲ್ಲ. ಖುದ್ ನಿಮಗೇ! ಅದೇನಾಯ್ತು? ಅದನ್ನು ನೋಡಿಯೇ ಇಲ್ವೇನೋ!

ಚಿದಂ : (ಸ್ಮರಿಸಿಕೊಳ್ಳುತ್ತ) ನೋ-ಡ-ದೇ-ಏನು? ನೋಡದೇ ಏನು? ಇದೋ ಇಲ್ಲಿದೆ? (ಜೇಬೆಲ್ಲ ಹುಡುಕಾಡಿ. ಎದ್ದು ಓಡಿ ಸಾಂಬನ ಕೋಟಿಗೆ ಕೈ ಹಾಕಿ ಲಕೋಟೆ ತೆಗೆಯುತ್ತಾನೆ.) ಇದೋ ಇಲ್ಲಿದೆ ಲಕೋಟೆ!

ಶ್ರೀಮತಿ : (ಹಣೆಗೆ ಕೈ‌ಇಟ್ಟು) 'ಕಾಕನ ಕೋಟೆ' ಆಗುವದು 'ತಾಳೀ ಕೋಟೆ' ಆಯ್ತು! ಅದರಲ್ಲಿ ನನ್ನ ಫೋಟೋನೂ ಇದೆ!

ಚಿದಂ : ಸರಿಸರಿ ಎರಡೂ ಭದ್ರವಾಗಿವೆ. ಇದು ನೋಡು. ಎಲ್ಲಾದ್ರೂ ಕಾಣೆಯಾಗಿ ಹೋಗಬಾರ್ದು ಎಂತ ಈ ಹಳೆ ಕೋಟಿನಲ್ಲಿ ಹಾಕಿಟ್ಟಿರಬೇಕು. (ನಗುತ್ತಾನೆ)

ಶ್ರೀಮ : (ನೊಂದ ಮುನಿಸು) ಇದೇನ್ರೀ ಹೀಗೆ? ಎಲ್ಲಾದ್ರೂ ಇಡೋದೇ ನನ್ನ ಪತ್ರ-ಫೋಟೋನ? ನಾಳೆ ಅದು ಲಾಂಡ್ರಿಗೆ ಹೋದರೆ-

ಚಿದಂ : ಹೋಗಲಿ ಬಿಡು - ಅಂದರೆ ಲಾಂಡ್ರಿಗೆ ಅಲ್ಲ. ಶ್ರೀಮತಿ Sorry very sorry ಕ್ಷಮಿಸು. ನನ್ನ ತಲೇನೆ ಸರಿ ಇಲ್ಲ. ಮೊನ್ನೆಯಿಂದ ನಮ್ಮ ರಾಯರಿಗೆ - ಪ್ರಾಣಾಂತಿಕ!

ಶ್ರೀಮತಿ : ಅಯ್ಯೋ! ಪಾsssಪ! ಈಗ ಹೇಗಿದ್ದಾರೆ?

ಚಿದಂ : ಇದ್ದಾರೆ ಅಲ್ಲ. ಇದ್ದರು.

ಶ್ರೀಮತಿ : ಅಂದರೆ ಈಗ ಕಾಯಿಲೆ ಹೋಯ್ತೇನು?

ಚಿದಂ : ಕಾಯಿಲೇನೂ ಹೋಯ್ತು. ಜತೆಗೆ ಅವರೂ ಹೋದ್ರು. ಪ್ರಾಣಾಂತಿಕ ಅಂದ ಮೇಲೆ ಪ್ರಾಣಾಂತ ಆಗೋದೇ! (ನಿಟ್ಟುಸಿರು)

ಶ್ರೀಮತಿ : So sorry! ನಂಗೇನು ಗೊತ್ತು! ನೀವೇ ಇಂದು ಬಾ ಅಂದ್ರಿ. ಅದಕ್ಕೇ ಬಂದೆ.

ಚಿದಂ : ಇರಲಿ ಬಿಡಿ. ಇಂದು ನಸುಕಿಗೇ ಚಿದಂಬರ ರಾಯರ ಅವತಾರ ಕಾರ್ಯ ಮುಗಿಯಿತು. ಒಬ್ಬ ಮಹಾನ್ ಚಿತ್ರಕಾರ ಕನ್ನಾಡಿನ ಹಿರಿಯ ಕಲಾವಿದ ಅಮರರಾದರು! ಅವರ ಬಗ್ಗೆ ಜಾಗರಣೆ. ಈ ದಿಗಂಬರಯ್ಯನ ದೊಂಬರಾಟ ಎಲ್ಲ ಕೂಡಿ ನನ್ನ ಜೀವ ಹಣ್ಣಾಗಿ ಬಿಡ್ತು. ಅದಕ್ಕೆ ಹೀಗೆ ಮೊದಲು ಮರವು, ಮೇಲೆ ಇದೆಲ್ಲ ತಿರುವು ಮುರುವು! ನೀನಂದಂತೆ.

ಶ್ರೀಮತಿ : ಇನ್ನೇನು? ಆದದ್ದಾಯಿತು! ನೀವು ತುಂಬ ಸುಸ್ತ. ಆರಾಂ ಮಾಡಿರಿ. ಹೂಂ ನನ್ನ ನಿಮ್ಮ ಋಣಾನುಬಂಧ! ಇದ್ದದ್ದೇ ಹೀಗೆ! ಯಾರೇನು ಮಾಡ್ತಾರೆ? ವಿಶ್ರಾಂತಿ ಪಡೆಯಿರಿ. ವಿಪರೀತ ತಲೆಬಿಸಿ ಆದ್ರೆ ಹಿಸ್ಟೀರಿಯಾ --

ಚಿದಂ : ಹಿಸ್ಟೀರಿಯಾ! ನಂಗೆ ಹಿಸ್ಟೀರಿಯಾ! ಈ ಗಂಡುಗಂಡ್ಸಿಗೆ ಹಃ ಹಃ ಹಃ ಹಃ !

**ಶ್ರೀಮತಿ :** (ಗಾಬರಿ) ಅಯ್ಯೊ! ಇದೇನು ಹುಚ್ಚು ಹುಚ್ಚು ನಗೆ! ಹಿಡಿದೇ ಬಿಟ್ತು - ಹಿಸ್ಟೀರಿಯಾ! (ಅವನ ಕಪಾಳಕ್ಕೆ ಬಿಗಿಯುತ್ತಾಳೆ.) ಸುಮ್ಮನಾಗಿರಿ!

**ಚಿದಂ :** (ಎಚ್ಚರಿಕೆ ಬಂದಂತೆ ನಟಿಸಿ) ಸರಿ ನಿಂಗೂ ಗೊತ್ತು ಹಿಸ್ಟೀರಿಯಾಕ್ಕೆ ಪ್ರಥಮೋಚಾರ! ಅದನ್ನೆ ನೋಡೋಣ ಎಂತ ನಕ್ಕೆ! ಹಃ ಹಃ

**ಶ್ರೀಮತಿ :** ಸಾಕು ನಿಮ್ಮ ಹಾಳು ಹರಟೆ. ಯಾವಾಗ ಎಲ್ಲಿ ಹೇಗೆ! ಈ ವಿನೋದ! ಈಗ ನಾನು ಹೋಗ್ತೇನೆ ಮತ್ತೆ ಭೆಟ್ಟಿಯಾಗೋಣ.

**ಚಿದಂ :** ಮತ್ತೆ ಯಾವಾಗ?

**ಶ್ರೀಮತಿ :** ಯಾಕೆ? ಒಂದು ತಿಂಗಳು ಹೋಗಲಿ.

**ಚಿದಂ :** ಅಯ್ಯೋ! ಒಂದು ತಿಂಗಳು? ಶ್ರೀಮತಿ ಅಷ್ಟೂ ಕಾಲ ಹೇಗೆ ತಾಳಲಿ? ನನಗೀಗ ಯಾರೂ ಇಲ್ಲ. ಏನು ಗತಿ?

**ಶ್ರೀಮತಿ :** ಗತಿ. ಅಡ್ಡ ಬೀಳುವದೇ ಗತಿ! ಮಲಗಿ ಒಳಗೆಹೋಗಿ-

**ಚಿದಂ :** ಒಳಗಲ್ಲ, ಶ್ರೀಮತೀ ಈಗ ಹೊರಗೇ ಹೋಗೋದು! ಹೊರಗೇ! ಆ ದಿಗಂಬರಯ್ಯ ನೋಟೀಸು ಕೊಟ್ಟಿದ್ದಾನೆ. ಅರ್ಧಗಂಟೆಯೊಳಗೆ-

**ಶ್ರೀಮತಿ :** (ಕೆರಳಿ) ಅಂವ ಯಾರು ನಿಮಗೆ ಹೊರಗೆ ಹಾಕಲಿಕ್ಕೆ? ಹೋಗಲೇ ಬೇಡಿ.

**ಚಿದಂ :** ಬೇಡಿ ಅಂದರೆ ನನ್ನ ಕೈಗೇ ಬೇಡಿ! ಅಂವ ನಮ್ಮ ರಾಯರ ತಮ್ಮ ಹೋಗದಿದ್ದರೆ ಹೀಗೆ ಕತ್ತಿಗೆ ಕೈಕೊಟ್ಟು- (ಶ್ರೀಮತಿಯ ಕುತ್ತಿಗೆ ಹಿಡಿದು ಅಮುಕುತ್ತಾನೆ)

**ಶ್ರೀಮತಿ :** ಅಯ್ಯೊಯ್ಯೋ! ಬಿಡಿ ಬಿಡಿ.

**ಚಿದಂ :** ಓ. Sorry ನನ್ನ ತಲೆ -

**ಶ್ರೀಮತಿ :** ಅಲ್ಲ ನನ್ನ ತಲೆ ಇದು - (ಸಾವರಿಸಿಕೊಳ್ಳುವಳು) ಇರಲಿ. ಎಲ್ಲ ಸರಿಹೋಯ್ತು. ಆದರೆ ನೀವೀಗ ಹೋಗುವದಾದರೂ ಎಲ್ಲಿಗೆ?

**ಚಿದಂ :** ಕ್ಯಾರ ಆಫ್ ಫುಟ್‌ಪಾಥ್!

**ಶ್ರೀಮತಿ :** ಛೇ ಛೇ ಉಂಟೇ? ಎಲ್ಲಾದರೂ ಹೋಟ್ಲು ಹುಡುಕಬೇಕು.

**ಚಿದಂ :** ಎಲ್ಲಿ ಹುಡುಕೋದು? (ಆಚೆ ಈಚೆ ನೋಡುತ್ತಾನೆ.)

**ಶ್ರೀಮತಿ :** ಇಲ್ಲಿ ಆಚೆ ಈಚೆ ಅಲ್ಲ. ಆ ಪತ್ರಿಕೆ ಕೊಡಿ. (ಓದಿ) ಇದ್ನೋಡಿ. ಹೋಟ್ಲು 'ಇಂದ್ರ ಭವನ' ರೂಂಗೆ ದಿನಕ್ಕೆ ೧೦ ರೂಪಾಯಿ! ಅಲ್ಲಿಗೇ ಹೋಗಿರಿ!

**ಚಿದಂ :** ಆದರೆ ೧೦ರೂಪಾಯಿ?

ಶ್ರೀಮತಿ : ನೋಡೋಣ. ನಿಮ್ಮ ಹತ್ತಿರ ಈಗ ಹಣ ಎಷ್ಟು ಇದೆ? ಆ ಹಳೆಕೋಟು ತನ್ನಿ ಹುಡುಕೋಣ!

ಚಿದಂ : (ಬಾಯಿತಪ್ಪಿ) ಆದರೆ ಅದು ಸಾಂಬಶಿವಯ್ಯನ ಕೋಟು ನಂದಲ್ಲ-

ಶ್ರೀಮತಿ : (ಹಣೆಜಪ್ಪಿ ತಣ್ಣಗೆ ಕೂತು) ಹೀಗೇನಂತೀರಿ! ಮತ್ತೆ ಕಪಾಳಕ್ಕೆ ಬಿಗಿಯಬೇಕೇ? ನೀವೇ ಅಲ್ವೆ ಸಾಂಬಶಿವಯ್ಯ! ಏನೋ ನಂಗೆ ಹೆದರಿಕೆ ಆಗ್ತಾ ಇದೆ! ಅವ್ವಯ್ಯss!

ಚಿದಂ : ಅಯ್ಯೋ ನಿಂಗೆ ದಮ್ಮಯ್ಯ! ಅಳಬೇಡ. ನಂಗೇನೇ ಮಂಕು. ನೀನೇ ಹೇಳಿದೆ ಅಲ್ಲ. ಸುಸ್ತು ಸುಸ್ತು ಎಂತ! ನಾನೇ ಸಾಂಬಾ-ನೀನೇ ಹುಡುಕು ಆ ಕೋಟಿನಲ್ಲಿ.

ಶ್ರೀಮತಿ : ತಡೆಯಿರಿ (ಹುಡುಕಾಡಿ) ಇದೊ ಇಲ್ಲಿದೆ ಪಾಕೀಟು. ಎಷ್ಟು? ಅದೇ ೩೦೦ರೂಪಾಯಿ. ೧೦ ರ ೩೦ ನೋಟು! ನಿಮ್ಮ ಇತ್ತೀಚೆಯ ಗಳಿಕೆ ಇರಬೇಕು. ಹಿಡಿಯಿರಿ.

ಚಿದಂ : ತಾ. (ಹಣದೊಂದಿಗೆ ಕೈಯನ್ನು ಹಿಡಿದು ಹರ್ಷದಿಂದ) ಶ್ರೀಮತೀ ಶ್ರೀಮತೀ! ನನ್ನ ಶ್ರೀಮತೀ.

ಶ್ರೀಮತಿ : (ನಾಚಿ) ಇದೇನು ಹುಚ್ಚು ಮಾತು?

ಚಿದಂ : ನೀ ಕೈಹಾಕಿದಲ್ಲಿ ಹಣ ಸಿಗುತ್ತದೆ!

ಶ್ರೀಮತಿ : ಅದಕ್ಕೇ ನಾನು ಶ್ರೀಮತಿಯೇ! ಆಯ್ತು ಬಿಡಿ.

ಚಿದಂ : ಇನ್ನು ನೀನೇ ಹೇಳು. ಯಾವ ಹಾಟೇಲಿಗೆ ಹೋಗೋಣ? ಆ 'ಇಂದ್ರಭವನ' ಬೇಡ. ಅಲ್ಲಿ ರಂಭೆ ಮೇನಕೆಯರ ಕಾಟ! 'ವುಡ್‌ಲ್ಯಾಂಡಿ'ಗೆ ಹೋಗೋಣ.

ಶ್ರೀಮತಿ : ಅಯ್ಯೋ, ಅದು ಭಾರಿ ತುಟ್ಟಿಯಂತೆ! ಶ್ರೀಮಂತರು ಹೋಗೋ ಹಾಟ್ಲು ಅದು!

ಚಿದಂ : ನಾನೂ ಶ್ರೀಮಂತನೇ. ನೀನಂತೂ ಶ್ರೀಮತಿ. ನಾನು ಹೇಳಿದಂತೆ ಕೇಳ್ತೀಯಾ?

ಶ್ರೀಮತಿ : ಹೂಂ.

ಚಿದಂ : ನಾನು ಈಗಲೆ ವುಡ್‌ಲ್ಯಾಂಡಿಗೆ ಹೊರಟೆ. ನೀನು ನಾಳೆ ಮಧ್ಯಾಹ್ನ ಅಲ್ಲಿಗೆ ಬಂದು ಬಿಡು.

ಶ್ರೀಮತಿ : ಊಟ ಮಾಡಿ? (ನಕ್ಕು)

ಚಿದಂ : ಛೀ ಹುಚ್ಚಿ, ಊಟಕ್ಕೇ ಬರೋದು. ನಾನು ನಿನಗಾಗಿ ಕಾಯ್ತಾ ಇರ್ತೇನೆ. ಹೂಂ ಅನ್ನು.

ಶ್ರೀಮತಿ : ಬೇಡಪ್ಪ! ಅಂಥ ಹಾಟ್ಲನಲ್ಲಿ ನಾನು ಜನ್ಮಕ್ಕೇ ಕಾಲಿಟ್ಟಿಲ್ಲ!

ಚಿದಂ : ಜನ್ಮಕ್ಕೇ ಯಾರಿಗೂ ಕಾಲೇ ಇರೋದಿಲ್ಲ! ನಾಳೆ ಕಾಲಿಟ್ಟು ನೋಡು! ಹೊಸ ಜನ್ಮ! ಹೂಂ ಅನ್ನು. ಹೂಂ ಬೇಗ **(ಆಕೆಯ ಭುಜ ಹಿಡಿದು ಗದಗದ ನಡುಗಿಸುತ್ತಾನೆ).**

ಶ್ರೀಮತಿ : ಹೂಂ ಹೂಂ ಹೂಂ: ಬಿಡಿ ನನ್ನ ದಮ್ಮಯ್ಯ!

ಚಿದಂ : **(ನಕ್ಕು)** ದಮ್ಮಾ ಬಂತೇ? Thanks ಬಿಟ್ಟೆ. ಇನ್ನು ಹೋಗು ಅರ್ಧ ಗಂಟೆಯೊಳಗೆ ನಾನು ಬಟ್ಟೆ ಬರೆ ಗಂಟುಮೂಟೆ ಕಟ್ಟಿಕೊಳ್ಳಬೇಕು. ಇದೇ ಈ ಪ್ಯಾಂಟು -

ಶ್ರೀಮತಿ : ಇಲ್ಲಿ ಕೊಡಿ. ನಾ ಮಡಚಿ ಇಡ್ತೇನೆ. ನಿಮಗೆ ಅದೆಲ್ಲ ತಿಳಿಯದು. **(ನಗುವಳು)**

ಚಿದಂ : ಏ! ನಂಗೆ ತಿಳಿಯದೇ? ನಂಗೇ ಗೊತ್ತು. ಪ್ಯಾಂಟು ಏರಿಸಿ. ನೀನೆಂದೂ ಏರಿಸಿದ್ದುಂಟೇ? ಕೆನ್ನೆಗಲ್ಲ - ಪ್ಯಾಂಟು!

ಶ್ರೀಮತಿ : ಏರಿಸದೇ ಏನು? ನಮ್ಮ ಶಾಲೆಯ ಗ್ಯಾದರಿಂಗ್ ನಾಟಕಗಳಲ್ಲಿ ಪ್ಯಾಂಟ ಏರಿಸೋ ಪಾತ್ರ ಯಾವಾಗಲೂ ನಂದೇ ಆಗಿತ್ತು!

ಚಿದಂ : ಅಬ್ಬ! ಅದ್ಹೆಂಗೋ!

ಶ್ರೀಮತಿ : ಹೇಗೆಂದರೆ ತಂದ ಪ್ಯಾಂಟ್ಸು. ಇನ್ನಾರಿಗೂ ಸರಿ ಹೋಗ್ತೇ ಇದ್ದಿಲ್ಲ **(ಇಬ್ಬರೂ ನಗುವರು)**

ಚಿದಂ : ಪ್ಯಾಂಟಿಗೆ ತಕ್ಕ ಪಾತ್ರ?

ಶ್ರೀಮತಿ : ಆ ಜೋಕು ಇರ್ಲಿ. ನಾಳೆ ಬೇಕಾದರೆ ನಾನು ಪ್ಯಾಂಟು ಏರಿಸೇ ವುಡ್‌ಲ್ಯಾಂಡಿಗೆ ಲ್ಯಾಂಡ್ ಆಗ್ತೇನೆ! ಆಗದೇ? ಈಗ ಕೊಡಿ ಆ ಪ್ಯಾಂಟು. ನೀವು ಬೇರೆ ಬಟ್ಟೆ ಒಟ್ಟುಹಾಕ್ರಿ. **(ಅವಳು ಪ್ಯಾಂಟು ಎಳೆದು ಕೊಳ್ಳುತ್ತಾಳೆ. ಒಂದು ಕಾಲು ಅವಳ ಕೈಯಲ್ಲಿ ಇನ್ನೊಂದು ಕಾಲು ಚಿದಂಬರನ ಕೈಯಲ್ಲಿ, ಇಬ್ಬರೂ ಗಹಗಹಿಸಿ ನಗುವಾಗ ತೆರೆ.)**

# ಅಂಕ - ೨

## ದೃಶ್ಯ ಒಂದು

**(ಡಾ. ಧನ್ವಂತರಿಯು ಶಾಪಿನ ಇದಿರು. ಶ್ರೀಮತಿ ಅವಸರದಲ್ಲಿ ಹೊರಟಿದ್ದಾಳೆ. ಶಾಪಿನಿಂದ ಹೊರಗೆ ಮಿಸ್ಟರ ಕುಂಭಕೋಣಂ ಪ್ರವೇಶಿಸುತ್ತಾನೆ.)**

**ಶ್ರೀಮತಿ :** ನಮಸ್ತೆ ಮಿಸ್ಟರ....

**ಕುಂಭ :** yes ಕುಂಭಕೋಣಂ-ಏನು? ಎತ್ತ ಹೊಂಟಿರಿ?

**ಶ್ರೀಮತಿ :** ಡಾ. ಧನ್ವಂತರಿಗಳನ್ನು ಕಾಣಬೇಕಿತ್ತು, ಬಂದಿದ್ದೆ. ಅವರು ಶಾಪಿನಲ್ಲಿ ಇಲ್ಲ. ಅವರ ಅಸಿಸ್ಟಂಟರಂತೆ.

**ಕುಂಭ :** ಹೌದು ನಾನೇ. **(ದೇಶಾವರಿ ನಗುತ)** That's me! ಏನಾಗಬೇಕು? I am at your service.

**ಶ್ರೀಮತಿ :** ನಾನು ಸಾಂಬಶಿವಯ್ಯನವರ ಕಡೆಯಿಂದ ಬಂದೆ. ಅವರಿಗೆ ಫ್ಲೂ ಬಂದಿದೆ.

**ಕುಂಭ :** ಸಿಂಗಾಪುರ ಫ್ಲೂ ನೋ?

**ಶ್ರೀಮತಿ :** **(ಹೆಗಲು ಹಾರಿಸುತ)** dont know! ದಿಲ್ಲಿಯದೋ ಎಲ್ಲಿಯದೋ! ಅವರು ಬಂದದ್ದು ಮದರಾಸಿನಿಂದ.

**ಕುಂಭ :** ನಾ ಬಲ್ಲೆ ಅವರಲ್ಲಿಯೇ ನಿನ್ನೆ ನಾವು ಹೋದಿವಿ-ನಾನೂ ನಮ್ಮ ಡಾಕ್ಟರೂ! ರಾಯರ ಕಾಯಿಲೆಗೆ ನಮ್ಮನ್ನೇ ಕರೆದಿದ್ದರು. ಆದರೆ ಆ ರಾಯರು ನಮಗೆ ಅವಕಾಶಾನೆ ಕೊಡಲಿಲ್ಲ. ತೀರಿಕೊಂಡು ಬಿಟ್ಟರು! ಈಗ ಇವನಿಗೆ ಕಾಯಿಲೆ! ಮತ್ತೆ ನಮ್ಮನ್ನೆ ಕರೆಯಲಿಕ್ಕೆ ಬಂದಿರಾ?

**ಶ್ರೀಮತಿ :** ಇದೇನಂತಿರಿ. ಮಿಸ್ಟರ ಕಾಟಕೋನ?

**ಕುಂಭ :** ಅಲ್ಲ ಕುಂಭಕೋಣಂ - my name is

**ಶ್ರೀಮತಿ :** sorry ಕುಂಭಕೋಣಂ. ಗೊತ್ತಾಯ್ತು ಬಿಡಿ. **(ನಗುತ)** ಅದರೆ ನೀವು ಕುಂಭನೂ ಅಲ್ಲ, ಕೋಣನೂ ಅಲ್ಲ! ಹಾಗೆ ಕಾಣೋದಿಲ್ಲ! ನೀಟಾಗಿ ನಿಂತ ಕಾಟಕೋನೇ! **(ಇಬ್ಬರೂ ನಗುವರು)** ಅದರೆ ಡಾಕ್ಟರರು ಎಲ್ಲಿ?

**ಕುಂಭ :** ಅವ್ರು ಅಲ್ಲಿಗೇ - ರಾಯರ ಮನೆಗೇ ಹೋಗಿರಬೇಕು.

**ಶ್ರೀಮತಿ :** ಹಾಗಾದರೆ ಅದೇ ತಪ್ಪಾಯ್ತು. ಸಾಂಬಸದಾ ಶಿವಯ್ಯ ಆಗ ಅಲ್ಲಲ್ಲ. ವುಡ್ ಲ್ಯಾಂಡಿನಲ್ಲಿ ಇದ್ದಾರೆ.

**ಕುಂಭ :** ಸಾಂಬಶಿವಯ್ಯ! ಜವಾನ! ವುಡ್‌ಲಾಂಡಿನಲ್ಲಿ? I. Wonder! ನಾನೇ

ಇನ್ನು ಆ ಭರ್ಜರಿ ಹಾಟ್ಲಿನಲ್ಲಿ ಕಾಲು ಹಾಕಿಲ್ಲ! ಅವರು ಅಲ್ಲೇಕೇ?

**ಶ್ರೀಮತಿ :** ಅದೆಲ್ಲ ದೊಡ್ಡ ಪುರಾಣ! ರಾಯರ ತಮ್ಮ ದಿಗಂಬರಯ್ಯ ಆ ದೊಡ್ಡ ದಲ್ಲಾಳಿ, ಅವರು ಅವನನ್ನು ಮನೆಯ ಹೊರಗೆ ದಬ್ಬಿಬಿಟ್ಟರು.

**ಕುಂಭ :** ಏನು ಹಾಳಾಯ್ತು? ಹೋಳಿಗೆ ತುಪ್ಪದಲ್ಲೇ ಬಿತ್ತು! ಆ ಮನೆಗಿಂತ ವುಡಲ್ಯಾಂಡ್ಸು ಭಾರಿ ಬೆಸ್ಟು!

**ಶ್ರೀಮತಿ :** ಅದಿರಲಿ please ಡಾಕ್ಟರನೂ ಅಲ್ಲಿಗೆ ಕಳಿಸ್ತೀರಾ?

**ಕುಂಭ :** ಓ.ಕೇ. ಅವರು ಶಾಪಿಗೆ ಬಂದಕೂಡ್ಲೆ ಕಳಿಸ್ತೇನೆ.

**ಶ್ರೀಮತಿ :** ನೀವೂ ಬಂದು ಬಿಡ್ರಿ **(ನಕು)** 'ಸ್ವಂಟಿ' ನ ಬೆನ್ನಿಗೆ 'ಅಸಿಸ್ಟಂಟು!'

**ಕುಂಭ :** Sorry madam ನಾವೀಗ ರೇಡಿಯೋ ಸಮಾಚಾರ ಕೇಳೊದಿದೆ ದಿಲ್ಲಿಯಿಂದ ಪ್ರಸಾರ. ನಮ್ಮ ಚಿದಂಬರಯ್ಯರ ಅಂತ್ಯಯಾತ್ರೆಯ ವರ್ಣನೆ.

**ಶ್ರೀಮತಿ :** ಅಲ್ರೀ! ನಿಮದೆಲ್ಲ ಒಂದು ಥರಾನೇ. ರಾಯರ ಅಂತ್ಯಯಾತ್ರೆಗೆ ಪ್ರತ್ಯಕ್ಷ ಹೋಗಿ ನೋಡೋದು ಬಿಟ್ಟು.

**ಕುಂಭ :** ಅಲ್ಲ madam ಪ್ರತ್ಯಕ್ಷ ನೋಡಲಿಕ್ಕೆ ದಿಲ್ಲಿ? ಹೇಗೆ ಹೋಗಲಿ? Air Dash ಮಾಡೋದೇ?

**ಶ್ರೀಮತಿ :** ದಿಲ್ಲಿಗೇಕೇ? ಯಾರಿಗೆ Dash ಮಾಡಬೇಕು? ರಾಯರ ಶವ ಇರೋದು ಇಲ್ಲಿ-ಬೆಂಗಳೂರಿನಲ್ಲಿ. ಅಂತ್ಯಯಾತ್ರೆ ದಿಲ್ಲಿಯಲ್ಲೇ

**ಕುಂಭ :** I am sorry. ನಿಮಗೆ ಅರ್ಥ ಲೋಕದ ಸುದ್ದಿ ಗೋತ್ತೇ ಇಲ್ಲ. ಇಲ್ಲಿಯ ಶವ ದಿಲ್ಲಿಗೆ ರವಾನಿಸಿದ್ದಾರೆ. ನಮ್ಮ ರಾಯರು ಆಲ್ ಇಂಡಿಯಾ ಫಿಗರ್ ಇಂಟರ್‌ನ್ಯಾಷನಲ್ ಫೇಮಸ್ ! ಅಂತ್ಯವಿಧಿ ಅಲ್ಲಿ ಶಾಂತಿಘಾಟಿನಲ್ಲಿಯೇ ಭರ್ಜರಿಯಾಗಿ ನಡೆಯುತ್ತದೆ. ನೆಹರೂಜಿಯ ಪಕ್ಕದಲ್ಲಿಯೇ ರಾಯರದೂ ದಹನ.

**ಶ್ರೀಮತಿ :** ಅಂದರೆ ನೆಹರೂಜೀ ಮತ್ತೆ ತೀರಿಕೊಂಡ್ರೆ?

**ಕುಂಭ :** ಅರೇ ಇದೇನು ಅಂತೀರಿ? ಅಲ್ಲ, ನಿಮ್ಮ ಮಾತು ಹುಚ್ಚೋ? ನೀವೇ ಹುಚ್ಚೋ? **(ಕೈಯ ವಾಚ್ ನೋಡಿ)** ಈಗಾಗಲೆ ರಾಯರ ಅಂತ್ಯಯಾತ್ರೆ ಹೊರಟೆ ಬಿಟ್ಟಿದೆ-ಪಾರ್ಲಿಮೆಂಟ ಮುಂದಿನಿಂದ. ನೀವೂ ಹೊರಡಿ. ನಾನು ಇಲ್ಲಿ ದಿಲ್ಲಿಯ ಪ್ರಸಾರ ಕೇಳ್ತೇನೆ.

**ಶ್ರೀಮತಿ :** **(ಅನಿಶ್ಚಿತಳಾಗಿ ಮೌನ.)**

ಕುಂಭ : ಹೂಂ ಅನುಮಾನವೇನು? ಹೊರಡಿ. ಡಾಕ್ಟರನ್ನು ಕಳಿಸಿಕೊಡ್ತೇನೆ.

ಶ್ರೀಮತಿ : ಸರಿ ಅದರೆ ಅವರ ಫೀಸು ಎಷ್ಟು?

ಕುಂಭ : ಅದನ್ನು ಅವರಿಗೇ ಕೇಳಿ. ಅವರ ಹೆಸರು ಗೊತ್ತಲ್ಲ? 'ಧನ್ವಂತರ್ರಿ' ನಮ್ಮ ಈ ಡಾಕ್ಟರು ಭಾರಿ ಒಳ್ಳೆ ಡಾಕ್ಟರು.

ಶ್ರೀಮತಿ : ಅಂದರೆ?

ಕುಂಭ : ಅಂದ್ರೆ ಹೀಗೆ. ಉಳಿದ ಡಾಕ್ಟರು ಪೇಶಂಟಿನ pulse ನ್ನೆ ನೋಡುತ್ತಾರೆ. ಆದರೆ ಡಾ. ಧನ್ವಂತರಿ, purse ನ್ನು ಚೆನ್ನಾಗಿ ಪರೀಕ್ಷೆ ಮಾಡ್ತಾರೆ. ನಾಡೀ ಸದ್ದಿನೊಂದಿಗೆ ಇವರಿಗೆ ನಾಣ್ಯದ ಸದ್ದೂ ಗೊತ್ತಾಗುತ್ತದೆ?

ಶ್ರೀಮತಿ : (ನಕು) I see! ಹಾಗಾದರೆ ಬರ್ತೇನೆ ನಮಸ್ತೇ.

ಕುಂಭ : ಅಲ್ಲ. ಒಂದು ಮಾತು ಕೇಳಲಾ? ತಾವು ಯಾರು? ಅಂದರೆ ಪೇಶಂಟ ಸಾಂಬಶಿವಯ್ಯನಿಗೆ ತಾವು ಯಾರು?

ಶ್ರೀಮತಿ : ನನ್ನ ಹೆಸರು ಶ್ರೀಮತಿ

ಕುಂಭ : ಪೇಶಂಟನಿಗೋ

ಶ್ರೀಮತಿ : (ನಕು) ಪೇಶಂಟಿಗಲ್ಲ. ನನ್ನ ಹೆಸರೇ ಶ್ರೀಮತಿ. ಕುಮಾರಿ ಶ್ರೀಮತಿ. ಮತ್ತು ಅವರಿಗೆ

ಕುಂಭ : ಅವರಿಗೆಂದ್ರೆ - ಸಾಂಬಶಿವಯ್ಯರಿಗೆ

ಶ್ರೀಮತಿ : (ನಾಚಿ) ಹೂಂ ಅವರಿಗೇನೇ ಫ್ರೆಂಡು.

ಕುಂಭ : ಹಾಂ ಗೊತ್ತಾಯ್ತು ಗೊತ್ತಾಯ್ತು ಬಿಡಿ. ಅವರಿಗೆ ನೀವು would be ಶ್ರೀಮತಿ ಅಲ್ವೆ? (ಇಬ್ಬರೂ ನಗುವರು) ನಮಸ್ಕಾರ. (ಇಬ್ಬರೂ ಹೋಗುವರು.)

- (ಅತ ಶಾಪಿನೊಳಗೆ ಈಕೆ ಹೊರಗೆ).

## ದೃಶ್ಯ ಎರಡು

**(ವುಡ್‌ಲ್ಯಾಂಡ್ಸ್ ಒಂದು ಸಿಂಗರಿಸಿದ ಪ್ರಶಸ್ತ ಕೋಣೆ. ಡ್ರೆಸಿಂಗ್ ಗೌನಿನಲ್ಲಿ ಚಿದಂಬರ ರೇಡಿಯೋ Turn in ಮಾಡುತ್ತಿದ್ದಾನೆ.)**

**ಚಿದಂ:** ಭಲೆ ಭಲೆ : ಸಾಂಬಶಿವಯ್ಯ! ಬಡಪಾಯಿ ಸಾಂಬಶಿವಯ್ಯ! ನಿನಗೆ ರಾಜವೈಭವದ ಅಂತ್ಯಸಂಸ್ಕಾರ! ಲಾಲಬಹಾದ್ದೂರ ಶಾಸ್ತ್ರಿ ಹೇಳಿದ್ದರು ಜಯ ಜವಾನ್! ನಮ್ಮ ಹಳ್ಳಿಯ ಹೈದ ಸಾಂಬಶಿವಯ್ಯ. ಇವನಿಗೆ ರಾಷ್ಟ್ರದ ರಾಜಧಾನಿಯಲ್ಲಿ ಅಂತ್ಯಯಾತ್ರೆ! ಶಾಂತಿಘಾಟದಲ್ಲಿ ಸಮಾಧಿ!

"ಇದ್ದಾಂವ ಸತ್ತಾಂವ
ಸತ್ತಾಂವ ಗೆದ್ದಾಂವ
ಇದ್ದಾಗ ಇದ್ದಾಂಗ ಅನಿಸಲೆ ಇಲ್ಲ! ಅನಿಸಲೇ ಇಲ್ಲ!

**(ರೇಡಿಯೊ on ಮಾಡುತ್ತಾನೆ).**

**ರೇಡಿಯೋ:** ಈ ವಿಶೇಷ ವಾರ್ತಾ ಪ್ರಸಾರವನ್ನು ಅಲ್ ಇಂಡಿಯಾ ರೇಡಿಯೋದಿಂದ ಕೇಳುತ್ತಿದ್ದೀರಿ. ಜಗದ್ವಿಖ್ಯಾತ ಭಾರತೀಯ ಚಿತ್ರಕಾರ ಶ್ರೀ ಚಿದಂಬರಯ್ಯ ಚಿದಂಬರದಲ್ಲಿ ಐಕ್ಯರಾದರು. ಶ್ರೀ ನೆಹರೂಜಿಯ ಸ್ಥಾನದಿಂದ ಒಂದು ಹತ್ತು ಯಾರ್ಡು ಅಂತರದಲ್ಲಿ ಅವರ ಅಚ್ಚುಮೆಚ್ಚಿನ ಈ ಕಲಾವಿದನ ಅಂತ್ಯಸಂಸ್ಕಾರ ನಡೆಯುತ್ತಿದೆ. ೫೦ ಸಾವಿರ ಜನಸ್ತೋಮ ಇಲ್ಲಿ ನೆರೆದಿದೆ. ೪೫ ಮಣ ಶ್ರೀಗಂಧ ಮತ್ತು ಚಂದನ-ದಿವಂಗತ ಚಿದಂಬರಯ್ಯರ ವಯಸ್ಸಿನಷ್ಟೇ ಮಣ-ಅವರ ಚಿತೆಗಾಗಿ ಹೇರಲಾಗಿದೆ. ಚಿತೆಯ ಮೇಲೆ ಅವರ ಕಳೇಬರವನ್ನಿಟ್ಟು ಅವರ ತಮ್ಮ ದಿಗಂಬರಯ್ಯ ಅಗ್ನಿಸ್ಪರ್ಶ ಮಾಡಿಸುತ್ತಿದ್ದಾರೆ. ಅವರ ನಂಬಿಗೆಯ ಆಳು ಸಾಂಬಶಿವಯ್ಯ ಈ ಕೊನೆಯ ದೃಶ್ಯ ಕಣ್ತುಂಬ ನೋಡಲು ಬಳಿಯಲ್ಲಿ ಇಲ್ಲ! ಇದೇ ಒಂದು ದೊಡ್ಡ ಕೊರತೆ.

**ಚಿದಂ:** ಅಯ್ಯೋ ಪಾಪ! ಅವನಿಗೆ ಸತ್ತಂತೆಯೇ ಆಗಿದೆ.

**ರೇಡಿಯೋ:** ಕೇಂದ್ರ ಸರಕಾರದ ಧುರೀಣರು, ನಮ್ಮ ರಾಷ್ಟ್ರಪತಿಗಳು, ಉಪರಾಷ್ಟ್ರಪತಿಗಳು, ಕೇಂದ್ರದ ಮಂತ್ರಿಮಂಡಳ, ಅಮೇರಿಕೆಯ ರಾಯಭಾರಿ, ಬ್ರಿಟನ್ ಮುಂತಾದ ದೇಶವಿದೇಶಗಳ ರಾಯಭಾರಿಗಳು ಪ್ರಪಂಚದ ಎಲ್ಲ ವಿಶ್ವವಿದ್ಯಾಲಯಗಳ ಕಲಾ ಕೇಂದ್ರಗಳ ಪ್ರತಿನಿಧಿಗಳು ಈ ನಮ್ಮ ರಾಷ್ಟ್ರೀಯ ದುಃಖದಲ್ಲಿ ಭಾಗಿಯಾಗಿ ತಲೆತಗ್ಗಿಸಿ ನಿಂತು ಒಬ್ಬೊಬ್ಬರಾಗಿ ಬಂದು ಮೃತಾತ್ಮರಿಗೆ ಶ್ರದ್ಧಾಂಜಲಿ ಅರ್ಪಿಸುತ್ತಿದ್ದಾರೆ!

**ಚಿದಂ:** ಅಯ್ಯೋ! ಪಾಪ! ತನ್ನ ಈ ಅಂತಿಮ ದೃಶ್ಯದ ವಿಜೃಂಭಣೆ ನೋಡಲು ಅಲ್ಲಿ ಚಿದಂಬರರಾಯನೇ ಇಲ್ಲವಲ್ಲ!

| | |
|---|---|
| ರೇಡಿಯೋ: | ಚಿತೆ ಉರಿಯ ಹತ್ತಿತ್ತು. ಚಿದಂಬರ ರಾಯರ ಅಮರ ಕುಂಚದಿಂದ ಅರಳುವ ಬಣ್ಣದ ನಾಲಿಗೆಗಳಂತೆ ಅಗ್ನಿಜ್ವಾಲೆಗಳು ಆಕಾಶಕ್ಕೆ ಏರುತ್ತಿವೆ. ಜನಸ್ತೋಮ ಬಾಷ್ಪಾಂಜಲಿ ನೀಡುತ್ತಿದೆ **(ಚಿತ್ರಕಾರ ಅಮರರಹೇ! ಚಿದಂಬರಜೀ ಅಮರಹೇ! ಘೋಷ ಹಿಂದಿನಿಂದ)** |
| | 'ವಿಮಾನಗಳಿಂದ ಪುಷ್ಪವೃಷ್ಟಿ ಆಗುತ್ತದೆ!-ಕಲಾವಿದನ ಆತ್ಮಕ್ಕೆ ಚಿರಶಾಂತಿ ಕರೆಯುತ್ತಿವೆ! ಸಾವಿರ ಸಾವಿರ ಕಂಠಗಳಿಂದ ಒಂದೇ ಘೋಷ' ಚಿದಂಬರ ರಾವ್‌ಜೀ ಅಮರರಹೇ **(ರೇಡಿಯೋ off)** |
| ಚಿದಂ: | That Chidambar is dead! Long live this Chidambar! |
| | **(ಶ್ರೀಮತಿ ಬರುವಳು)** |
| ಚಿದಂ: | ಕೇಳಿದೆಯೇನೇ ತಮ್ಮರಾಯರ ಅಂತ್ಯಯಾತ್ರೆಯ ಸಡಗರ-ಸಂಭ್ರಮ? |
| ಶ್ರೀಮತಿ: | ಹೌದು ಹೌದು.. ಕೇಳಿದೆ. ನನಗೆ ಅನಿಸಿತು ಇಂಥ ರಾಜವೈಭವದಿಂದ ಸುಡುವದಾದರೆ ಯಾರು ಸಾಯಲಿಕ್ಕಿಲ್ಲ! |
| ಚಿದಂ: | ಹೋ ಹೋ ನಾನಂತೂ ಒಂಟಿ ಕಾಲ ಮೇಲೆ ಸಿದ್ಧ! **(ಆಕೆ ಅವನ ಬಾಯಿ ಮುಚ್ಚುತ್ತಾಳೆ)** |
| ಶ್ರೀಮತಿ: | ಬಿಡ್ತು ಅನ್ನೀ. ಹಾಗೆಲ್ಲ ಅಭದ್ರ ಅಡಬಾರದು. ಇದೇನು ಈ ಮೂಲೇಲಿ ಇನ್ನೊಂದು ಚಿತ್ರ! ನೀವು ಈ ಕಸಬನ್ನು ಯಾವಾಗ ಕಲಿತೀರಿ? |
| ಚಿದಂ: | ಈ ಕಸಬು ಕಸದ ಬುಟ್ಟಿಯಿಂದ ಬಂದದ್ದು. ಅಂದರೆ ಕಲಿಯದೇ ಬಂದದ್ದು. 'ಕಲಿಸದೆ ಬರ್ಪುದು ಕೌಶಲಂ' |
| ಶ್ರೀಮತಿ: | ಅಂದ್ರೆ? ಇದೆಲ್ಲಿಯ ಕಾವ್ಯ? |
| ಚಿದಂ: | **(ನಗುತ)** ಅಲ್ಲಿಯದೇ. ಕಾಳಿದಾಸನ ಮಾತಿನ ಕನ್ನಡ ಅನುವಾದ. ಅಲ್ವೇ, ವೈದ್ಯರಲ್ಲಿ ಮದ್ದು ಅರೆಯುವ ಜವಾನ ತಾನೂ ಮದ್ದುಗಾರ ನಾಗೋದಿಲ್ವೇ? ಹಾಗೇ ಚಿತ್ರಕಾರರ ಬಣ್ಣದ ಬ್ರಶು ತೊಳೆದ ಈ ಜವಾನ ಚಿತ್ರ ಬರೆಯಲು ಕೊಂಚ ಕಲಿತರೆ ಏನು ತಪ್ಪೆ? |
| ಶ್ರೀಮತಿ: | ಅಯ್ತು ಬಿಡಿ-ತಪ್ಪು ನಂದೇ-ಹಾಗೇ ಕೇಳಿದ್ದು. ಇದು ಯಾವ ಚಿತ್ರ? |
| ಚಿದಂ: | ಚಿತ್ರ ಯಾವದು-ಯಾರದು ಎಂದೆಲ್ಲ ಬರೆದಿಡಬೇಕಾದರೆ ಅದೆಂಥ ಚಿತ್ರ? ನೋಡಿದ ಕೂಡಲೆ ಗೊತ್ತಾಗಬೇಕು. ಅಂದರೇನೇ ಅದು ಚಿತ್ರ. ಇಕೋ ನೋಡು **(ತೆರೆಯುವನು)**. |
| ಶ್ರೀಮತಿ: | ಅವ್ವಯ್ಯ! ಇದು ನಂ-ನಂದೇ ಚಿತ್ರ. |

ಚಿದಂ: ನೋಡು ಚೆನ್ನಾಗಿ. ನಿಂದೋ ನಿನ್ನ ಅವ್ವಯ್ಯಂದೋ!

ಶ್ರೀಮತಿ: (ಹಿಗ್ಗಿ) ಎಷ್ಟು ಮುದ್ದಾಗಿದೆ! ನಂದೆಂದು ಯಾರೂ ಹೇಳಲಿಕ್ಕಿಲ್ಲ!

ಚಿದಂ: (ನಕ್ಕು) ಹಾಗಾದರೆ ನಿಂಗ್ ಹೇಗೆ ಗೊತ್ತಾಯ್ತು-ನಿಂದೇ ಎಂದು. ಬಿಂಬದಂತೆಯೇ ಪ್ರತಿಬಿಂಬ ಅಲ್ವೇ?

ಶ್ರೀಮತಿ: (ಹಿಗ್ಗಿ ಅಷ್ಟೇ ನಾಚಿ) ಅಂದರೆ-ನಾನು ಇಷ್ಟು ಚೆಂದ ಕಾಣ್ತೇನೇ?

ಚಿದಂ: ಹಳೇ ಹುಚ್ಚಿ ನೀನು! No fool, an old fool!

ಶ್ರೀಮತಿ: (ಹುಸಿ ಕೋಪ) ಎಷ್ಟು ಹಳೇ. How old? (ಆತ ಕೆನ್ನೆಯ ಮೇಲೆ ಬೆರಳು ಆಡಿಸುವನು. ಆಕೆಯ ನಗೆ) ಸರಿ ನೀವು ಒಳ್ಳೆಯ ಚಿತ್ರಕಾರರಾಗಿ ಬಿಟ್ಟಿದ್ದೀರಿ-ನಿಮ್ಮ ರಾಯರಂತೆಯೇ, ಇನ್ನು ಪರ್ವಾ ಇಲ್ಲ.

ಚಿದಂ: ಅಂದರೆ ನನ್ನ ಅಂತ್ಯಯಾತ್ರೆಯದೋ ಈ ಪರ್ವ?

ಶ್ರೀಮತಿ: ಛೀ ನಿಮ್ಮ ಡೊಂಕುಬುದ್ದಿ! ಈ ಚಿತ್ರ

ಚಿದಂ: ಅದೇನಂತೀ? ನಾನೇ ಬರೆದ ಎಷ್ಟೋ ಚಿತ್ರ ರಾಯರ ಹೆಸರಲ್ಲಿ ಮಾರಿ ಹೋಗಿವೆ!

ಶ್ರೀಮತಿ: ಓ ಹಾಗೋ! ರಾಯರ ಪುಣ್ಯ. ಮತ್ತೆ ತಾನೇ ರಾಯರು ಎಂದು ಮತ್ತೆ ಹೇಳಿಕೊಳ್ಳಲು ಸುರುಮಾಡಲಿಲ್ಲ! ಇರ್ಲಿ ಬಿಡಿ. ನೀವು ಹೀಗೆ ಚಿತ್ರ ಬರೀತಾ ಇದ್ರೆ ಒಳ್ಳೆಯದೇ.

ಚಿದಂ: ಅದೇಕೆ ಒಳ್ಳೆಯದು? ಯಾರಿಗೆ?

ಶ್ರೀಮತಿ: ನೀವು ಹಾಟ್ಲೆಗೆ ಬಂದ ಮೇಲೆ ಇದಕ್ಕೂ ಹಿಂದೆ ಒಂದೆರಡು ಚಿತ್ರ ಬರೆದಿದ್ದಿರಿ. ಗಡಿಬಿಡಿಯಿಂದ ಚಿದಂಬರ ಮೂಲೆಗೆ ಹೋಗಿ ತೆರೆಸರಿಸಿ ನೋಡುತ್ತಾನೆ. ಶ್ರೀಮತಿ ದೊಡ್ಡಕ್ಕೆ ಕುಲು ಕುಲು ನಗುತ್ತಾಳೆ.

ಚಿದಂ: ಅರೇ. ಅವೆಲ್ಲ ಎಲ್ಲಿ ಹೋದವು? ಯಾರೋ ಕದ್ದರು!

ಶ್ರೀಮತಿ: (ನಗುತ್ತ) ನಾನೇ ಕಳ್ಳಿ. ಅದಕ್ಕೆ ಅಂದೆ-ಇನ್ನು ಪರ್ವಾ ಇಲ್ಲ ಒಳ್ಳೆಯದೇ ಆಯಿತು ಎಂತ.

ಚಿದಂ: ಸರಿ ಹೋಯ್ತು. ಕಳ್ಳಿ ಕಣ್ಣೆದುರೇ ಇದ್ದರೆ ಪರ್ವಾ ಇಲ್ಲ! ಅದರೆ ಇದು ಒಳ್ಳೆಯದಾಗಲಿಲ್ಲ! ಅವನ್ನು ಎಲ್ಲಿಟ್ಟೆ? ಹಗಲಗಳ್ಳಿss!

ಶ್ರೀಮತಿ: ಹಗಲು ಕಳಲಿಲ್ಲ. ಅದನ್ನು ಹಾಡೇಹಗಲೇ ಒಯ್ದು ಮಾರಿಬಿಟ್ಟೆ! ಒಳ್ಳೆಯದಾಗಲಿಲ್ಲ? ಒಂದೊಂದಕ್ಕೆ ೫೦ ರೂಪಾಯಿ ಕೊಟ್ಟ-ಅ ಸೋಡಾ ಅಂಗಡಿ ಸೋಮಶೇಖರ.

ಚಿದಂ: ಅ ಸೋಡಾ ಅಂಗಡಿ ಸೋಮ ನನ್ನ ಚಿತ್ರ ಖರೀದಿ ಮಾಡಿದನೇ? ನಿಲ್ಲು-ಹೋಗಿ ಅವನಿಂದ ಅವನ್ನ ಇಸಕೊಂಡು ಬರ್ತೇನೆ.

(ಓಡುವನು)

ಶ್ರೀಮತಿ: ಏನು? ಯಾಕೆ? ಏನಾಯ್ತು? ಒಳ್ಳೆಯ ಬೆಲೆ ಬಂತು ಕೊಟ್ಟೆ. ಕೈಬಂದ ರೊಕ್ಕ ಬಿಟ್ಟುಕೊಡುವಷ್ಟು ಹಳೆಹುಚ್ಚಿ ನಾನಲ್ಲ!

ಚಿದಂ: (ವ್ಯಗ್ರ) ಬೆಲೆ ಒಲೇಲಿ ಬಿತ್ತು? ನಿನ್ನ ಕೈಗೆ ಹಣ. ನನ್ನ ಕೊರಳಿಗೆ ಹಗ್ಗ! ಅಲ್ಲ. ಅ ಚಿತ್ರದ ಮೇಲೆ ತಾರೀಖು ಇದೆ. ಅದು ದಾಖಲೆ ಆಗುತ್ತದೆ.

ಶ್ರೀಮತಿ: ತಾರೀಖು? ದಾಖಲೆ? ಇದೇನು ಮತ್ತೆ ಅವಾಂತರ?

ಚಿದಂ: ಅವಾಂತರ ಅಲ್ಲ ಗಂಡಾಂತರ! ಸುಮ್ಮನಿರು ಹುಚ್ಚಿ. ನಿಂಗೆ ಅದೇನೂ ಗೊತ್ತಾಗೋ ಹಾಂಗೆ ಇಲ್ಲ. ನಾನೇ ಅಲ್ಲಿಗೆ ಹೋಗಿ ಬರ್ತೇನೆ. (ಹೋಗುವನು)

ಶ್ರೀಮತಿ: ಇದೇನು? ಒಂದು ಥರಾ ಮಾಡಿದರು ಇವರು! ನಾನೇನು ತಪ್ಪು ಮಾಡಿದ್ದೆ? ಕೋಣೆಯ ಮೂಲೇಲಿ ಗೋಡೆಗೆ ಮುಖಾಮಾಡಿ ಇಟ್ಟ ಚಿತ್ರ. ಒಳ್ಳೆಯ ಬೆಲೆ ಬಂದ್ರೆ ಮಾರಬಾರದೇ? ನಂದೇನು ತಪ್ಪು? ಇದೂ ಒಂದು ಬೆಪ್ಪು!

(ಶ್ರೀ ರಾಡ್ರಗೀಜ ಮರ್ಚಂಟ ಬರುವನು ಅವನು ಆರ್ಟಡೀಲರ)

ರಾಡ್ರಿ: ನಮಸ್ಕಾರ! ಶ್ರೀಮತಿ ಜೀ!

ಶ್ರೀಮತಿ: ನಮಸ್ಕಾರ. ತಾವು ಯಾರು? ನನ್ನ ಹೆಸರು ತಮಗೆ ಹೇಗೆ ಗೊತ್ತು?

ರಾಡ್ರಿ: ನಂದು ಹೆಸರು ನಿಮಗೇಂಗೆ ಗೊತ್ತು? ನಿಮ್ಮ ಯಜಮಾನ್ರು ಎಲ್ಲಿ ಹೋದ್ರು? ಅವರ ಬೆಟ್ಟಿಗೆ ಬಂದೆ.

ಶ್ರೀಮತಿ: ತಾವು-?

ರಾಡ್ರಿ: ನಾವು ರಾಡ್ರಿಗೀಜ ಮರ್ಚಂಟ. ಬೆಂಗಳೂರಿಗೆ ನಾವು ಭಾರಿ ದೊಡ್ಡ ಅರ್ಟ್ ಡೀಲರ್. ಇಲ್ಲಿ ಅರ್ಟಿಸ್ಟರಿಗೆ, ಕಲೆಕ್ಟರ್ಸರಿಗೆ ನಮ್ಮ ಪರಿಚಯ ಜಾಸ್ತಿ. ನಮ್ಮ ಯಜಮಾನ್ರು.

ಶ್ರೀಮತಿ: ನಾನು ಹಾಗೆ ಶ್ರೀಮತಿ ಅಲ್ಲ. ಮಿಸೆಸ್ ಅಲ್ಲ. ನನ್ನ ಹೆಸರೇ ಶ್ರೀಮತಿ. ಅದು ಹೇಗೆ ನಿಮಗೆ ಗೊತ್ತಾಯ್ತು? ಎಂದು ಕೊಂಡೆ. ಅವರು ಇನ್ನು ನನ್ನ ಯಜಮಾನರಾಗಿಲ್ಲ.

ರಾಡ್ರಿ: ಅಗಲಿ ಬಿಡಿ. ಆಗೋರು. ಅದಕ್ಕೆ ಣಮ್ದು ಅಡ್ಡಿ ಏಣೂ ಇಲ್ಲ. ಇದು ಯಾವ್ದು? ಈ ಸ್ಟ್ಯಾಂಡಿನ ಮೇಲೆ? (ಹತ್ತಿರ ಹೋಗಿ) ಅಹಾಹಾ! ಓಹೋಹೋ.

ಶ್ರೀಮತಿ: (ನಾಚಿ, ಹಿಗ್ಗಿ) ಅದು ಚಿತ್ರ. ಅವರೇ ಬರೆದದ್ದು. ಯಾರದು ಹೇಳಿ?

ರಾಡ್ರಿ: ಅರೇ ಭಾಯಿ. ಹೇಳ್ದೇ ಏಣು? ಇದು ಣಿಮ್ದು ಚಿತ್ರ! ಅಹಾಹಾ! What pose! what our! what shade! what light! oh a marvel!

ಶ್ರೀಮತಿ: ಇದಕ್ಕೆ ಎಷ್ಟು ಬೆಲೆ ಕೋಡ್ತೀರಿ?

ರಾಡ್ರಿ: ಒಂದು ಸಾವಿರ ರೂಪಾಯಿ! One thousand ಕಣ್ಣು ಮುಚ್ಚಿ ಕೊಡಬಹುದು. (ಚಿತ್ರ ನೋಡುವದರಲ್ಲಿ ತನ್ಮಯ)

ಶ್ರೀಮತಿ: ಹೌದೇ? ಅಷ್ಟು ಬೆಲೆಯೇ? ಅಂಥ ಯೋಗ್ಯತೆಯೇ ಈ ಚಿತ್ರಕ್ಕೆ? (ತೀರ ಹತ್ತಿರ ಹೋಗಿ ಚಿತ್ರವನ್ನೂ ನೋಡುವಳು)

(ಚಿದಂಬರನ ಪ್ರವೇಶ).

ರಾಡ್ರಿ: ಹಾಂ ಹಾಂ ಸರಿ ಹಿಂದೆ. ಅದೇನು ಮಾಡ್ತೀ ಅಲ್ಲಿ? ಅದು ಚಿತ್ರ. ನಶ್ಯದ ಡಬ್ಬಿ ಅಲ್ಲ.-ಹಾಗೆ ಮೂಗು ಹೊಕ್ಕಿಸಲಿಕ್ಕೆ. ದೂರ, ಇನ್ನೂ ದೂರ ನಿಂತು ನೋಡಬೇಕು. (ಈಗ ರಾಡ್ರಿಗೀಜನನ್ನು ಕಂಡು) ಅಂ ತಾವು ಯಾರು?

ಶ್ರೀಮತಿ: ಣಾನು ಶರ್ Good Evening. (ತನ್ನ ಕಾರ್ಡು ಕೈಗೆ ಕೊಡುವನು).

ರಾಡ್ರಿ: ಅವರು ಬೆಂಗಳೂರಿನವರು-ಪ್ರಮುಖ ಅರ್ಟಿ ಡೀಲರ.

ಚಿದಂ: (ಭಯ ಚಕಿತ) ರಾಡ್ರಿಗೀಜ ಮರ್ಚಂಟ! (ಕಾರ್ಡು ಕೈಯಿಂದ ಕೆಳಗೆ ಬೀಳುವದು. ಕುರ್ಚಿಯಲ್ಲಿ ಧಪ್ಪನೆ ಕುಸಿಯುವನು)

ರಾಡ್ರಿ: ಬೆಂಗಳೂರಿನಲ್ಲಿ ಮಾತ್ರವಲ್ಲ, ಮ್ಯಾಡಂ. ಬೆಂಗಳೂರಿನ ಹೊರಗೂ We. Well Knownಉ. ನಿಮ್ಮ ಚಿದಂಬರ ರಾಯರಿಗೆ ನಾನೇ ಡೀಲರು. ನನ್ನ ಅವರ ವ್ಯವಹಾರ ಭಾಳ ಹಳಯದು. More than 20 year 500. ಇಫ್ಟು ಅಪೂರ್ವದ ಭೆಟ್ಟಿ!

ಚಿದಂ: ಅದೇ ತಾವು ದಿಲ್ಲಿಗೆ ದಯಮಾಡಿಸಿಲ್ವೇ? ಅವರನ್ನು ಅಲ್ಲಿ

ರಾಡ್ರಿ: ಶಾಕು ಬಿಡ್ರಿ ಅದೆಲ್ಲ ಶಮಾಚಾರ-ದಿಳ್ಳಿಗೆ ಹೋಗೇಬಿಡತಿದ್ದೆಣೋ ಏಣೋ ಅಂತ್ಯದರ್ಶಣಾ ಎಂದ! ಅದರೆ ಅ ಶೋಡಾ ಅಂಗಡಿ ಶೋಮಶೇಖರನಲ್ಲಿ ಎರಡು ಚಿತ್ರ. ಕಂಡೆ. ರಾಯರ ದರ್ಶಣಾ ಅಲ್ಲೆ ಆಯ್ತು!

ಚಿದಂ: ಸರಿ ಅದೆ ಅಲ್ಲಿ ನಾನು ಈಗ ಹೋಗಿ ಬಂದೆ. ಬರಿಗೈಯಿಂದ. ಅಲ್ಲಿ ಎರಡೂ ಚಿತ್ರ ಇದ್ದಿಲ್ಲ.

ರಾಡ್ರಿ: ಹೇಗಿರೋದು? ಇರೋದು ಹೇಗೆ? ಅಂದೆ, ಣಾಣೆದ್ದ ಮೇಲೆ. ಣಾಣೇ ಕೊಂಡುಕೊಂಡೆ-ಎರಡೂ ಚಿತ್ರ!

ಶ್ರೀಮತಿ: ಏನು ಕೊಟ್ರೀ?

ರಾಡ್ರಿ: ಒಂದೊಂದಕ್ಕೆ ೪೦೦ ರೂಪಾಯಿ.

ಶ್ರೀಮತಿ: ನಾನ್ನೂರು? (ಬೆರಗಾಗಿ)

ರಾಡ್ರಿ: Rs. Four hundred only. ಆ ಮಂಗಣ ಕೈಗೆ ಮಾಣಿಕ ಕೊಟ್ರೆ ಹೇಗೆ? ಣಂಗೆ ಗೊತ್ತು ರಾಯರ ಪೇಂಟಿಗ್ಸದ ಬೆಲೆ!

ಶ್ರೀಮತಿ: ಆದರೆ ಮಿಸ್ಟರ, ಅವು ರಾಯರ ಚಿತ್ರ ಅಲ್ಲ! ನಮ್ಮ ಇವ್ರು ಬರೆದವು!

ಚಿದಂ: ಹೌದು. ನೀವು ಇದ್ದದ್ದೇ ಅಂದ್ರಿ. ರಾಯರ ಶೈಲಿಯಲ್ಲಿಯೇ ನಾನೂ ಬರೀತೇನಲ್ಲ. ಅದೇ ಈ ರಾಯರದೆಂಬ ಚಿತ್ರ. ವಿಚಿತ್ರವಲ್ವೇ? (ನಕ್ಕು) ಏನಂತೀರಿ ರೊಡ್ಡ-ರೊಡ್?

ರಾಡ್ರಿ: ಹಾಗೇ ಅಣ್ಣಿರಿ. ರೊಡ್ಡ ಅಣ್ಣೆ ಪರ್ವಾ‌ಇಲ್ಲ. ಣಣ್ಣ ಬರೆ ಹಸರು ರೊಡ್ಡ ಮಾಚಣ್ಣ! ನಂದು ರೊಡ್ಡಗ್ಯೆ! ತಬ್ಬಲಿಯಾದ ಣಣ್ಣನ್ನು ಒಂದು ಮಿಶಣರಿ ಸಂಸ್ಥೆ ಸಾಕಿ ಸಲುಹಿತು. ಅವರು ಣಣ್ಣನ್ನು ರಾಡ್ರಿಗೀಜ ಮರ್ಚಂಟನಾಗಿ ಮಾಡಿದರು!

ಚಿದಂ: ಸರಿ ಸರಿ ಆದರೆ ನನಗೇಕೆ ನಿನ್ನ ರೊಡ್ಡಗ್ಯೆ ಕಾಣೆಸ್ತಿ ಅಪ್ಪ?

ರಾಡ್ರಿ: ಹೋಗಲಿ ಬಿಡಿ. ಣಾಬಂದದ್ದು ಣಣ್ಣ ಕಥೆ ಹೇಳಲಿಕ್ಕಲ್ಲ ಶರ್. ಣೆಮ್ಮ ಕಥೆ ಕೇಳಲಿಕ್ಕೆ. ಚಿದಂಬರರಾಯರೇ!

ಶ್ರೀಮತಿ: ಮತ್ತೆ ಚಿದಂಬರ ರಾಯರು? ಇದೇನಂತೀರಿ? ಇವರು ಸಾಂಬಶಿವಯ್ಯ ಆ ಚಿತ್ರಕಾರರ ಜವಾನ, ಹಂ!.

ರಾಡ್ರಿ: ಶ್ರೀಮತೀಜೀ ಣೇಂ ಶುಮ್ಮನಿರಿ.

ಶ್ರೀಮತಿ: ಅಲ್ಲ.

ರಾಡ್ರಿ: ಅಲ್ಲ - ಅಕಬರನಾದ! ಶುಮ್ಮನಿರು ಣೇ ಣೇಂ ಏನು ಕೇಳ್ತೀರಿ? ಎಷ್ಟು ರಕಂ? ಏಕೊಳ್ಳಿ. ಣಾ ಮಾತಾಡಿಸಲು ಬಂದದ್ದು ಇವರಣ್ನು.

ಚಿದಂ: ಛೇ ಇದೇನೋ Miss understanding

ರಾಡ್ರಿ: ಣೋ ಣೋ! Miss understanding ಣಂದು. ರಾಯರೇ, ಒಂದು ಮಾತು ಕೇಳಿ. ಆ ಶೋಡಾ ಅಂಗಡಿ ಶೋಮಸೇಖರನ ಹತ್ರ ಇದ್ದ ಎರಡೂ ಶುಂದರ ಚಿತ್ರ-

| | |
|---|---|
| **ಶ್ರೀಮತಿ:** | ಅವರಿಗೇನು ಕೇಳ್ತೀರಿ? ಆ ಚಿತ್ರ ನಾನೇ ಮಾರಿದ್ದು ಸೋಮಶೇಖರಿನಿಗೆ ಒಂದೊಂದು ಚಿತ್ರಕ್ಕೆ ೫೦ ರೂಪಾಯಿ-ಆ ಪುಣ್ಯಾತ್ಮ ನಿಮ್ಮಿಂದ ೪೦೦ ರೂಪಾಯಿ ಗಿಟ್ಟಿಸಿಕೊಂಡ. |
| **ರಾಡ್ರಿ:** | ಹೋಗಲಿ ಬಿಡಿ. Dont you worry madam. ಇಕಳ್ಳಿ. six hundred ಒಂದೊಂದು ಚಿತ್ರಕ್ಕೆ two hundred ಹೆಚ್ಚು! ಆಯ್ತೋ? |
| **ಶ್ರೀಮತಿ:** | ಅಯ್ಯೋಪ್ಪ! ಇಷ್ಟೆಲ್ಲ ದುಡ್ಡು? |
| **ರಾಡ್ರಿ:** | ಶ್ರೀಮತೀಜೀ, ನಿಮಗೆ ಇದರ ರಹಸ್ಯ ಗೊತ್ತಿಲ್ಲ. ಇಲ್ಲಿದೆ ಚಿದಂಬರರ ಸ್ವಾರಸ್ಯ. ಇದು ಚಿದಂಬರರಾಯರ ಚಿತ್ರ. ರಾಯರ ಭಕ್ತರು ಒಂದೊಂದಕ್ಕೆ Eight Hundredu ಕಣ್ಣು ಮುಚ್ಚಿ ಕೊಟ್ಟು ಹೋಗ್ತಾರೆ. **(ಹಣ ಕೊಡ್ತಾನೆ)** ನೋಡಿ ಎಣ್ಣಿಸಿ ಕೊಳ್ಳಿ. |
| **ಚಿದಂ:** | ಶ್ರೀಮತಿ ಒಳಗೆ ಹೋಗಿ ನೋಡಿ ಎಣಿಸಿ ಬೀರಿನಲ್ಲಿ ಇಟ್ಟು ಬಾ. ಒಳ್ಳೆ ಹುಡುಗಿ **(ಶ್ರೀಮತಿ ಮನಸ್ಸಿಲ್ಲದ ಮನಸ್ಸಿನಲ್ಲಿ ಸುಳ್ಳು ಮುನಿಸಿನಿಂದ ಒಳಗೆ ಹೋಗುತ್ತಾಳೆ.)** ಏನಂದ್ರೀ? ರಾಡ್ರೀ. |
| **ರಾಡ್ರಿ:** | ಆ ಚಿತ್ರಗಳಿಗೆ ಸಹಿ ಯಾರದು ಗೊತ್ತೇ? |
| **ಚಿದಂ:** | **(ದಿಗಿಲು ಬದ್ದು)** ಅಯ್ಯೋ! ಘಾತವಾಯಿತು! |
| **ರಾಡ್ರಿ:** | ಮತ್ತೆ ತಾರೀಖು ಯಾವದು ಗೊತ್ತೇ? |
| **ಚಿದಂ:** | **(ಕಿಮ್ಮಿ ಕಿಮ್ಮಿ)** ಅದು-ಅದು ಹೀ-ಗಾಯ್ತು! **(ದೇಶಾವರಿನಗೆ. ಸಮಜಾಯಿಸುವ ರೀತಿ)** ತಾರೀಖು ಸರಿ. ಆದರೆ ಆ ಸಹಿ ತಪ್ಪು. ರಾಯರದೇ ಹಾಕಿಬಿಟ್ಟೆ.! ನೀವೂ ಒಳ್ಳೆಯ ಶಾಣೆ ಜವಾನೇ ಇದೀರಿ-ಇರಲೇ ಬೇಕಲ್ಲ ಮತ್ತೆ. ನಿಮ್ಮ ವ್ಯವಹಾರಾನೇ ಹಾಗೆ! ಅಸಲಿ-ನಕಲಿ ಜಜ್ಜ ಮಾಡೋ ಕಸಬೇ ನಿಮ್ಮದು, ಮಿಸ್ಟರ ಮರ್ಚಂಟ! |
| **ರಾಡ್ರಿ:** | ಅದಕ್ಕೆ ಅಣದದ್ದು ಣಾಣೆ. ಅದು ಣಕಲೀ ಅಲ್ಲ. ಅಶಲೀ ಅಶಲೀಣೇ! ಇಷ್ಟೆಲ್ಲ ವರ್ಷ ರಾಯರ ಶಹಿ ಣಾಣು ಣೋಡಿಲ್ವೆ? ಣೂರುಗಟ್ಲೆ ಚಿತ್ರ ಮಾರಿಲ್ವೆ? ಲಕ್ಷಾಂತರ ರೂಪಾಯಿ ವ್ಯವಹಾರ ರಾಯರ ಸಂಗಡ ಣಡಶಿಲ್ವೆ? |
| **ಚಿದಂ:** | ಆದರೂ ಆ ಸಹಿ ಮಾತ್ರ ನಕಲಿ! ಶುದ್ಧನಕಲಿ! ರಾಯರ ಸಹಿನೂ ಮಾಡಿ ಮಾಡಿ ನಂಗೆ ಒಳ್ಳೆ ರೂಢಿ! |
| **ರಾಡ್ರಿ:** | ಇರ್ಲಿ ಆ ಒಣಾ ಹರಟೆ ಸಾಕು! ನಾ ಹೇಳ್ತೇನೆ ಕೇಳಿ. ಸತ್ತವರು ದಿಳ್ಳೀಲಿ ಸುಟ್ಕೊಂಡವ್ರು ಣೇವೇ. ಣಣ್ಣದೇಣೂ ಗಂಟು ಹೋಗೋದಿಲ್ಲ. |

ಚಿದಂ: ಅಯ್ತು ಮತ್ತೆ ಒಂದು ಚಿಂತೆ ಹರೀತು.

ರಾಡ್ರಿ: ಇಲ್ಲಿ ಇಣ್ಣೊಂದು ಚಿಂತೆ ಹರೀತು.

ಚಿದಂ: ಅದೇನು ಮತ್ತೆ?

ರಾಡ್ರಿ: ಅದು ಹೀಗೆ ಶರ್. ಆ ಆಂಧ್ರಪ್ರದೇಶದ ರಾಜ್ಯಪಾಲರಿಲ್ವೆ-ರಾಮಕೃಷ್ಣರಾವ್. ಅವರು ಬುಣಾದಿಯಿಂದ ಣಿಮ್ಮ ಚಿತ್ರಗಳ ಷೋಕಿ. ಅವರಿಗೆ ಮೊಣ್ಣೆ ಆ ಶೋಮಶೇಖರಣ ಕಡೆಯ ಚಿತ್ರ ಮಾರಿಬಿಟ್ಟೆ. ಅವರಿಗೆ ಅದರ ತಾರೀಖು ನಿಮ್ಮ ಶಹಿಗಳ ಬಗೆಗೇನೇ ಅಣುಮಾಣ ಬಂಧ್ಬಿಡ್ತು. ಣಾಣೇ ಮೋಸ ಮಾಡ್ಡೆನೆಂದು ಆ ರಾಜ್ಯಪಾಲರ ಅಂಬೋಣ. ಣಿಮ್ಮ ಆ ಚಿತ್ರದ ತಾರೀಖು ಣಿಮ್ಮ ಹೆಣಸುಟ್ಟ ತಾರೀಖು! ಏಣಂತೀರಿ? ಆ ಮಾರಾಯ್ರು ಈಗ ಣಣ್ಣ ಕೋರ್ಟಿಗೆ ಎಳೀತಾರಂತೆ! ಣೋಟೀಶೂ ಕೊಟ್ಟಾರೆ. ನೋಡಿ **(ತೆಗೆದುತೋರಿಸುತ್ತಾನೆ- ಬ್ರೀಫ್ ಕೇಜನಿಂದ).**

ಚಿದಂ: ಸರಿ ಇದಕ್ಕೆ ನಾ ಏನು ಮಾಡಬೇಕಂತೀರಿ? ಸತ್ತು ಸುಟ್ಟಂವ ಮತ್ತೆ ಹುಟ್ಟಬರ್ಬೇಕಾ?

ರಾಡ್ರಿ: ಣೇವಲ್ಲ. ಣಾಣೆ ಮಾಡಬೇಕಾದದ್ದು. ಣಿಮ್ಮ ಈ ಚಿದಂಬರ ರಹಸ್ಯ ಜಾಹೀರು ಮಾಡಬೇಕಾಗಿದೆ!

ಚಿದಂ: ಛೇ ಛೇ ಛೇ! ಅದೊಂದು ಮಾಡಬೇಡಿ. ಸುಮ್ಮನಿರಿ. - ಸುಮ್ಮನಿರಲಿಕ್ಕೆ ನಿಮಗೆ ಬೆಲೆ ಏನು ಕೊಡ್ಲಿ? ಹೇಳಿ ಬಿಡಿ.

ರಾಡ್ರಿ: ಕೊಡ್ಲಿ! ಆ ರಾಮಕೃಷ್ಣ ರಾಯರೇ ಹಾಕ್ತಾರೆ ಕೊಡ್ಲಿ! ಣಣ್ಣ ತಲೆಗೆ! ಈಗ ಣೇವು ಣಣ್ಣ ಉಳಿಸಬೇಕು. ಇಣ್ಣೆನೂ ಇಲ್ಲ ಜಾಹೀರು ಮಾಡ್ತೇನೆ. ಣಿಮ್ಮ ಹಕೀಕತು ಪೇಪರುಗಳಲ್ಲಿ ಕೊಡ್ತೇನೆ.

**(ಪತ್ರಿಕಾ ಪ್ರತಿನಿಧಿ ಬರುತ್ತಾನೆ ಅವಸರವಸರದಲ್ಲಿ).**

ಪ್ರತಿನಿಧಿ: ಇಕೋ. ಕೊಡ್ರಿ, ನಂಗೇ ಕೊಡ್ರಿ ನಾನೇ ಬಂದೆ 'ಶಂಖಿಧ್ವನಿ' ನಮ್ಮ ಪತ್ರಿಕೆ ಹೊಸ ಸುದ್ದಿ, ಹುಸಿ ಸುದ್ದಿ, ಬಿಸಿ ಸುದ್ದಿ, ಹಸಿಸುದ್ದಿ ಎಲ್ಲಕ್ಕೂ ನಾನೇ ಸತ್ಪಾತ್ರ.

ಚಿದಂ: ಎಲಾ ಇದೇನು ಬಂತು ಪಿಶಾಚಿ! ಓಯ್ ನೀವು ಯಾರು ಶ್ರೀಮಾನ್‌ರೇ-

ಪ್ರತಿನಿಧಿ: ನಾನು ನಿಮ್ಮ ಡಾಕ್ಟರ ಧನ್ವಂತರಿಯವರ ಅಸಿಸ್ಟಂಟ ಶ್ರೀ ಕುಂಭಕೋಣಂ ಅವರ ಬ್ರದರು. ನನ್ನ ಹೆಸರು -

ಚಿದಂ: (ದಿಗ್ಗನೆ ಎದ್ದು) ಹೆಸರು! What brother! ಉಸಿರೆತ್ತ ಬೇಡಿ. ತೊಲಗಿ ಇಲ್ಲಿಂದ.

ಪ್ರತಿನಿಧಿ: ತಡೀರಿ ತಡೀರಿ. Steady please. ಒಂದು ನಿಮಿಷ. **(ಕೈ ಕೆಮರಾದಿಂದ ಫಕ್ಕನೆ ಚಿದಂಬರನ snap ಹೊಡೆಯುವನು.)** Thank you ಇನ್ನು ಮಾತಾಡಿ. ಹೀಗೆಲ್ಲ ರೇಗಿದ್ರೆ ಹೇಗೆ? ಆಂ? ಇಕೊಳ್ಳಿ. ಇಲ್ಲಿ ಒಂದು ಹೇಳಿಕೆ ಬರೆದು ತಂದಿದ್ದೇನೆ.

ರಾಡ್ರಿ: ಹೇಳಿಕೆ?

ಪ್ರತಿನಿಧಿ: ಹಾಂ ಹೇಳಿಕೆ ಸರ್ ಇದಕ್ಕೊಂದು ಸಹಿ ಎಳೆದು ಬಿಡ್ರಿ, ಹೂಂ.

ಚಿದಂ: ಸಹಿ ಎಳೆಯುವದಿಲ್ಲ! ನಿಮ್ಮನ್ನೆ ಎಳೆದು ಹೊರಗೆ ಹಾಕ್ತೇನೆ!

ಪ್ರತಿನಿಧಿ: ಅಡ್ಡಿ ಇಲ್ಲ ಅದನ್ನು ಮಾಡೀರಂತೆ. ಸದ್ಯ ಇದಕ್ಕೊಂದು ಸಹಿ-

ಚಿದಂ: ಅದೇನು ಬರೆದು ತಂದಿದ್ದೀರಿ?

ಪ್ರತಿನಿಧಿ: ಅದೇನಿಲ್ಲ ನಿಮ್ಮ ಚಿದಂಬರರಾಯ್ರು ಅದಾರೋ ಮದರಾಸಿನ ದೊಡ್ಡ ಸಾವುಕಾರನ ಮಗಳ ಕೊರಳಿಗೆ ಬಿದ್ದಿದರಂತೆ!

ಚಿದಂ: **(ಸಿಟ್ಟು ತಡೆಯಲಾರದೆ ಎದ್ದು, ಕುಳಿತು, ಎದ್ದು)** ಅಲ್ಲ ಅಲ್ಲ. ಆ ಮಗಳೇ ಅವರ ಕೊರಳಿಗೆ ಬಿದ್ದವಳು. ಅವಳಿಂದ ಪಾರಾಗಲಿಕ್ಕೇ ನಾವು ಅಲ್ಲ, ಅಲ್ಲ ನಮ್ಮ ರಾಯ್ರು ಇಲ್ಲಿಗೆ ಓಡಿ ಬಂದದ್ದು.

ಪ್ರತಿನಿಧಿ: ಸರಿಸರಿ, ಆ ಕತೆ ಒಳ್ಳೇ ಸಸ್ಪೆನ್ಸ್. ಆದೇ ಇದು. ಅದಕ್ಕೆ ನಿಮ್ಮ ಒಂದು ಸಹಿ -

ಚಿದಂ: ಇತ್ತ ಕೊಡಿ ಆ ಕಾಗದ. **(ಓದುವಂತೆ ನಟಿಸಿ ಅದನ್ನು ಹರಿದು ಚೂರು ಮಾಡಿ ಅವನ ಮೋರೆಗೆ ಒಗೆಯುತ್ತಾನೆ.)** ಮಿಸ್ಟರ್ ರಾಡ್ರೀಗೀಜ ಕಾಣಿಸಿಬಿಡಿ ಈ ರಾಸ್ಕಲಗೆ ನಿಮ್ಮ ರೊಡ್ಡಗೈಯ ಪ್ರತಾಪ! ಒಮ್ಮೆ ಇವನನ್ನು ಹೊರಗಟ್ಟಿ ನಿಮಗೊಂದು ಹೊಸ ಚಿತ್ರ ಪುಕ್ಕಟೆ ಕೊಟ್ಟುಬಿಡ್ತೇನೆ.

ಶ್ರೀಮತಿ: **(ಫಕ್ಕನೆ ಓಡಿ ಬಂದು)** ಏನದು ಪುಕ್ಕಟೆ ಕೊಡೋದು? ನಿಮ್ಮ ಚಿತ್ರ ಅಂದರೆ ಏನೆಂದು ಮಾಡಿದ್ರಿ? ಅದೇನು ಹರಕು ಚಿಂದಿ? ಪುಕ್ಕಟೆ ಬಿಕ್ಕಟೆ ಕೊಡಲಿಕ್ಕೆ?

ರಾಡ್ರಿ: ಬಿಕ್ಕಟ್ಟೇ ಬಂದದ್ದು ಶ್ಯುಳ್ಳಲ್ಲ. ಈ ಶುದ್ದಿಗಾರನ ಮಾತು ಕೇಳಿದ್ರಾ? ಆದರೆ ನನ್ನ ಬಿಕ್ಕಟ್ಟು ಬಗೆ ಹರಿಯಿತು! ಈ ರಾಯ್ರೇ ನಮ್ಮ ಚಿತ್ರಕಾರರು! ಚಿದಂಬರರಾಯ್ರ ಈ ಇವರು! ಹಃ ಹಃ ಹಃ

ಶ್ರೀಮತಿ: ಸಾಕು ಸುಮ್ಮನಿರಿ ಎಲ್ಲ ಕೇಳಿದೆ. ಅದಕ್ಕೆ ಓಡಿಬಂದೆ. ಯಾರ್ರೀ ನೀವು? ಯಾರು ಯಾರನ್ನು ಗಂಟು ಹಾಕಿಕೊಂಡ್ರು? ಯಾರ ಕೊರಳಿಗೆ ಯಾರು

ಬಿದ್ರು? ದೊಡ್ಡ ಶಂಖ ಊದುತ್ತಾರೆ!

ಚಿದಂ: ಹೇಳಿ ಹೇಳಿ ನೀವೇ ಹೇಳ್ರಿ! ನೀ ಕೇಳು.

ಶ್ರೀಮತಿ: ಹೇಳೋದಿಲ್ಲ ಕೇಳೊದಿಲ್ಲ. ಏನ್ರಿ ನಿಮ್ಮ ಶಂಖ ಕಟ್ಟಿಕೊಂಡು ಸುಮ್ಮನೆ ಹೋಗತೀರೊ. ಏನ್ **(ಒಳಗಿಂದ ಹಂಟರ್ ತಂದು)** ಏನ್ ಇದರ ಪ್ರಯೋಗ ಮಾಡಬೇಕೊ? ಆ ಸಾವುಕಾರನ ಮಗಳು ನಾನೇ. ಇವರ ಬೆನ್ನಿಗೆ ಇಲ್ಲಿಗೆ ಬಂದೆ. ಇನ್ನೇನು ಬೇಕು ನಿಮಗೆ? ಹೂಂ ಕಾಲ್‌ಕಿತ್ತಿ?-

ಪ್ರತಿನಿಧಿ: ಹೋಗ್ತೇನೆ ಹೋಗ್ತೇನೆ! ಇದೂ ಒಂದು ತಾಜಾ ಸುದ್ದಿ! ಒಬ್ಬ ಬಡ ಪತ್ರಿಕಾ ಪ್ರತಿನಿಧಿಯ ಮೇಲೆ ಅತ್ಯಾಚಾರ-ಚಿತ್ರಕಾರ ಚಿದಂಬರರಾಯರ ಜವಾನನಿಂದ! ಇದೂ ಒಂದು ಹೊಸ ವರದಿ ಒದರಿ ಹೇಳ್ತೇನೆ. **(ಓಡಿ ಹೋಗುವನು).**

ಚಿದಂ: **(ನಿಟ್ಟುಸಿರು)** ತೊಲಗಿತು ಶನಿ. ಆದರೆ ಇಲ್ಲಿ ನೀನೇಕೆ ಮತ್ತೆ ಬಂದೆ!

ಶ್ರೀಮತಿ: ನಿಮ್ಮ ಶನಿ ತೊಲಗಿಸಲಿಕ್ಕೆ! ಹಃ ಹಃ ಬೀರಿನಲ್ಲಿ ಹಣ ಇಟ್ಟು ಬಂದೆ. ಅಲ್ಲ ಮತ್ತೆ ಅಲ್ಲೇ ಕೂತು ಬಿಡಬೇಕಿತ್ತೇ?

ಚಿದಂ: ಅಲ್ಲ ಮತ್ತೆ ಇವರು ಹೇಳಿದ್ದೆಲ್ಲ ಕೇಳಲಿಲ್ಲವಷ್ಟೇ?

ಶ್ರೀಮತಿ: ಎಲ್ಲ ಕೇಳಲಿಕ್ಕೆ ಆಗಲಿಲ್ಲ. **(ನಗುತ್ತ)** ಸಾಕಷ್ಟು ಕೇಳಿದೆ ಬಿಡಿ -

ರಾಡ್ರಿ: ಏನೇಣು ಕೇಳಿದ್ರಿ?

ಶ್ರೀಮತಿ: ಇವರು ಇವರಲ್ಲ ಅಂತ! ಇವರೇ ರಾಯರು ಅಂತ! ಆದರೆ ಇದು ನಂಗೆ ಹಿಂದೇ ಗೊತ್ತು!

ಚಿದಂ: ಮುಗಿದೇ ಹೋಯ್ತು.

ರಾಡ್ರಿ: ರಾಜ್ಯಪಾಲರ ಕಥೆ ಕೇಳಿದ್ರಿ ಅಲ್ಲ? ಮತ್ತೆ ಣಂಗೆ ಬಂದ ಪ್ರಾಣಸಂಕಟ! ನಾಳೆ ಕೋರ್ಟಿನಲ್ಲಿ ಇವರ ಸಾಕ್ಷಿ ಆಗಬೇಕು! ತಾನೇ ರಾಯರು ಎಂದು. ಅದೇ ಜಾಹಿರನಾಮೆ. ಪತ್ರಿಕಾ ಪ್ರತಿನಿಧಿ ಪಲಾಯನ!

ಚಿದಂ: ಅಯ್ಯಯ್ಯೊ! ಸಾಕ್ಷಿ ಕೋರ್ಟಿನಲ್ಲಿ! ಕಟಕಟೆಯಲ್ಲಿ ನಿಂತು! ವಕೀಲರ ಸವಾಲಿಗೆ ಬಲಿ! ಅಯ್ಯೋ! ನಾ ಸತ್ತೆ ಸತ್ತೆ! **(ಮೂರ್ಛೆ ಬೀಳುವನು.)**

ಶ್ರೀಮತಿ: ಅಯ್ಯೋ! ಮೂರ್ಛೆ! ಡಾಕ್ಟರರಿಗೆ ಕರೀರಿ.

ರಾಡ್ರಿ: ಬೇಡ ಬೇಡ ಡಾಕ್ಟ ಬೇಡ. ಇದು ಒಂದು ಶಾಕು. ಯಾವ ಶೋಕಕ್ಕೂ ಕಾರಣವಿಲ್ಲ. ಹೋಗಿ ನೀರು ತಣ್ಣ-ತಣ್ಣೀರು. **(ರಾಯರನ್ನು ಉಪಚರಿಸುತ್ತಿರುವಾಗಲೇ ರಂಗದಲ್ಲಿ ಕತ್ತಲೆ ಕವಿಯುತ್ತದೆ.)**

ತೆರೆ

## ಅನುಬಂಧ

# ಗೌರೀಶ ಕಾಯ್ಕಿಣಿ ಬದುಕು-ಬರಹ

## ಬದುಕು

ಜನನ : ೧೨-೯-೧೯೧೨

ಶಿಕ್ಷಣ : ಪ್ರಾಥಮಿಕ (ಗೋಕರ್ಣ), ಮೆಟ್ರಿಕುಲೇಶನ್ (ಗಿಬ್‌ಹೈಸ್ಕೂಲ್ ಕುಮಟಾ), ಆರ್ಟ್ಸ್ ಪ್ರಥಮ ವರ್ಷ (ಕರ್ನಾಟಕ ಕಾಲೇಜ್, ಧಾರವಾಡ) ಎಸ್.ಟಿ.ಸಿ (ಮುಂಬೈ ಪ್ರಾಂಥಕ್ಕೇ ಸರ್ವಪ್ರಥಮ) ಹಿಂದಿ ರಾಷ್ಟ್ರಭಾಷಾ ವಿಶಾರದ.

ವೃತ್ತಿ : ೧೯೩೭ ರಿಂದ ೧೯೭೬ರ ವರೆಗೆ ಮಾಧ್ಯಮಿಕ ಶಾಲಾ ಅಧ್ಯಾಪಕ.

ವಿವಾಹ : ೧೯೫೩ರಲ್ಲಿ ಅಂತರ್ಜಾತಿಯ ವಿವಾಹ. ಪತ್ನಿ: ಶ್ರೀಮತಿ ಶಾಂತಾ ಕಾಯ್ಕಿಣಿ. (೧೯೫೪ರಲ್ಲಿ ಪುತ್ರ ಪ್ರಾಪ್ತಿ-ಜಯಂತ ಕಾಯ್ಕಿಣಿ.)

ವಿವಿಧ ಸಂಘಟನೆಗಳೊಂದಿಗೆ ಹೊಂದಿದ್ದ ಸಂಕರ್ಪ:

೧) 'Progress of Mysore' ಸಂಪಾದಕ ಮಂಡಳಿ ಸದಸ್ಯ

೨) ಕರ್ನಾಟಕ ವಿಶ್ವವಿದ್ಯಾಲಯದ ವ್ಯಾಸಂಗ ವಿಸ್ತರಣ ವಿಭಾಗದ ಸಲಹಾ ಸಮಿತಿ ಸದಸ್ಯ.

೩) 'ಆಕಾಶವಾಣಿ' ಧಾರವಾಡ ನಿಲಯದ ಸಲಹಾಸಮಿತಿ ಸದಸ್ಯ.

೪) ಉ.ಕ. ಜಿಲ್ಲಾ ಲೇಖಕ, ಪ್ರಕಾಶಕ ಹಾಗೂ ಪತ್ರಕರ್ತರ ಸಂಘದ ಅಧ್ಯಕ್ಷ.

ಸಂದ ಗೌರವಗಳು:

ಆದರ್ಶ ಶಿಕ್ಷಕ ರಾಜ್ಯ ಪ್ರಶಸ್ತಿ (೧೯೭೩).

ಕನ್ನಡ ಸಾಹಿತ್ಯ ಪರಿಷತ್ತಿನ ವಜ್ರಮಹೋತ್ಸವ ಗೌರವ ಪ್ರಶಸ್ತಿ (೧೯೭೭)

ವರ್ಧಮಾನ ಪ್ರಶಸ್ತಿ (೧೯೯೨)

ಕರ್ನಾಟಕ ವಿಶ್ವವಿದ್ಯಾಲಯದ ಗೌರವ ಡಾಕ್ಟರೇಟ್ (೧೯೯೩)

ಕರ್ನಾಟಕ ಸರಕಾರದ 'ರಾಜ್ಯೋತ್ಸವ ಪ್ರಶಸ್ತಿ' (೧೯೯೩)

'ನವಮಾನವತಾ ವಾದ' ಕೃತಿಗೆ ಕರ್ನಾಟಕ ಸಾಹಿತ್ಯ ಅಕಾಡೆಮಿ ಪ್ರಶಸ್ತಿ (೧೯೯೫)

ಮಂಗಳೂರಿನ 'ಸಂದೇಶ ಪ್ರಶಸ್ತಿ' (೧೯೯೬)

'ಮೀನಾಕ್ಷಿ' ಕೊಂಕಣಿ ಕವನ ಸಂಕಲನಕ್ಕೆ ಕೊಂಕಣಿ ಸಾಹಿತ್ಯ ಅಕಾಡೆಮಿ ಪ್ರಶಸ್ತಿ (೧೯೯೬)

ಬೆಂಗಳೂರಿನ ಡಾ॥ ಶಂಬಾ ವಿಚಾರ ವೇದಿಕೆಯ ಸಂಶೋಧನ ಪ್ರಶಸ್ತಿ (೧೯೯೭).

## ಬರಹ

೧೯೩೦ ರಿಂದ ಲೇಖನ ವ್ಯವಸಾಯ ಪ್ರಾರಂಭ. ಮೊದಲ ಲೇಖನ 'ಶಾಂಡಿಲ್ಯ ಪ್ರೇಮ ಸುಧಾ' (ಕನ್ನಡ ಮತ್ತು ಮರಾಠಿ ಭಕ್ತಿಗೀತೆಗಳ ಸಂಕಲನ).

## ಪ್ರಕಟಿತ ಗ್ರಂಥಗಳು

೧) ಶಾಂಡಿಲ್ಯ ಪ್ರೇಮಸುಧಾ (ಭಕ್ತಿಗೀತೆಗಳ ಸಂಕಲನ).
೨) ಗಂಡು-ಹೆಣ್ಣು
೩) ಪ್ರೀತಿ
೪) ಮನೋವಿಜ್ಞಾನದ ರೂಪರೇಖೆಗಳು
೫) ಮಾರ್ಕ್ಸವಾದ
೬) ಪಶ್ಚಿಮದ ಪ್ರತಿಭೆ ಭಾಗ-೧ (ವ್ಯಕ್ತಿ ಚಿತ್ರಣ)
೭) ಪಶ್ಚಿಮದ ಪ್ರತಿಭೆ ಭಾಗ-೨ ( ವ್ಯಕ್ತಿ ಚಿತ್ರಣ)
೮) ಸತ್ಯಾರ್ಥಿ (ವ್ಯಕ್ತಿ ಚಿತ್ರಣ)
೯) ದೇವತಾತ್ಮ (ಹಿಮಾಲಯ ಪ್ರವಾಸವರ್ಣನೆ)
೧೦) ಭಾರತೀಯ ವಿಜ್ಞಾನಿಗಳು ಭಾಗ - ೧
೧೧) ಭಾರತೀಯ ವಿಜ್ಞಾನಿಗಳು ಭಾಗ-೨
೧೨) ಬಾಳಿನ ಗುಟ್ಟು
೧೩) ವಿಚಾರವಾದ
೧೪) ಕೇಶವಸುತ (ವ್ಯಕ್ತಿ ಪರಿಚಯ)
೧೫) ನಾನಾಲಾಲ (ವ್ಯಕ್ತಿ ಪರಿಚಯ)
೧೬) ಭಾರತೀಯ ತತ್ವಜ್ಞಾನದ ಇತಿಹಾಸ (ಮೂಲ ಮರಾಠಿಯಿಂದ ಅನುವಾದ)
೧೭) ಪಂಜಾಬಿ ಕತೆಗಳು (ಅನುವಾದಿತ ಕಥಾಸಂಕಲನ)
೧೮) ಬಿಳಿಯ ಕೊಕ್ಕರೆ (ಅನುವಾದಿತ ಕಥಾ ಸಂಕಲನ)
೧೯) ಮಣ್ಣಿನ ಮನುಷ್ಯ (ಅನುವಾದಿತ ಕಾದಂಬರಿ)
೨೦) ಮಲೆನಾಡಿಗರು (ಅನುವಾದಿತ ಕಾದಂಬರಿ)
೨೧) ವಿಶ್ವದ ಆಖ್ಯಾಯಿಕೆಗಳು (ಕಥಾ ಸಂಕಲನ)
೨೨) ಶ್ಯಾಮರಾವ್ ವಿಠ್ಠಲ ಕಾಯ್ಕಿಣಿ (ಜೀವನ ಪರಿಚಯ)
೨೩) ಥಾಮಸ್ ಎಡಿಸನ್ (ಜೀವನ ಚರಿತ್ರೆ)
೨೪) ಒಲವಿನ ಒಗಟು (ನಾಟಕ)
೨೫) ಕ್ರೌಂಚ ಧ್ವನಿ (ಗೀತ ರೂಪಕಗಳು)
೨೬) ಬರ್ಲಿನ್ ಬಂದಿತು ಗಂಗೆಯ ತಡಿಗೆ (ಅನುವಾದಿತ ಕಾದಂಬರಿ)
೨೭) ಗೋಕರ್ಣದ ಕಥೆ (ಪರಿಚಯ)
೨೮) ಪಾಂಡೇಶ್ವರ ಗಣಪತಿರಾವ್ (ಪರಿಚಯ)
೨೯) ಸ್ವಾತಂತ್ರ್ಯೋತ್ತರ ವಿಚಾರ ಸಾಹಿತ್ಯ
೩೦) ಪ್ರಜ್ಞಾನೇತ್ರದ ಬೆಳಕಿನಲ್ಲಿ (ಶಂಬಾ ಕೃತಿಗಳ ಸಮೀಕ್ಷೆ)
೩೧) ಕಣವಿ ಕಾವ್ಯದೃಷ್ಟಿ (ಸಮೀಕ್ಷೆ)
೩೨) ಕಂಪಿನ ಕರೆ (ಬೇಂದ್ರೆ ಕಾವ್ಯಸಮೀಕ್ಷೆ)
೩೩) ಸಂಪ್ರದಾಯ ಮತ್ತು ಸಣ್ಣ ಕುಟುಂಬ

೩೪) ಕರ್ನಾಟಕದ ಸಿಂಡ್ರೆಲ್ಲಾ (ಉತ್ತರ ಕನ್ನಡದ ಜನ-ಜಾತಿ ಪರಿಚಯ)
೩೫) ವಾಲ್ಮೀಕಿ ತೂಕಡಿಸಿದಾಗ (ವಿಚಾರ-ವಿಮರ್ಶೆ)
೩೬) ವ್ಯಾಸ ಪರ್ವ (ದುರ್ಗಾಭಾಗವತರ ಮರಾಠಿಕೃತಿಯ ಅನುವಾದ)
೩೭) ಕಟಾಕ್ಷ (ವೈಚಾರಿಕ ಲೇಖನಗಳ ಸಂಕಲನ)
೩೮) ಕರ್ಣಾಮೃತ (ರೇಡಿಯೊ ನಾಟಕಗಳು)
೩೯) ಆಕಾಶ ನಾಟಕಗಳು (ರೇಡಿಯೋ ನಾಟಕಗಳು)
೪೦) ನವ ಮಾನತಾವಾದ
೪೧) ನಾಸ್ತಿಕನು ಮತ್ತು ದೇವರು
೪೨) ದಿನಕರ ದೇಸಾಯರ ಕಾವ್ಯ (ಸಮೀಕ್ಷೆ)
೪೩) ಗ್ರೀಕ್ ದಾರ್ಶನಿಕರು
೪೪) ಆರ್ಕೆಷ್ಟ್ರಾ ಮತ್ತು ತಂಬೂರಿ
೪೫) ನವ್ಯದ ನಾಲ್ಕು ನಾಯಕರು (ಕವಿ-ಕಾವ್ಯ ಪರಿಚಯ)
೪೬) ಲೋಕಾಯತ (ಚಾರ್ವಾಕ ದರ್ಶನ)
೪೭) ಮಾನವ್ಯ ಕವಿ (ಸನದಿ ಕಾವ್ಯ ಸಮೀಕ್ಷೆ)
೪೮) ಉತ್ತರಣ (ವಿಷ್ಣು ನಾಯ್ಕರ ಕಾವ್ಯ ಸಮೀಕ್ಷೆ)
೪೯) ಸಮಗ್ರ ಸಂಪುಟ ಭಾಗ-೧
೫೦) ಸಮಗ್ರ ಸಂಪುಟ ಭಾಗ-೨
೫೧) ಸಮಗ್ರ ಸಂಪುಟ ಭಾಗ-೩
೫೨) ಸಮಗ್ರ ಸಂಪುಟ ಭಾಗ-೪
೫೩) ಸಮಗ್ರ ಸಂಪುಟ ಭಾಗ-೫
೫೪) ಸಮಗ್ರ ಸಂಪುಟ ಭಾಗ-೬

**ಇಂಗ್ಲಿಷಿನಲ್ಲಿ**

೫೫) ಶ್ಯಾಮರಾವ್ ವಿಠ್ಠಲ ಕೈಕಿಣಿ

**ಮರಾಠಿಯಲ್ಲಿ**

೫೬) ಕನ್ನಡ ಸಾಹಿತ್ಯಾಚಾ ಇತಿಹಾಸ (ಮುಗಳಿಯವರ ಕನ್ನಡ ಸಾಹಿತ್ಯ ಚರಿತ್ರೆಯ ಮರಾಠಿ ಅನುವಾದ.)
೫೭) ಭಗವಾನ್ ನಿತ್ಯಾನಂದ (ರಮೇಶ ನಾಡಕರ್ಣಿಯವರ ಕನ್ನಡ ಕೃತಿಯ ಮರಾಠಿ ಅನುವಾದ)
೫೮) ಮಾಝೀ ರಸಯಾತ್ರಾ (ಕನ್ನಡದಿಂದ ಮರಾಠಿಗೆ)
(ಮಲ್ಲಿಕಾರ್ಜುನ ಮನಸೂರರ ಆತ್ಮಚರಿತ್ರೆ)
೫೯) ಅಗ್ನಿವರ್ಣ (ಮುಗಳಿಯವರ ಕಾದಂಬರಿಯ ಮರಾಠಿ ಅನುವಾದ).

ಇವುಗಳ ಹೊರತಾಗಿ ನಾಡಿನ ವಿವಿಧ ಪತ್ರಿಕೆಗಳಲ್ಲಿ ಪ್ರಕಟವಾದ ಸಾವಿರಾರು ಅಂಕಣ ಬರಹಗಳೂ ಬಿಡಿ ಲೇಖನಗಳೂ ಸಂಕಲನರೂಪದಲ್ಲಿ ಬರಬೇಕಾಗಿವೆ.



ಮನುಷ್ಯನ ಆಸ್ಥೆಗೆ ಯೋಗ್ಯವಾದುದೆಲ್ಲವೂ, ಮನುಷ್ಯರಾಗಿ ಬಿಚ್ಚಿಕೊಳ್ಳಲು ನಮಗೆ ನೆರವಾಗಬಲ್ಲುದೆಲ್ಲವೂ ಗೌರೀಶ ಸಾಹಿತ್ಯಕ್ಕೆ ಮೂಲವಸ್ತುವಾಗಿವೆ. ಇಲ್ಲಿ ಕೆಲಸ ಮಾಡಿರುವುದು ಅಸಾಧಾರಣ ಧೀಶಕ್ತಿಯ ಸೃಜನಶೀಲ ಮನಸ್ಸೊಂದು ಬದುಕಿನ ಬಗೆಗೆ ತಳೆದ ಬೆರಗುತುಂಬಿದ ಕುತೂಹಲವೇ ಹೊರತು ಶುಷ್ಕ ಪಾಂಡಿತ್ಯಪ್ರಿಯತೆಯಲ್ಲ.

ಕೇವಲ ಬುದ್ಧಿ ಆಗಿದ್ದದ್ದು ಮನಸ್ಸಾಗಿ, ಮನಸ್ಸು ಕೊನೆಯಲ್ಲಿ ಪ್ರಜ್ಞೆಯಾಗಿ ವಿಕಾಸಗೊಳ್ಳಬೇಕು ಎನ್ನುವದರ ಕಡೆಗೆ ಗೌರೀಶ ಸಾಹಿತ್ಯದ ತುಡಿತವಿದೆ ಎನ್ನುವುದೇ ಅದರ ಹೆಚ್ಚುಗಾರಿಕೆ ಆಗಿದೆ. ಮಾನವ ವಿಕಾಸದ ಪರಮೋಚ್ಚ ಮೌಲ್ಯಗಳಾದ 'ಸ್ವಾತಂತ್ರ್ಯ' ಮತ್ತು 'ನೈತಿಕತೆ' ಪ್ರಜ್ಞಾವಂತ ಸ್ಥಿತಿಯಲ್ಲಷ್ಟೇ ಸಾಧ್ಯವೆಂಬುದೇ ಅದರ ಮುಖ್ಯ ನಂಬಿಕೆಯಾಗಿದೆ.

'ಪ್ರಶ್ನೆ' ಸ್ವತಃ ತಾನೇಪ್ರಜ್ಞೆಯಲ್ಲ, ಆದರೆ ಪ್ರಜ್ಞೆಯಸ್ಥಿತಿ ಮುಟ್ಟಿ ಬೆಳಕು ಕಾಣುವ, ತಾನೇ ಬೆಳಕಾಗುವ ಅಭೀಷ್ಟವುಳ್ಳದ್ದು. ಗೌರೀಶ ಸಾಹಿತ್ಯದ ಅಭೀಷ್ಟ ಚಿಂತನವೂ ಅದೇ. ಪ್ರಶ್ನೆಯಿಂದ ಆರಂಭವಾಗುವ ಅದರ ಗುಪ್ತ ಭೂಗತ ತಡಕಾಟ ಪ್ರಜ್ಞೆಯ ಹಂಬಲವಾಗುತ್ತ, ಬೆಳಕಿನ ಹಂಬಲವಾಗುತ್ತ ಉತ್ತರೋತ್ತರವಾಗಿದೆ. ವಿಚಾರವಾದಿಯೊಬ್ಬ, ಶ್ರೇಷ್ಠ ಮಾನವತಾವಾದಿಯಾಗುವ ಈ ಅಂಥ ಬಗೆ ಕನ್ನಡವಲ್ಲಿ ಇನ್ನೊಂದಿಲ್ಲವೆಂದರೆ ಅತಿಶಯೋಕ್ತಿ ಆಗಲಾರದು.

ನಮ್ಮನ್ನು ಕತ್ತಲೆಯಿಂದ ಬೆಳಕಿನೆಡೆ ಒಯ್ಯುವ ಹಂಬಲಹೊತ್ತು ಹುಟ್ಟಿ ಬಂದ ಸಂಗತಿಯೊಂದು ತಾನೇ ಕತ್ತಲಲ್ಲಿ ಅಡಗಿರಬೇಕಾಗಿ ಬಂದಂಥ ದುರಂತ ಇನ್ನೊಂದಿರಲಾರದು ಎನ್ನುವುದನ್ನು ಒಪ್ಪಿಕೊಂಡರೆ, ಈ 'ಪ್ರಕಾಶನ'ದ ಪ್ರಚಂಡ ಜವಾಬ್ದಾರಿಯ ನಿಜವಾದ ಮಹತ್ವ ನಮಗೆ ಹೊಳೆಯಬಹುದು.

– ಯಶವಂತ ಚಿತ್ತಾಲ